

ಸೊಗಸಿನ ಓದು

# ಏಳನೆಯ ಪುಸ್ತಕ

# ಸಾಹಿತ್ಯಪ್ರವೇಶ ೭



# ಪ್ರಕಾಶಕರ ನಿವೇದನೆ

ಮುಂಬಯಿ ಕರ್ನಾಟಕದಲ್ಲಿ ಹೊಸ ಶಿಕ್ಷಣಕ್ರಮ, ಹೊ: ಇವುಗಳನ್ನನುಸರಿಸಿ ಬರೆದ ಕ್ರಮಿಕ ಪುಸ್ತಕಮಾಲೆಯ ಕೊರತೆಯಿರುವ ಈ ಕಾಲದಲ್ಲಿ ನಾವು ಶಿಕ್ಷಣಶಾಸ್ತ್ರ, ಶಿಕ್ಷಣಕಲೆ, ಭಾಷೆ ಇವುಗಳಲ್ಲಿ ನಿಪುಣರಾದ ನುರಿತ ಲೇಖಕರಿಂದ "**ಸೊಗಸಿನ ಓದು**" ಎಂಬ ಕ್ರಮಿಕ ಪುಸ್ತಕಮಾಲೆಯನ್ನು ಬರೆಯಿಸಿ ಪ್ರಕಟಿಸುವ ಸಾಹಸವನ್ನು ಕೈಕೊಂಡಿದ್ದೇವೆ.

ಈ "ಸೊಗಸಿನ ಓದಿ"ನ ಮಾಲೆಯನ್ನು ಸಿದ್ಧಪಡಿಸಿ ಪ್ರಕಟಿಸುವಲ್ಲಿ ನಾವು ಕೆಳಗೆ ಹೇಳುವ ದೃಷ್ಟಿಗಳನ್ನು ಇಟ್ಟುಕೊಂಡಿದ್ದೇವೆ :—

೧. ಪುಸ್ತಕಗಳು ವಿಷಯ, ಪದ್ಧತಿ, ಭಾಷೆ, ಚಿತ್ರ ಮುಂತಾದ ಎಲ್ಲ ಸಂಗತಿಗಳಲ್ಲಿ ಮೇಲುತರಗತಿಯವಾಗಿರಬೇಕು ; ೨. ನಮ್ಮ ನಾಡಿನ ಶಿಕ್ಷಣಜ್ಞರು, ವಿದ್ವಾಂಸರು, ಕವಿಗಳು ಇವರ ಶಿಕ್ಷಣಜ್ಞಾನ, ವಿದ್ವತ್ತೆ ಮತ್ತು ಕವಿತ್ವ ಇವುಗಳ ಲಾಭವು ನಮ್ಮ ನಾಡಿನ ಮಕ್ಕಳಿಗೆ ಒದಗಬೇಕು ; ೩. ನಮ್ಮ ನಾಡಿನ ಚಿತ್ರಕಾರರು, ಪಡಿಯಚ್ಚುಗಾರರು, ಕಾಗದ ಕಾರಖಾನೆಯವರು, ಮುದ್ರಣಾಲಯಗಳ ಒಡೆಯರು ಇವರ ಸಹಕಾರದಿಂದಲೇ ನಮ್ಮ ಕೆಲಸವು ಈಡೇರಬೇಕು. ( ಈ ಸಂದರ್ಭದಲ್ಲಿ ನಮ್ಮ ಮಾಲೆಯ ಚಿತ್ರಕಾರರು, ಪಡಿಯಚ್ಚುಗಾರರು ಇವರು ಕರ್ನಾಟಕದವರೇ ಎಂಬುದನ್ನೂ ನಮ್ಮ ಮಾಲೆಗೆ ಉಪಯೋಗಿಸಿದ ಕಾಗದವು ಕರ್ನಾಟಕದ್ದೇ ಎಂಬುದನ್ನೂ ನಮ್ಮ ಪುಸ್ತಕಮಾಲೆಯನ್ನು ಮುದ್ರಿಸಿದ ಮುದ್ರಣಾಲಯವು ನಮ್ಮ ನಾಡಿನದೇ ಎಂಬುದನ್ನೂ ವಿನಯಪೂರ್ವಕವಾಗಿ ಹೇಳುತ್ತೇವೆ. ) ೪. ಮೇಲೆ ಹೇಳಿದ ಸಂಗತಿಗಳಿಂದ ನಮ್ಮ ನಾಡಿನ ಬಾಲಕರ ಹಿತವು ಸಾಧಿಸಬೇಕು.

**( ಹೊದಿಕೆಯ ೩ ನೆಯ ಪುಟದಲ್ಲಿ ಮುಂದುವರಿದಿದೆ. )**

# ಸೊಗಸಿನ ಓದು
# ಏಳನೆಯ ಪುಸ್ತಕ

ಸಂಪಾದಕ ಮಂಡಲ :

ರಾವಸಾಹೇಬ ಮುಗದಲ ವೆಂಕಟರಾಯರು, ಬಿ. ಎ.
ಪ್ರೊ. ಸ. ಸ. ಮಾಳವಾಡ, ಎಂ. ಎ.
ಪಂಡಿತ ಮು. ಪ್ರ. ಪೂಜಾರ
ಶ್ರೀ. ಸಾಲಿ ರಾಮಚಂದ್ರರಾಯರು, ಬಿ. ಎ.
ಪ್ರೊ. ಬಿ. ಎಮ್. ಮೀಮಾಂಸಿ, ಬಿ. ಎ., ಬಿ.ಟಿ.
ಶ್ರೀ. ವಾ. ರಾ. ಮುಧೋಳಕರ, ಬಿ.ಎ., ಬಿ.ಟಿ.

ಪ್ರಕಾಶಕರು :

ದಿ ಸ್ಟೂಡಂಟ್ಸ್ ಓನ್ ಬುಕ್-ಡಿಪೊ,
ಗಾಂಧಿಚೌಕ, ಧಾರವಾಡ

೧೯೪೨ ಬೆಲೆ : ೦-೧೪-೦

# ಅರಿಕೆ

ಬಾಲಕರ ಮನಸ್ಸನ್ನು ವಿಕಾಸಗೊಳಿಸಿ ಅವರನ್ನು ಒಳ್ಳೆಯ ನಾಗರಿಕರನ್ನು ಮಾಡಬೇಕೆಂಬ ಶಿಕ್ಷಣದ ಉದ್ದೇಶವನ್ನು ಈಡೇರಿಸುವುದಕ್ಕಾಗಿ ಬಾಲಕರ ಅಭ್ಯಾಸ-ಕ್ರಮ, ಕಲಿಸುವ ಪದ್ಧತಿ ಇವುಗಳಲ್ಲಿ ಶಿಕ್ಷಣಶಾಸ್ತ್ರಜ್ಞರು ಕಾಲಕಾಲಕ್ಕೆ ಬದಲಾವಣೆ ಮಾಡುತ್ತ ಬಂದಿದ್ದಾರೆ. ಬಾಲಕರಿಗೆ ಸಾಲೆಗಳಲ್ಲಿ ಹಲವು ವಿಷಯಗಳನ್ನು ಕಲಿಸಿಬಿಟ್ಟರೆ ತೀರಿತೆಂಬ ಹಳೆಯ ವಿಚಾರದ ಕಾಲವು ಹೋಯಿತು. ಬಾಲಕರಲ್ಲಿ ತಕ್ಕ ಸಂಸ್ಕಾರ, ತಕ್ಕ ಅಭಿರುಚಿ, ಜಿಜ್ಞಾಸೆ ಇವನ್ನು ಹುಟ್ಟಿಸುವುದು ಈಗಿನ ಶಿಕ್ಷಣಕ್ರಮದ ಉದ್ದೇಶವಾಗಿದೆ. ಈ ಉದ್ದೇಶವನ್ನನುಸರಿಸಿ ಹೊಸ ಪುಸ್ತಕಗಳಾಗಬೇಕೆಂದು ಸರಕಾರದವರು ಪ್ರಕಟಿಸಿದ್ದಾರೆ.

ಶಿಕ್ಷಣಕ್ರಮದ ಉದ್ದೇಶಗಳು ಬದಲಾಗಲು ಹಳೆಯ ಶಿಕ್ಷಣಕ್ರಮ, ವಿಚಾರ ಇವುಗಳಿಗನುಸರಿಸಿ ಬರೆದ ವಿಷಯಸಂಗ್ರಹಪ್ರಧಾನವಾದ ಪುಸ್ತಕಗಳು ಹಿಂದೆ ಬೀಳುವುದೂ ಅವುಗಳ ಸ್ಥಳವನ್ನು ಮನೋರಂಜನೆಯ ಮೂಲಕ ಬಾಲಕರಲ್ಲಿ ಸುಸಂಸ್ಕಾರ, ಸದಭಿರುಚಿ, ತೀವ್ರ ಕುತೂಹಲ ಇವನ್ನುಂಟುಮಾಡುವ ಹೊಸ ಪುಸ್ತಕಗಳು ಆಕ್ರಮಿಸಬೇಕಾದುದೂ ಅಪರಿಹಾರ್ಯವು, ಮತ್ತು ಆವಶ್ಯಕವು. "ಸೊಗಸಿನ ಓದು" ಎಂಬ ನಮ್ಮ ಕ್ರಮಿಕ ಪುಸ್ತಕಮಾಲೆಯು ಹೊಸ ಯುಗಕ್ಕೆ ಅನುಗುಣ-ವಾಗುವಂತೆ ಈ ಬಗೆಯಿಂದಲೇ ತಲೆದೋರಿದೆ ; ಮತ್ತು ಇದು ರಚಿತವಾಗುವಾಗ ಮುಂಬಯಿ ಸರಕಾರದ ಪ್ರಾಂತಿಕ ಪಠ್ಯಪುಸ್ತಕ ಸಮಿತಿಯವರು ಮಾಡಿದ ಸೂಚನೆ-ಗಳು ಅನುಲಕ್ಷಿಸಲ್ಪಟ್ಟಿವೆ.

"ಸೊಗಸಿನ ಓದು" ಕೆಳಗೆ ಹೇಳಿದ ಕೆಲವು ವೈಶಿಷ್ಟ್ಯಗಳನ್ನೊಳಗೊಂಡಿದೆ:—

೧. ಪಾಠಗಳು ವಿಷಯಪ್ರಧಾನವಾಗಿ ಸಾಗದೆ ಭಾಷಾದೃಷ್ಟಿಪ್ರಧಾನವಾಗಿಯೂ ಮನೋರಂಜನಪ್ರಧಾನವಾಗಿಯೂ ಸಾಗಿವೆ. ಅದಕ್ಕಾಗಿ ಅವುಗಳ ಭಾಷೆ ಚಿತ್ತಾಕರ್ಷಕ-ವಾಗಿ ಇರುವುದಲ್ಲದೆ ಮೇಲಾದುದಾಗಿಯೂ ಇದೆ; ಇದಲ್ಲದೆ ಬಾಲಕರ ಅನುಭವಗಳು ವಿಸ್ತೃತವಾಗಬೇಕು, ಅವರ ವಿಚಾರಶಕ್ತಿ ಪ್ರಚೋದಿತವಾಗಬೇಕು ಇವೇ ಮೊದ-ಲಾದ ಉದ್ದೇಶಗಳಿಂದ, ಕಥೆ ಚರಿತ್ರ ಇತಿಹಾಸ ಶಾಸ್ತ್ರ ಜನಜೀವನ ಮುಂತಾದ ಬಗೆಬಗೆಯ ವಿಷಯಗಳ ಆಯ್ಕೆ, ಅವುಗಳ ತರಗತಿಗನುಗುಣವಾದ ಸಂವಿಧಾನ ಇವುಗಳಿಂದ ಪಾಠಗಳು ಉಚಿತವಾಗುವಂತೆ ಪ್ರಯತ್ನಿಸಲಾಗಿದೆ.

೨. ಆರಂಭದಲ್ಲಿ ಶಬ್ದಗಳ ಪುನರಾವೃತ್ತಿ, ಹೊಸ ಕಠಿಣ ಶಬ್ದಗಳನ್ನು ಹೆಚ್ಚಿಗೆ ತಾರದಿರುವುದು ಮೊದಲಾದ ಉಪಾಯಗಳಿಂದ ವಾಚನವು ಸರಳವಾಗಿ ಎಂದರೆ ತಡೆಗಳಿ-ಲ್ಲದೆ ಸಾಗಬೇಕೆಂಬ ಉದ್ದೇಶದಿಂದ ಭಾಷೆ ಬಾಲಕರಿಗೆ ಪರಿಚಿತವಾದುದೂ ವಯೋನು-ಗುಣವಾಗಿ ತರಗತಿಹೊಂದಿದ್ದೂ ಆಗಿದೆ. ಭಾಷೆಯಲ್ಲಿ ಅಖಿಲ ಕರ್ನಾಟಕೀಯತೆ ಪ್ರಾಂತೀಯತೆ ಇವುಗಳ ಬಲಾಬಲ, ಸ್ಥಾನಾಸ್ಥಾನ ಇವುಗಳನ್ನು ಆಳವಾಗಿ ಆಲೋಚಿಸಿ ಬಾಲಕರಿಗೆ ತೊಂದರೆಯಾಗಬಾರದೆಂಬ ದೃಷ್ಟಿಯೇ ಮುಖ್ಯವಾಗಿ ಕಾದುಕೊಳ್ಳಲಾಗಿದೆ.

೩. ಹೊಸ ಶಿಕ್ಷಣಕ್ರಮ, ಹೊಸ ಪದ್ಧತಿ ಇವುಗಳಿಗನುಸಾರವಾಗಿ ಈ ಮಾಲೆಯ ಸದುಪಯೋಗವನ್ನು ಮಾಡಿಕೊಳ್ಳುವುದು ಕುಶಲರೂ ಭಾವಿರಾಷ್ಟ್ರದ ಪ್ರಗತಿಯ ಹೊಣೆಯನ್ನು ಹೊತ್ತವರೂ ಆದ ನಮ್ಮ ನಾಡಿನ ಶಿಕ್ಷಕರನ್ನೇ ಅವಲಂಬಿಸಿದೆ. ಶಿಕ್ಷಕರು ಈಚೆಗೆ ಹೊಸ ಶಿಕ್ಷಣಕ್ರಮದಂತೆ ಟ್ರೇಂಡರಾಗುತ್ತ ನಡೆದುದೂ ಅಂಟ್ರೇಂಡರ ಸಂಖ್ಯೆಯನ್ನು ಪೂರ್ಣ ಕಡಿಮೆಮಾಡಬೇಕೆಂಬ ಸರಕಾರದ ಧೋರಣೆಯೂ ಈ ಸಂದರ್ಭದಲ್ಲಿ ಬಹಳ ಅನುಕೂಲ ಸಂಗತಿಗಳಾಗಿವೆ. ಆದರೂ ಹೊಸ ಶಿಕ್ಷಕರಿಗೆ ದಿಗ್ದರ್ಶನಾರ್ಥವಾಗಿ ಪ್ರತಿಪಾಠದ ಕೊನೆಯಲ್ಲಿ ಆಧುನಿಕ ಪದ್ಧತಿಯ ಬಗೆಬಗೆಯ ಅಭ್ಯಸನಗಳು ಕೊಡಲ್ಪಟ್ಟಿವೆ. ಆ ಅಭ್ಯಸನಗಳಲ್ಲಿ ವಿಷಯ, ಬುದ್ಧಿಪ್ರಚೋದನೆ, ಭಾಷೆ, ವ್ಯಾಕರಣ, ನಿಬಂಧ ( ವಿಚಾರಗಳನ್ನು ತಮ್ಮ ಭಾಷೆಯಲ್ಲಿ ಪ್ರಕಟಿಸುವುದು ) ಮುಂತಾದ ಎಲ್ಲವೂ ಸಮಾವಿಷ್ಟವಾಗಿವೆ. ಟಿಪ್ಪಣಿಗಳನ್ನು ಉಪಯೋಗಮಾಡಿಕೊಳ್ಳು-ವಾಗ ಆರಂಭದಲ್ಲಿ ಬಾಲಕರಿಗೆ ಶಿಕ್ಷಕರು ನೆರವಾಗಬೇಕೆಂದು ನಾವು ಆಶಿಸಿದ್ದೇವೆ.

೪. ಚಿತ್ರಗಳು ಸುಂದರವೂ ಪಾಠಕ್ಕೆ ಉಪಯುಕ್ತವೂ ಆಗಿರದಿದ್ದರೆ ಅವು ಇರುವುದಕ್ಕಿಂತ ಇಲ್ಲದಿರುವುದೇ ಮೇಲೆಂಬ ಸಂಗತಿ ಇಲ್ಲಿ ಚೆನ್ನಾಗಿ ಗಮನಿಸಿದೆ.

೫. ಕವಿತೆಗಳು ಭಾಷೆಯಿಂದಾಗಲಿ ಕಲ್ಪನೆಯಿಂದಾಗಲಿ ಬಾಲಕರಿಗೆ ನಿಲುಕ-ದಂತಾದರೆ ಕವಿತಾಪಾಠದ ಮುಖ್ಯೋದ್ದೇಶಕ್ಕೇ ಭಂಗಬರುವುದೆಂದು ಸಾಧ್ಯವಾದ ಮಟ್ಟಿಗೂ ಬಾಲಕರಿಗೆ ಪ್ರಿಯವಾಗುವಂತಹ ಆಧುನಿಕ ಒಳ್ಳೆಯ ಕವಿಗಳ ಕವಿತೆ-ಗಳನ್ನೇ ಆಯ್ದುಕೊಳ್ಳಲು ಪ್ರಯತ್ನಿಸಿದೆ.

೬. ಮುಖ್ಯವಾಗಿ ಬಾಲಕರ ಸಂಕುಚಿತ ವೃತ್ತಿಗಳನ್ನು ಹೋಗಲಾಡಿಸಿ ನಮ್ಮ ನಾಡು, ನಮ್ಮ ದೇಶ, ನಮ್ಮ ನಾಡು ನಮ್ಮ ದೇಶ ಇವುಗಳಿಗಾಗಿ ನಾವು ಎಂಬ ಬುದ್ಧಿ-ವೈಶಾಲ್ಯವನ್ನು ಬಾಲಕರಲ್ಲಿ ಉಂಟುಮಾಡಿ ಅವರಲ್ಲಿ ಉತ್ತಮ ನಾಗರಿಕತೆಯ ಬೀಜ-ಗಳನ್ನು ಬಿತ್ತುವುದು "ಸೊಗಸಿನ ಓದಿ" ನ ಮುಖ್ಯ ಧ್ಯೇಯವಾಗಿದೆ.

೭. ಬಾಲಕರಲ್ಲಿ ವಾಚನಾಭಿರುಚಿಯೊಡನೆ ಸಾಹಿತ್ಯಾಭಿರುಚಿಯನ್ನೂ ಉಂಟು ಮಾಡಬೇಕೆಂಬ ಉದ್ದೇಶದಿಂದ ಐದನೆಯ ಪುಸ್ತಕದಿಂದ ಆರಂಭಿಸಿ ಈ ಮಾಲೆಯಲ್ಲಿ ಕರ್ನಾಟಕದ ಸಾಹಿತ್ಯಕಾರರ ಪರಿಚಯವೂ, ವಿವಿಧ ಶೈಲಿಗಳ ಅವರ ಕೃತಿಗಳೂ ಸಾಹಿತ್ಯದ ಬೇರೆ ಬೇರೆ ವಿಧಗಳ ಮಾದರಿಗಳೂ ಸೇರಿಸಲ್ಪಟ್ಟಿವೆ. ಈ ಕೃತಿಗಳನ್ನು ಆಯ್ದುಕೊಳ್ಳುವಾಗ ಕರ್ನಾಟಕದ ಬೇರೆ ಬೇರೆ ಭಾಗಗಳ ಹೆಸರಾದ ಲೇಖಕರ ಕೃತಿ-ಗಳನ್ನೂ ಬೇರೆ ಬೇರೆ ಕಾಲಗಳ ಭಾಷೆಯ ಸ್ಥಿತಿಯನ್ನು ತೋರ್ಪಡಿಸುವ ಗ್ರಂಥ-ಭಾಗಗಳನ್ನೂ ಪೋಣಿಸುವುದಕ್ಕೆ ಹವಣಿಸಲಾಗಿದೆ.

ಈ "ಸೊಗಸಿನ ಓದು" ನಿಜವಾಗಿ ಬಾಲಕರ ಸೊಗಸಿಗಾಗಿ ಆದೀತೆಂದೂ ಇದರಿಂದ ನಮ್ಮ ನಾಡಿನ ಮಕ್ಕಳ ಹಿತವು ಕೆಲಮಟ್ಟಿಗಾದರೂ ಸಾಧಿಸೀತೆಂದೂ

ನಮ್ಮ ಸಾಲೆಗಳ ಶಿಕ್ಷಣದ ಮಟ್ಟವು ಇನ್ನಿಷ್ಟು ಏರೀತೆಂದೂ ಹಾರೈಸಿದ್ದೇವೆ. ಈ ನಮ್ಮ ಸಾಹಿತ್ಯಸಂಗ್ರಹದಲ್ಲಿ ತಮ್ಮ ಕೃತಿಗಳನ್ನು ಸೇರಿಸಲು ಅನುಮತಿಯಿತ್ತ ಕವಿಗಳಿಗೂ ಲೇಖಕರಿಗೂ ನಾವು ಕೃತಜ್ಞರಾಗಿದ್ದೇವೆ. ಸೊಗಸಿನ ಓದಿನ ಮಾಲೆ-ಯನ್ನು ಪ್ರಸಿದ್ಧಪಡಿಸುವಲ್ಲಿ ನಮಗೆ ನೆರವಾದ ಶಿಕ್ಷಣಾಧಿಕಾರಿಗಳಿಗೆ, ಇಷ್ಟಮಿತ್ರರಿಗೆ ನಾವು ಮನಃಪೂರ್ವಕವಾಗಿ ವಂದನೆಗಳನ್ನು ಅರ್ಪಿಸುತ್ತೇವೆ.

ಧಾರವಾಡ
ತಾ॥ ೧-೯-೧೯೪೨

—ಸಂಪಾದಕರು

# ಪರಿವಿಡಿ

# ಸೊಗಸಿನ ಓದು

## ಏಳನೆಯ ಪುಸ್ತಕ

---

### ೧. ಪಂಪಾಯಾತ್ರೆ

[ ವಿ. ಸೀತಾರಾಮಯ್ಯನವರ 'ಪಂಪಾಯಾತ್ರೆ' ಎಂಬ ಗ್ರಂಥದ ಭಾಗವಿದು. ಲೇಖಕರು ಪ್ರಸಿದ್ಧ ಕವಿಗಳೂ ವಿಮರ್ಶಕರೂ ಆಗಿದ್ದಾರೆ. ಮೈಸೂರು ವಿದ್ಯಾಪೀಠದಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದು ಅನೇಕ ಗ್ರಂಥಗಳ, ಬರೆಹಗಳ ಮೂಲಕ ಅಖಿಲ ಕನ್ನಡನಾಡಿಗೆ ಚೆನ್ನಾಗಿ ಪರಿಚಿತ-ರಾಗಿದ್ದಾರೆ. 'ಪಂಪಾಯಾತ್ರೆ' ಹಂಪೆಯ ಪ್ರವಾಸದ ಒಂದು ವರ್ಣನೆ. ಇಲ್ಲಿ ಲೇಖಕರು ಒಂದು ಆತ್ಮೀಯವಾದ ರೀತಿಯಲ್ಲಿ ಆ ಪ್ರವಾಸವರ್ಣನೆ-ಯನ್ನು ಕೊಟ್ಟಿದ್ದಾರೆ. ಲೇಖಕರ ಹಾಗೂ ಅವರ ಸಂಗಡಿಗರ ರಮ್ಯವಾದ ಹಾಗೂ ಹಾಸ್ಯದ ಅನುಭವಗಳನ್ನು ಮಾರ್ಮಿಕವಾಗಿ ಬರೆದಿದ್ದಾರೆ. ಈ ಲೇಖಕರ ರಸವತ್ತಾದ ಬರೆವಣಿಗೆಯ ಮಾದರಿಯನ್ನು ಇಲ್ಲಿ ಕಾಣ-ಬಹುದು. ]

ಹಂಪೆಯು ಪುಣ್ಯಕ್ಷೇತ್ರ. ಇಂಥಾ ಪುಣ್ಯಸ್ಥಳಗಳಲ್ಲಿ ಇಷ್ಟು ಚೇಳು ಮೊಂಡರಕಪ್ಪೆಗಳು ಏಕಿವೆಯೋ ಆ ಪಂಪಾಪತಿಗೇ ಗೊತ್ತು. ನೊಳದುದ್ದ ಮೊಂಡರಕಪ್ಪೆ, ಗೇಣುದ್ದ ಚೇಳುಗಳೇ? ಈ ಜನರಿಗೆ ಭಯವೇ ಇಲ್ಲವೇನೊ! ಅವರಿಗಂತೂ ಅದು ಸಾಮಾನ್ಯವಾಗಿಹೋಗಿದೆ. ಹೊಸದಾಗಿ ಅಲ್ಲಿಗೆ ಆ ದಿನ ತಾನೆ ಹೋಗಿದ್ದ ನಮಗೆ ಮೈಯಲ್ಲಿ ಬೈರಿಗೆ ಹಿಡಿದಂತೆ ಆಗಿತ್ತು. "ಏಕಪ್ಪ ಇಲ್ಲಿಗೆ ಬಂದೆವು? ಕಾಮಲಾಪುರದ ಬಂಗಲೆಯಲ್ಲಿ ಇಳಿದುಕೊಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ಅನಿಷ್ಟ-ವೇನಾದರೂ ಸಂಭವಿಸಿದರೆ ಗತಿಯೇನು? ಇವನನ್ನು ಬೇರೆ ಜೊತೆಯಲ್ಲಿ

ಕರೆದುಕೊಂಡು ಬಂದೆವಲ್ಲ," ಎಂದು ನನ್ನ ಜೊತೆಯವರು ಪಶ್ಚಾತ್ತಾಪಪಡುವುದಕ್ಕೆ ಆರಂಭಿಸಿದ್ದರು. ಅಲ್ಲಿದ್ದವರು, " ಭಯವಿಲ್ಲ ಸ್ವಾಮಿ, ಒಂದೇ ಮನಸ್ಸಿನಲ್ಲಿ ಮಲಗಿಕೊಳ್ಳಿ, ಪಂಪಪ್ಪನ್ನ ನಂಬಿ ನಿದ್ದೆಹೋಗಿ, ಅವೇನು ಮಾಡುತಾವೆ ? " ಎಂದರು. ನಮಗೆ ಧೈರ್ಯವಿಲ್ಲ, ಜೀವದಲ್ಲಿ ಜೀವವಿಲ್ಲ. ಇಳಿದುಕೊಂಡಿದ್ದ ಚಿಕ್ಕಮನೆಯಿಂದ ಹಾಸುಗೆ ಬಟ್ಟೆಗಳನ್ನೂ ಕೋಟುಗಳ ಜೇಬುಗಳನ್ನೂ ರುಮಾಲಗಳ ಸಂದಿಪದರುಗಳನ್ನೂ ಮಡಿಪೆಟ್ಟಿಗೆ ಪಾರಾಯಣ ಪುಸ್ತಕಗಳ ಚೀಲವನ್ನೂ ಒಂದೊಂದಾಗಿ ಕೊಡವಿ, ಒದರಿ, ಚೇಳು-ಹಾವುಗಳಾವುವೂ ಇಲ್ಲವೆಂದು ನಿಶ್ಚಯಮಾಡಿಕೊಂಡು ಎಲ್ಲವನ್ನೂ ಹೊತ್ತುಕೊಂಡು ದೇವಸ್ಥಾನದ ಒಳಮಂಟಪಕ್ಕೆ ತೆಗೆದುಕೊಂಡು ಹೋಗಿ ದೊಡ್ಡದೊಂದು ದೀಪದ ಬೆಳಕಿನಲ್ಲಿ ಒಬ್ಬರು ಕಾವಲು ಕುಳಿತೆವು. ಎದೆಯಲ್ಲಿ ಪಕಪಕ ಎಂದು ಭಯ. ದೀಪವಿದೆ, ಪಂಪಾಪತಿಯ ಅತಿನಿಕಟ ಸಾನ್ನಿಧ್ಯದಲ್ಲಿದೇವೆ, ಅವನು ನಡೆಸಿದಂತಾಗಲಿ ಎಂದು ಸಮಾಧಾನವನ್ನೂ ಧೈರ್ಯವನ್ನೂ ಹೇಳಿಕೊಂಡು ಮಲಗಬಾರದೇ ? ಊಂ ಹುಂ, ಬಾಯಿ ಧೈರ್ಯ ಹೇಳುತ್ತಿದ್ದರೂ ಮನಸ್ಸು ಕೇಳಬೇಕಲ್ಲ. ಎಲ್ಲರೂ ಊಟಮಾಡಿ ಹಾಸುಗೆಗಳನ್ನು ಒಬ್ಬರ ಪಕ್ಕದಲ್ಲಿ ಒಬ್ಬರು ಒತ್ತಾಗಿ ಹಾಸಿ ಮಲಗಿಕೊಂಡೆವು. ನಡುನಡುವೆ ಹೆಚ್ಚಾಗಿ ಜಾಗ ಬಿಡಕೂಡದೆಂದು ಕರಾರು ನಡೆಯಿತು. ಒಪ್ಪಂದದ ಮೇರೆಗೆ ಒತ್ತೊತ್ತಾಗಿ ಮಲಗಿದೆವು. ನಮ್ಮ ಐವರ ತಲೆ ಭಾಗಗಳಿಗೆ ನಡುವೆ ದೀಪವೊಂದು ಉರಿಯುತ್ತಿತ್ತು. ಅದು ಹಾಗೆಯೇ ರಾತ್ರಿಯೆಲ್ಲ ಉರಿಯುತ್ತಿರಬೇಕೆಂದು ನಿರ್ಣೀತವಾಗಿತ್ತು. ಪಂಪಾಪತಿ ವಿರೂಪಾಕ್ಷೇಶ್ವರನ ದಿವ್ಯಸನ್ನಿಧಿಯಲ್ಲಿ ಕೂಡ ಅಷ್ಟು ಪ್ರಕಾಶಮಾನವಾದ 'ಅಖಂಡ' ದೀಪವಿತ್ತೋ ಇಲ್ಲವೋ ತಿಳಿಯದು. ಮೊದಲೆ ಎಚ್ಚರದಿಂದ ಇರಬೇಕೆಂದೂ ಅಕಸ್ಮಾತ್ ಅನಿಷ್ಟ ಸಂಭವಿಸಿದರೆ ಏನು ಮಾಡಬೇಕೆಂದೂ ನಾವಂತೂ ಷರತ್ತುಗಳನ್ನು ಮಾಡಿಕೊಂಡೇ ಇದ್ದೆವಲ್ಲ. ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ಕದಲುಮದಲದೆ, ಮುತ್ತಿಬರುವ ವಿಷಪ್ರಾಣಿಗಳ ಯೋಚನೆಯನ್ನೂ ಮನಸ್ಸಿನಿಂದ ಸರ್ವಪ್ರಯತ್ನದಿಂದಲೂ ದೂರಮಾಡುತ್ತ ಸುಮಾರು ಕಾಲುಗಂಟೆಯ ಕಾಲ ಹಾಗೆಯೇ ಕಳೆದೆವು.

ತಟ್ಟನೆ ಮೂರ್ತಿಗಳು ಅಂಬಿನಂತೆ ಮೇಲಕ್ಕೆಗರಿ ನಿಂತು ಷರಟು ಪಂಜೆ-ಗಳನ್ನು ಕೊಡವಿಕೊಂಡರು. ಹಾಸುಗೆ ಬಟ್ಟೆಗಳನ್ನು ಕಾಲಿಂದ ಒದ್ದು ಒದ್ದು, ಚೆಲ್ಲಾಡಿ ನಮ್ಮ ಕಡೆ ಬಂದು ಎಲ್ಲರನ್ನೂ ಎಬ್ಬಿಸಿಬಿಟ್ಟರು. "ಏಳ್ರಿ, ಏನೋ ಮೇಲೆ ಬಿತ್ತು, ಹರಿದುಹೋಯಿತು," ಎಂದರು. ಅಧಿಕಾರಿಯ ಜೋಡಿನ ಸಪ್ಪಳವನ್ನು ಕೇಳಿ, ತೂಕಡಿಸುವ ಗುಮಾಸ್ತರು ಬೆಚ್ಚಿ ಬಿದ್ದು ಏಳುವಂತೆ ಎಲ್ಲರೂ ಎದ್ದು ಬಟ್ಟೆಗಳಿಂದ ದೂರ ಸರಿದು ನಿಂತೆವು. ದೀಪವನ್ನು ಮೇಲೆತ್ತಿ ಒಬ್ಬರು ಹಿಡಿದುಕೊಂಡರು. ನಾವು ಮೂವರು ಸುಮ್ಮನೆ ಕಕ್ಕಾಬಿಕ್ಕಿಯಾಗಿ ನೋಡುತ್ತ ಕಿಂಕರ್ತವ್ಯ-ಮೂಢರಾಗಿ ನಿಂತೆವು. ನನ್ನ ಮೈಗೂದಲು ನಿಮಿರಿ ನಿಂತವು. ಯಜಮಾನರು ಹತ್ತಿರವಿದ್ದ ಒಂದು ಗುಜ್ಜುಗೋಲನ್ನು ಹಿಡಿದುಕೊಂಡು ಬಂದರು. ಅದೇನೋ, ಎಲ್ಲಿ ಹೋಯಿತೋ ಎಂದು ನಾಲ್ಕೂ ಕಡೆ ಹುಡುಕುವುದಕ್ಕೆ ಮೊದಲಾಯಿತು. ಯಾರಿಗೂ ಹಾಸುಗೆಗಳ ಹತ್ತಿರ ಹೋಗಿ ಅವುಗಳನ್ನು ಮುಟ್ಟುವುದಕ್ಕೆ ಮಾತ್ರ ಧೈರ್ಯವಿಲ್ಲ. ಯಜ-ಮಾನರೇ ಮುಂದೆ ಬಂದರು. "ಬೇಡಿ ಸಾರ್, ಸ್ವಲ್ಪ ತಾಳಿ, ಏನೋ-ಹೇಗೋ" ಎಂದು ನಾವು ನಾಲ್ವರೂ ಹೇಳಲು ಅವರು ಹಿಂದೆ ಸರಿದು ನಿಲ್ಲಬೇಕಾಯಿತು. ನಮ್ಮ ಈ ದುಃಸ್ಥಿತಿಯ ಹುಚ್ಚುಸಂಭ್ರಮವನ್ನು ದೂರದಿಂದ ನೋಡಿದ ಬೈರಾಗಿ ಚೆನ್ನಯ್ಯನು ಅಲ್ಲಿಗೆ ಬಂದು ಎಲ್ಲವನ್ನೂ ಹುಡುಕಿದನು. ಎಲ್ಲಿಯೂ ಯಾವುದೂ ಕಾಣಲಿಲ್ಲ. ಹಾಸುಗೆ-ಗಳನ್ನೆಲ್ಲ ಪುನಃ ಕೊಡವಲು, ಕತ್ತಲೆಯಲ್ಲಿ ಜಾಗ್ರತೆ ಜಾಗ್ರತೆಯಾಗಿ ನನ್ನ ಕಡೆಗೇ ಹರಿದು ಕಪ್ಪಗೆ ಬರುತ್ತಿರುವ ಪ್ರಾಣಿಯೊಂದು ಕಾಣಿಸಿತು. ಚೆನ್ನಯ್ಯನು ನೋಡಿದನು. ಚೇಳೂ ಅಲ್ಲ, ಹಾವೂ ಅಲ್ಲ. "ಏನು ಸ್ವಾಮಿ, ನಿಮಗೇಕೆ ಇಷ್ಟು ಗಾಬರಿ? ಜೇಡರ ಹುಳ ಬಂದರೆ ಹೀಗೆ ಹುಚ್ಚುಕುಣಿತ ಶುರು ಮಾಡಿದ್ದೀರಲ್ಲ," ಎಂದು ಚಪ್ಪಾಳೆ ಹೊಡೆದು-ಕೊಂಡು ಮೊಣಕಾಲು ಬಡಿದುಕೊಂಡು ನಗುವುದಕ್ಕೆ ಪ್ರಾರಂಭಿಸಿದನು. ಬೇರೊಂದು ಸಮಯದಲ್ಲಿ ಯಾರಾದರೂ ಈ ರೀತಿ ಮಾತನಾಡಿದ್ದರೆ ಅವರಿಗೆ ಗ್ರಹಚಾರ ಬಿಡಿಸುತ್ತಿದ್ದೆವು. ಇತರರಿಗೆ ಗ್ರಹಚಾರ ಬಿಡಿಸುವ ವಿಷಯದಲ್ಲಿ ನಮ್ಮಲ್ಲಿ ಯಾರಿಗೆ ಯಾರೂ ಕಡಿಮೆಯಾದವರಲ್ಲ. ಆದರೂ

ಬಂದ ಕೋಪವನ್ನು ನುಂಗಿಕೊಂಡು ಅವನ ಜೊತೆಗೆ—ವೀರಾಳುಗಳು—ನಾವೂ ನಗುತ್ತ ನಿಂತೆವು. ರಾಯರು ಇದ್ದವರು, "ಮೂರ್ತಿ, ಒಳ್ಳೆಯ ಕೆಲಸ ಕೊಟ್ಟಿರಿ ಕಾಣ್ರಿ; ಎಂಥ ದಿಗಿಲು ಹಚ್ಚಿಬಿಟ್ಟಿರಿ," ಎಂದರು. ಮೂರ್ತಿಗಳು, "ನಾನೇನು ಸಾರ್ ಮಾಡಲಿ? ಏನೋ ಮೇಲೆ ಬಿತ್ತು; ಎಷ್ಟೋ ಹೊತ್ತು ನೋಡೋಣ ಎಂದು ಸುಮ್ಮನೆ ಇದ್ದೆ; ಮುಲಮುಲ ಎಂದು ಮೈಮೇಲೆ ಹರಿಯಿತು; ಆ ಮೇಲೆ ಇದೇನು ಬಂತಪ್ಪ ಗ್ರಹಚಾರ ಇಲ್ಲಿ ಮಲಗಿದ್ದರೂವೂ ಎಂದುಕೊಂಡ-ವನು ಎದ್ದುಬಿಟ್ಟೆ. ಜೇಡರ ಹುಳು ಆಗೋ ಹೊತ್ತಿಗೆ ಸರಿಹೋಯಿತು! ಇನ್ನೇನಾದರೂ ಆಗಿದ್ದರೆ? ಈ ಹುಳು ತಾನೇ ನೋಡಿ ಸಾರ್, ಅಷ್ಟು ದೊಡ್ಡದನ್ನು ಎಲ್ಲಿಯೂ ನೋಡಿಲ್ಲ ನಾನು," ಎಂದರು. ಯಜ-ಮಾನರು, "ಎಲ್ಲರೂ ಸರಿಯೇ ಬಿಡಿ, ಅಸಹಾಯಶೂರರು. ನಮಗೆಲ್ಲ ಅಷ್ಟು ಧೈರ್ಯ ಇರುವ ಹೊತ್ತಿಗೇ ನಮ್ಮ ದೇಶೋದ್ಧಾರಕಾರ್ಯ ಈ ಗತಿಗೆ ಬಂದದ್ದು," ಇತ್ಯಾದಿಯಾಗಿ ಒಂದು ದೊಡ್ಡ ಉಪನ್ಯಾಸವನ್ನೇ ಕೊಟ್ಟರು. ಇಷ್ಟಾದ ಮೇಲೂ ನಮ್ಮ ಕಷ್ಟ ನಿವಾರಣೆಯಾಗಲಿಲ್ಲ. ನಮ್ಮ ಪಿಂಕಿತನ ದೂರವಾಗಲಿಲ್ಲ.

"ಹಾಸುಗೆಗೀಸುಗೆ ಹಾಗೇ ಇರಲಿ, ಸಾರ್, ನೀವು ಯಾರೂ ಏನು ಬೇಕಾದರೂ ಮಾಡಿಕೊಳ್ಳಿ, ನಾನಂತೂ ಮಲಗಿಕೊಳ್ಳುವುದಿಲ್ಲ." ಎಂದು ವೆಂಕಟೇಶಯ್ಯನವರು ಹೇಳಿದರು.

ಯಜಮಾನರು:— ಇನ್ನೇನು ಮಾಡುತ್ತೀರಿ, ಆದರೆ?

ವೆಂಕಟೇಶಯ್ಯ:— ಹೀಗೆ ಕೂತುಕೊಂಡೋ ನಿಂತುಕೊಂಡೋ ರಾತ್ರಿ ದಬ್ಬುತ್ತೇನೆ.

ರಾಯರು:— ನನಗೂ ಹಾಗೇ ತೋರುತ್ತೆ, ಸಾರ್. ದೇವರು ಗೀವರು ಎಲ್ಲ ಸಾಕು. ಚೇಳಿನ ಕೊಂಡಿಯ ದರುಶನದಿಂದಲೇ ಮುಕ್ತಿ ಬಂದಿತು. ಬೆಳಗಾಗುತ್ತಲು ಇಲ್ಲಿಂದ ಹೊರಟು, ಊರಿಗೆ ಹೋಗಿ ಸೇರಿಕೊಳ್ಳೋಣ. ಇಲ್ಲಿರುವುದಕ್ಕೆ ನನ್ನ ಕೈಲಿ ಸುತರಾಂ ಆಗುವುದಿಲ್ಲ.

ಮಧ್ಯಾಹ್ನ ನೋಡಿದ್ದೇ ಸಾಕು. ಈಗಲೇ ಮೂಟೆ ಕಟ್ಟಿಕೊಂಡು ಹೊರಡು ಅಂದರೂ ನಾನು ಸಿದ್ಧ.

ಆಗ ಸುಮಾರು ನಮ್ಮಲ್ಲಿ ಎಲ್ಲರಿಗೂ ವಿಶೇಷವಾಗಿ ಐವರಲ್ಲಿ ಮೂವರಿಗೆ ಅದೇ ಭಾವನೆ—ಒಳಗೆ ಮನಸ್ಸಿನಲ್ಲಿ. ಆದರೆ "ಇಷ್ಟು ದೂರ ಬಂದು ಪಂಪಾಸರೋವರ, ವಿಠ್ಠಲಸ್ವಾಮಿ ಗುಡಿ ಇವುಗಳನ್ನು ನೋಡಿಕೊಂಡು ಹೋಗದಿದ್ದರೆ ಏನಪ್ಪ" ಎಂದು ಮುಂತಾಗಿ ಮಾತು ಬೆಳೆಯಲು, "ಬೆಳಗಾಗಲಿ, ಯಾವುದೊಂದೂ ತೀರ್ಮಾನ ಮಾಡೋಣ, ಈಗ ಸಮಯ ಚೆನ್ನಾಗಿಲ್ಲ," ಎಂದು ಎಲ್ಲರೂ ಮನಸ್ಸು ಬಿಗಿಹಿಡಿದು ಪುನಃ ಹಾಗೂ ಹೀಗೂ ಧೈರ್ಯಮಾಡಿ ಮಲಗಿಕೊಂಡೆವು. ಭಯದ ತೀವ್ರತೆಯು ಕಡಿಮೆಯಾಗಿ ಅದು ಮರೆತುಹೋಗುವಂತೆ ಏನೇನೋ ಬೇರೆ ಪ್ರಸ್ತಾಪಗಳನ್ನೆತ್ತಿ ಮಾತನಾಡುತ್ತ ಒಬ್ಬೊಬ್ಬರಾಗಿ ನಿದ್ರಾವಶ-ರಾದೆವು. ನಾನು ಕೋಳಾಲಮ್ಮನಿಗೆ ಹರಸಿಕೊಂಡು ನಿರ್ಭಯದಿಂದ ನಿದ್ದೆ ಮಾಡಿದೆ. ಮಧ್ಯಾಹ್ನದ ಸುತ್ತುವಿಕೆಯಿಂದ ಆಯಾಸವಾಗಿದ್ದು-ದರಿಂದ ಎಲ್ಲರಿಗೂ ಚೆನ್ನಾಗಿಯೇ ನಿದ್ದೆಹತ್ತಿತ್ತೆಂದು ಹೇಳಬೇಕು. ಪಂಪಾಪತಿಯ ಅನುಗ್ರಹ ; ಯಾರಿಗೂ ವಿಷಪುಚ್ಛದಂಶನವಾಗಲಿಲ್ಲ !

—ವಿ. ಸೀತಾರಾಮಯ್ಯ.

---

**೧. ಚೇಳಿನ ಕಡಿತವನ್ನು ತಪ್ಪಿಸಿಕೊಳ್ಳಲಿಕ್ಕೆ ಯಾವ ಯಾವ ಮುಂಜಾಗ್ರತೆಗಳನ್ನು ತೆಗೆದುಕೊಳ್ಳಲಾಗಿತ್ತು ? ೨. ಮುಂದೆ ಜೇಡಹುಳು ಹರಿದುಹೋದದ್ದಕ್ಕೆ ಏನು ಗೊಂದಲವೆದ್ದಿತು ? ೩. ಕೊನೆಗೆ ಅಲ್ಲಿಯೇ ಧೈರ್ಯಮಾಡಿ ಹೇಗೆ ನಿದ್ರೆ ಹೊಂದಿದರು ? ೪. ವಿಷಪುಚ್ಛದಂಶನ, ಕೊಡವಿ, ಸುತರಾಂ, ಪಿರಿಕಿತನ, ಬೈರಿಗೆ, ಅಖಂಡದೀಪ ಈ ಶಬ್ದಗಳ ಅರ್ಥವನ್ನು ಶಬ್ದಕೋಶದಲ್ಲಿ ಹುಡುಕಿ ಹೇಳಿರಿ. ೫. ನೀವು ಮಾಡಿದ ಪ್ರವಾಸವನು ಈ ರೀತಿಯಾಗಿ ನಗಿಸುವಂತೆ ಎರಡು ಮೂರು ವಾಕ್ಯವೃಂದಗಳಲ್ಲಿ ಬರೆಯಿರಿ.**

---

# ೨. ಮಹಾವೀರಸ್ವಾಮಿ

[ ತೀರ್ಥಂಕರರ ಅವತಾರವನ್ನು ಜೈನರು ವರ್ಣಿಸುವ ರೀತಿ ಈ ಪಾಠದ ಆರಂಭದಲ್ಲಿ ಹೇಳಿದೆ. ಅವರು ಪರಿಶುದ್ಧರೂ ಶ್ರೀಮಂತರೂ ಆದ ದಂಪತಿಗಳ ಹೊಟ್ಟೆಯಲ್ಲಿ ಜನಿಸುವರು. ಆ ದಂಪತಿಗಳಿಗೆ ಅವರ ಕನಸು ಆ ಮಹಾಪುರುಷನ ಜನನವನ್ನು ಸೂಚಿಸುವದು. ಗರ್ಭಿಣಿಗೆ ವಿರಕ್ತಿ, ಜ್ಞಾನದಲ್ಲಿ ಆಸಕ್ತಿ, ಪವಿತ್ರತೆ ಮುಂತಾದ ಲಕ್ಷಣಗಳು ತಲೆದೋರುವವು. ತೀರ್ಥಂಕರನಾಗುವ ಮಹಾಪುರುಷನು ಸಂಸಾರದಲ್ಲಿ ತೊಡಗದೆ ಮನೆ-ಮಾರು ತೊರೆದು ಹೊರಡುವದನ್ನು ನಿಷ್ಕ್ರಮಣ (=ಹೊರಹೊರಡುವದು) ಎಂದೆನ್ನುವರು. ಜ್ಞಾನಿಯಾದ ಸಾಧುಸಂನ್ಯಾಸಿ ಊರೊಳಗೆ ಬರುವಾಗ ಎಲ್ಲ ಜೈನ ಶ್ರಾವಕರು ಆತನ ಭಿಕ್ಷೆಗಾಗಿ ಮಿಷ್ಟಾನ್ನಗಳನ್ನು ಮಾಡಿಕೊಂಡು ತಮ್ಮ ತಮ್ಮ ಮನೆಯ ಬಾಗಿಲಲ್ಲಿ ನಿಲ್ಲುವ ವಾಡಿಕೆಯುಂಟು. ಸಾಧು ತನಗೆ ಇಷ್ಟ ಬಂದವರ ಆಹಾರವನ್ನು ಸ್ವೀಕರಿಸುವನು. ಆತನು ತಮ್ಮ ಆಹಾರವನ್ನು ಸ್ವೀಕರಿಸಿದರೆ ತಾವು ಧನ್ಯರೆಂದು ಅವರು ಭಾವಿಸುವರು. ]

ಒಂದು ದಿನ ದಿಕ್ಕುಗಳೆಲ್ಲ ಪ್ರಸನ್ನವಾಗಿವೆ; ಆಗಸವು ನಿರ್ಮಲ-ವಾಗಿದೆ; ಹೊಗಂಪಿನ ತಂಗಾಳಿ ಸುಳಿಯುತ್ತಿದೆ; ಕುಂದಪುರದ ಸಿದ್ಧಾರ್ಥ ಮಹಾರಾಜನು ಸಿಂಹಾಸನದ ಮೇಲೆ ಕುಳಿತಿದ್ದಾನೆ. ಇಂತಹ ಸಮಯದಲ್ಲಿ ಮಹಾರಾಣಿ ತ್ರಿಶಲೆ ಓಲಗಕ್ಕೆ ಬಂದಳು. ಬೆಳಗಿನಲ್ಲಿಯೇ ತನ್ನ ಮನದನ್ನೆ ಓಲಗಕ್ಕೆ ಬರುತ್ತಿರುವದನ್ನು ಕಂಡು ಅರಸನು ಸೋಜಿಗದಿಂದ, "ಪ್ರಿಯೆ, ಇಲ್ಲಿಗೆ ಈಗ ಬಂದ ಕಾರಣವೇನು?" ಎಂದನು.

ತ್ರಿಶಲೆ:— ಪ್ರಾಣಪ್ರಿಯಾ, ನಿನ್ನೆ ರಾತ್ರಿ ಒಂದು ಅದ್ಭುತವಾದ ಕನಸನ್ನು ಕಂಡೆನು.

ಸಿದ್ಧಾರ್ಥ:— ಪ್ರಿಯೆ, ತ್ರಿಶಲೆ, ಹೇಳು ಹೇಳು, ಯಾವ ಕನಸನ್ನು ಕಂಡೆ?

ರಾಣಿ ಹೇಳಿದ ಕನಸನ್ನು ಕೇಳಿ ರಾಜ :— ಪ್ರಿಯೆ, ನಮ್ಮ ಜನ್ಮವು ಸಾರ್ಥಕವಾಯಿತು.

ತ್ರಿಶಲೆ ಕಣ್ಣರಳಿಸಿ :— ಪ್ರಾಣಪ್ರಿಯಾ, ಅದೆಂತು ?

ಸಿದ್ಧಾರ್ಥ :— ಪ್ರಿಯೆ, ಭಗವಂತನೇ ನಮಗೆ ಪುತ್ರನಾಗಿ ಜನಿಸು-ವನೆಂದು ನಿನ್ನ ಕನಸು ಹೇಳುವದು.

ತ್ರಿಶಲೆ ಆನಂದಸಾಗರದಲ್ಲಿ ಓಲಾಡಿದಳು. ಕಾಲಕ್ರಮದಲ್ಲಿ ಆಕೆ ಬಸಿರಿಯಾದಳು, ಆಕೆಯ ಕಾಂತಿ ಹೆಚ್ಚಿತು ; ಜ್ಞಾನವು ಅಭಿವೃದ್ಧ-ವಾಯಿತು, ಧರ್ಮವಾಸನೆ ಬೆಳೆಯಿತು. ಅರಸಿಯ ಬಸಿರಿನೊಡನೆ ಕುಂದ-ಪುರದ ನಾಡಿನ ನೆಮ್ಮದಿಯೂ ಬೆಳೆಯುತ್ತಬಂದಿತು.

ಚೈತ್ರ ಶುಕ್ಲ ತ್ರಯೋದಶಿ, ಸೋಮವಾರ ಬೆಳಗಿನ ಜಾವದ ಶುಭಮುಹೂರ್ತದಲ್ಲಿ ಸಿದ್ಧಾರ್ಥ ಮಹಾರಾಜನ ಜಗತ್ಪ್ರಸಿದ್ಧ ಕುಮಾರನು ತ್ರಿಶಲಾರಾಣಿಯ ಗರ್ಭದಿಂದ ಭೂಮಿಗೆ ಅವತರಿಸಿದನು. ಕುಮಾರನ ರೂಪವು ಅಸಾಧಾರಣವಾದದ್ದು, ಬಣ್ಣವು ಕಾಸಿದ ಅಪರಂಜಿಯಂತೆ. ಅವಯುವಗಳು ಮುದ್ದಾಗಿ ಗಟ್ಟಿಯಾಗಿ ಇವೆ ; ಅಸ್ಥಿಗಳು ವಜ್ರಸಾರ-ದಿಂದ ಮಾಡಿದಂತಿವೆ. ಕುಮಾರನು ಜನನಿಯ ಜಠರದಿಂದ ಭೂಮಿಗೆ ಬಂದೊಡನೆ ಪೂರ್ವ ದಿಙ್ಮಂಡಲದಿಂದ ಸಹಸ್ರರಶ್ಮಿ ಉದಯಿಸಿದಂತೆ ಭಾಸವಾಯಿತು. ಈ ಕುಮಾರನಿಗೆ ವೀರ, ವರ್ಧಮಾನ ಎಂಬ ಹೆಸರು-ಗಳನ್ನಿಟ್ಟರು. ಈ ಕುಮಾರನೇ ಜೈನಧರ್ಮೋದ್ಧಾರಕನಾದ ಮಹಾ-ವೀರಸ್ವಾಮಿ.

ಈವರೆಗೆ ಮಕ್ಕಳ ಮೋರೆಯನ್ನು ಕಾಣದ ಅರಸು ಅರಸಿಯರು ಶುಭಲಕ್ಷಣಯುಕ್ತನಾಗಿ, ತೇಜಸ್ವಿಯಾಗಿ, ಬಿದಿಗೆಯ ಚಂದ್ರನಂತೆ ದಿನದಿನಕ್ಕೆ ಬಳೆಯುತ್ತಿರುವ ಕುಮಾರನನ್ನು ಕಂಡು ಅಳತೆಯಿಲ್ಲದ ಆನಂದವನ್ನು ಪಡೆದರು. ನಾಡಿಗೆಲ್ಲ ಒಸಗೆಯಾಯಿತು. ಸೆರೆಯಾಳು-ಗಳು ಬಿಡುಗಡೆಹೊಂದಿದರು ; ದೀನಾನಾಥರು ದಾನಗಳಿಂದ ತಣಿದರು.

ಸಾಧಾರಣವಾಗಿ ಮಕ್ಕಳಿಗೆ ಐದನೆಯ ವರ್ಷ ವಿದ್ಯಾರಂಭ ಮಾಡಿ-ಸುವರು ; ಗುರುವಿನ ಬಳಿಗೆ ಕಳಿಸುವರು. ವರ್ಧಮಾನನಿಗೆ ಇದಾವದೂ

ಬೇಕಾಗಲಿಲ್ಲ. ಪೂರ್ವಜನ್ಮಸಂಸ್ಕಾರದಿಂದ ಅವನು ಬಾಲ್ಯದಲ್ಲಿಯೇ ಜ್ಞಾನವಂತನಾದನು ; ತನಗೆ ತಾನೇ ಗುರುವಾದನು.

ವರ್ಧಮಾನನಿಗೆ ಎಂಟನೆಯ ವರ್ಷವು ನಡೆಯಿತು. ರಾಜವೈಭವ-ದೊಳಗಿನ ಬೆಡಗಿನ ಒಡವೆಗಳು ಮನಸ್ಸನ್ನೆಳೆಯುವ ಸಮಯವಿದು. ಮೂರದಲ್ಲಿ ಸಂಸಾರವು ತನ್ನ ಮೋಹಕ ಸ್ವರೂಪವನ್ನು ತೋರಿ ಅರಸು-ಮಗನನ್ನು ತನ್ನ ಕಡೆಗೆ ಕರೆಯುವ ಕಾಲವು ಸಮೀಪಿಸಿದೆ. ಆದರೆ ವರ್ಧಮಾನನ ಒಲವು ಧರ್ಮದ ಕಡೆಗೆ.

ಕುಮಾರನು ಹರಯಕ್ಕೆ ಬಂದನು. ರಾಜಕಾರ್ಯ, ಪ್ರಜಾರಂಜನೆ ಇವುಗಳಲ್ಲಿ ತೊಡಗಿರುತ್ತಿದ್ದಂತೆ ಹೊರಗೆ ಕಾಣಿಸಿದರೂ ಒಳಗೆ ಧರ್ಮ-ವಿಚಾರವೊಂದೇ ಆತನ ಮನಸ್ಸಿಗೆ ಹಿಡಿದಿತ್ತು. ಮೂವತ್ತು ವರ್ಷ ವಯಸ್ಸಾದರೂ ವರ್ಧಮಾನನು ಮದುವೆಯನ್ನು ಮಾಡಿಕೊಳ್ಳಲಿಲ್ಲ. ಕೊನೆಗೂ ಬ್ರಹ್ಮಚಾರಿಯಾಗಿರುವದನ್ನೇ ನಿರ್ಧರಿಸಿದನು.

ಈಚೆಗೆ ಧ್ಯಾನಮಗ್ನನಾಗಿರುತ್ತಿದ್ದ ವರ್ಧಮಾನನಿಗೆ ಆತನ ಹಲವು ಹಿಂದಿನ ಜನ್ಮಗಳ ನೆನಪು ಬರತೊಡಗಿತು. ಅದರಿಂದ ಆತನಲ್ಲಿ ವೈರಾಗ್ಯವು ಬೇರೂರಿತು. ಆತನು ಸಂಸಾರವನ್ನು ತೊರೆಯಬೇಕೆಂದು ಸಂಕಲ್ಪಮಾಡಿದನು. ಒಂದು ದಿನ ಪುತ್ರವತ್ಸಲೆಯಾದ ತ್ರಿಶಲೆ ವರ್ಧಮಾನನ ಬಳಿಗೆ ಬಂದು, "ಮಗನೇ, ಕಠೋರವಾದ ಸಂನ್ಯಾಸ-ವ್ರತವನ್ನು ಕೈಕೊಳ್ಳುವದಕ್ಕೆ ಇದು ಸಮಯವಲ್ಲ. ಅದಕ್ಕೆ ಕಾಲವು ಮುಂದೆ ಬರುವದು ; ಈಗ ರಾಜಭೋಗಗಳನ್ನು ಭೋಗಿಸು ; ನೀನು ವಿರಕ್ತನಾಗಿ ನಮ್ಮನ್ನು ನೋಯಿಸಬೇಡ," ಎಂದು ಬೋಧಿಸಿದಳು. ಈ ಕುಮಾರನ ಗಟ್ಟಿಗತನದ ಮುಂದೆ ತಾಯಿಯ ನಲ್ನುಡಿಗಳ ಆಟವೇನೂ ನಡೆಯಲಿಲ್ಲ.

ಇಂದು ವರ್ಧಮಾನ ಕುಮಾರನು ಸಂಸಾರವನ್ನು ತೊರೆದು ತಪಶ್ಚರ್ಯೆಗೆ ಅಡವಿಗೆ ಹೊರಟಿದ್ದಾನೆ. ಕುಂದಪುರ ನಿವಾಸಿಗಳೆಲ್ಲ ಅಚ್ಚರಿ-ಯಿಂದ ಅರಸುಮಗನ 'ನಿಷ್ಕ್ರಮಣ' ವನ್ನು ನಿರೀಕ್ಷಿಸುತ್ತಿದ್ದಾರೆ. ಆತನು ತನ್ನ ವೈಭವವನ್ನೆಲ್ಲ ತನ್ನ ಕೈಯಿಂದ ಯಾಚಕರಿಗೆ ದಾನ

ಮಾಡಿದನು. ಬಳಿಕ ಪಲ್ಲಕ್ಕಿಯಲ್ಲಿ ಕುಳಿತು ಅಡವಿಗೆ ನಡೆದನು. ವರ್ಧಮಾನನು ಮನೆಯಲ್ಲಿರುವದು ಇಂದಿಗೆ ಮುಗಿಯಿತು.

ವರ್ಧಮಾನಸ್ವಾಮಿಯ ಪಲ್ಲಕ್ಕಿ ಸಮೀಪದ ಅಡವಿಗೆ ಬಂದಿತು. ಒಂದು ಅಶೋಕ ವೃಕ್ಷದ ಕೆಳಗಿದ್ದ ಸ್ಫಟಿಕಶಿಲೆಯ ಮೇಲೆ ನಿಂತು ಆತನು ಮೈಮೇಲಿನ ವಸ್ತ್ರಾಭರಣಗಳನ್ನು ಕಳೆದನು ; ತಲೆಗೂದಲನ್ನು ಕಿತ್ತು ಚೆಲ್ಲಿದನು. ಈ ಮೇರೆಗೆ ರಾಜಪುತ್ರನು ಸಂನ್ಯಾಸಿಯಾದನು.

ಈ ಮಹಾವೀರಸ್ವಾಮಿ ಆರುತಿಂಗಳು ಉಪವಾಸದಿಂದ ಇದ್ದು ಅಡವಿಯಲ್ಲಿ ಅತ್ಯುಗ್ರವಾದ ತಪಶ್ಚರ್ಯೆಯನ್ನು ಕೈಕೊಂಡನು. ಆತನಿಗೆ ಸಿದ್ಧಾವಸ್ಥೆ ಪ್ರಾಪ್ತವಾಯಿತು. ಈಗ ಆತನು ಧರ್ಮೋಪದೇಶವನ್ನು ಮಾಡಿ ಲೋಕವನ್ನು ಉದ್ಧರಿಸಲು ಹೊರಟನು. ಆತನು ಎಲ್ಲಕ್ಕೂ ಮೊದಲು ಬಂದದ್ದು 'ಕುಲಪುರ' ಎಂಬ ನಗರಕ್ಕೆ ; ಅಲ್ಲಿಯ ಅರಸು ಅತಿ ಭಕ್ತಿಯಿಂದ ಈ ಸ್ವಾಮಿಗೆ ಭಿಕ್ಷೆ ಮಾಡಿಸಿದನು. ಸ್ವಾಮಿಯ ಆರು ತಿಂಗಳ ಉಪವಾಸಕ್ಕೆ ಇದೇ ಮೊದಲ ಪಾರಣೆ. ಭೂಪತಿಯಾಗಿದ್ದ-ವನು ಯತಿಪತಿಯಾಗಿ ಈಗ ಕರತಲಭಿಕ್ಷೆಯನ್ನು ಸ್ವೀಕರಿಸುವನು.

ವೀರಮುನಿ ಈ ಮೇರೆಗೆ ಸಂಚಾರಮಾಡುತ್ತ ದಶಪುರ, ಉಜ್ಜಯಿನಿ-ಗಳನ್ನು ಕಂಡು ಕೌಶಾಂಬಿಗೆ ಬಂದನು. ಕೌಶಾಂಬಿಯಲ್ಲಿ ರಾಜ-ಮಾರ್ಗದಲ್ಲಿ ಹೋಗುತ್ತಿರುವಾಗ ಒಮ್ಮೆಲೆ ಕುಗ್ಗಿದ ದನಿಯಿಂದ ನಿಲ್ಲಿರಿ, ನಿಲ್ಲಿರಿ ಎಂದು ಯಾರೋ ಕೂಗಿದರು. ಮಹಾವೀರಸ್ವಾಮಿ ನೋಡು-ತ್ತಾನೆ: ಇದಿರಿಗೆ ಮೋಡ ಕವಿದ ಚಂದ್ರನಂತೆ, ಹೊಗೆ ಸುತ್ತಿದ ಅಗ್ನಿಯಂತೆ ಮಲಿನವೇಷದ ಅತ್ಯುಜ್ವಲಾಕೃತಿಯ ಒಬ್ಬ ಸುಂದರಿ ಸಾವೆಯಕ್ಕಿಯ ಅನ್ನವನ್ನು ಅಳವಡಿಸಿಕೊಂಡು ಭಕ್ತಿನಮ್ರಳಾಗಿ ನಿಂತಿದ್ದಾಳೆ. ಆಕೆಯ ಬಳಿಯಲ್ಲಿ ವೀರಮುನಿಯ ಸತ್ಕಾರಕ್ಕೆ ಆ ಅನ್ನದ ಹೊರತು ಇನ್ನೇನೂ ಇರಲಿಲ್ಲ. ಹೃದಯದೊಳಗಿನ ಪರಿಪೂರ್ಣವಾದ ಭಕ್ತಿಯನ್ನೇ ಆಕೆ ಆ ಮುನಿವರನ ಚರಣಗಳಿಗೆ ಅರ್ಪಿಸಿದಳು. ವರ್ಧಮಾನಸ್ವಾಮಿ ಆ ಭಕ್ತೆ ನೀಡಿದ ಆ ಅನ್ನವನ್ನೇ ಆದರದಿಂದ ಸ್ವೀಕರಿಸಿದನು.

ಈ ಹೆಂಗುಸು ಸಾಧ್ವಿಯಾದ ಚಂದನೆ. ವೈಶಾಲೀನಗರದ ಚೇಟಕ ಮಹಾರಾಜನ ಮಗಳು. ಹೂದೋಟದಲ್ಲಿ ತಿರುಗಾಡುತ್ತಿರು-

ವಾಗ ದೈವಯೋಗದಿಂದ ಒಬ್ಬ ವಿದ್ಯಾಧರನು ಆಕೆಯನ್ನು ಅಪಹರಿಸಿ-ಕೊಂಡು ಕಾಡಿನಲ್ಲಿ ಒಯ್ದುಬಿಟ್ಟನು. ಒಬ್ಬ ಭಿಲ್ಲನು ಆಕೆಯನ್ನು ಕೌಶಾಂಬಿಯ ವೃಷಭಸೇನನೆಂಬ ಬಣಜಿಗನಿಗೆ ಮಾರಿದನು. ಈಗ ಚಂದನೆ ವೃಷಭಸೇನನ ಮನೆಯ ತೊತ್ತು. ಆದರೂ ತನ್ನ ಶೀಲ-ವ್ರತಗಳನ್ನು ಸರಿಯಾಗಿ ಪಾಲಿಸಿಕೊಂಡಿರುವಳು. ವರ್ಧಮಾನಮುನಿ ಬಂದದ್ದನ್ನು ತಿಳಿದು ಆಕೆ ಆತನಿಗೆ ಅನ್ನಸಮರ್ಪಣೆ ಮಾಡಿ ಧನ್ಯಳಾಗ-ಬೇಕೆಂದು ಆದಿನ ಬಾಗಿಲಲ್ಲಿ ಕಾದುಕೊಂಡು ನಿಂತಿದ್ದಳು.

ಒಬ್ಬ ತೊತ್ತು ಮಹಾವೀರಸ್ವಾಮಿಗೆ ಅನ್ನನಿವೇದನ ಮಾಡಿದಳು! ಕರೆದರೂ ಅರಮನೆಗೆ ಬಾರದ ಆ ಸ್ವಾಮಿ ಆಕೆ ನೀಡಿದ ಸಾವೆಯನ್ನ-ವನ್ನು ಪರಮಾದರದಿಂದ ಸ್ವೀಕರಿಸಿದನು ! ಈ ವರ್ತಮಾನವನ್ನು ಕೇಳಿ ಕೌಶಾಂಬಿಯ ಮೃಗಾವತೀರಾಣಿ ಸೋಜಿಗಬಟ್ಟಳು. ಆ ತೊತ್ತು ಧನ್ಯೆ-ಯೆಂದು ತಿಳಿದಳು. ರಾಣಿ ಆ ತೊತ್ತನ್ನು ಕಾಣಬೇಕೆಂಬ ಕುತೂಹಲ-ದಿಂದ ಆಕೆಯನ್ನು ಅರಮನೆಗೆ ಕರೆಸಿಕೊಂಡಳು. ಮೃಗಾವತಿ ಈ ತೊತ್ತನ್ನು ಪರಮಾದರದಿಂದ ಅಪ್ಪಿಕೊಂಡಳು. ಆಕೆಯ ಸಮಾಚಾರ-ವನ್ನು ಕೇಳುತ್ತಿರುವಷ್ಟರಲ್ಲಿ ಆಕೆ ತನ್ನ ತಂಗಿ ಚಂದನೆಯೆಂದು ಗುರುತು ಹಿಡಿದಳು. ಇಬ್ಬರಿಗೂ ಅತ್ಯಂತ ಹರ್ಷವಾಯಿತು. ಚಂದನೆ ಸ್ವಲ್ಪ ದಿವಸ ಅರಮನೆಯಲ್ಲಿದ್ದು ಬಳಿಕ ಮಹಾವೀರಸ್ವಾಮಿಯ ಶಿಷ್ಯೆಯಾಗಿ ಸಂಸಾರವನ್ನು ತೊರೆದು ' ಆರ್ಯಿಕೆ ' ಯಾಗಿ ಆ ಸ್ವಾಮಿಯ ಸಂಗಡವೇ ಇರತೊಡಗಿದಳು.

ಮಹಾವೀರಸ್ವಾಮಿ ಹೋದಹೋದಲ್ಲಿ ಆತನ ಧರ್ಮೋಪದೇಶ-ವನ್ನು ಕೇಳಿ ಹಲವರು ಆತನ ಧರ್ಮವನ್ನು ಕೈಕೊಂಡರು; ಮಹಾವೀರ-ಸ್ವಾಮಿಯ ಅವತಾರ ಕೃತ್ಯವು ಮುಗಿಯುತ್ತ ಬಂದಿತು; ಆತನ ನಿರ್ವಾಣಕಾಲವು ಸಮೀಪಿಸಿತು. ಆಗ ಆತನು ಪಾವಾಪುರಿಗೆ ಬಂದನು. ಕಾರ್ತಿಕ ಕೃಷ್ಣ ಚತುರ್ದಶಿ. ವೀರಮುನಿ ಆದಿನ ಧ್ಯಾನಮಗ್ನನಾಗಿ ತನ್ನ ನಶ್ವರ ಶರೀರವನ್ನು ತ್ಯಜಿಸಿದನು. ಈತನು ಎಪ್ಪತ್ತೆರಡು ವರ್ಷ ಭೂತಲದಲ್ಲಿ ಜೀವಿಸಿದ್ದನು. ಆತನು ಅವತರಿಸಿದ್ದು ಕ್ರಿ. ಪೂ. ೫೯೯ ರಲ್ಲಿ. ನಿರ್ವಾಣವನ್ನು ಪಡೆದದ್ದು ಕ್ರಿ. ಪೂ. ೫೨೭ ರಲ್ಲಿ.

ಮಹಾವೀರಸ್ವಾಮಿ ಜೈನರ ಇಪ್ಪತ್ತುನಾಲ್ಕನೆಯ ತೀರ್ಥಂಕರನು. ಈತನಿಂದ ನಮ್ಮ ದೇಶದಲ್ಲಿ ಜೈನಧರ್ಮವು ಪ್ರಸಾರಗೊಂಡಿತು. ಈತನ ಜ್ಞಾನ-ಶೀಲ-ತಪಸ್ಸುಗಳು ಅವರ್ಣನೀಯವಾದಂಥವು.

—ಮ. ಪ್ರ. ಪೂಜಾರ.

೧. ಲೇಖಕರು ಈ ಚರಿತ್ರೆಯ ಆರಂಭವನ್ನು ಮನೋಹರವಾಗಿ ಮಾಡಿರುವರೆಂದು ಹೇಳಬಹುದು. ಈ ಮನೋಹರತೆ ಏತರಿಂದ ಬಂದಿದೆ? ೨. ವರ್ಧಮಾನನ ಶೈಶವ, ಬಾಲ್ಯ, ಯೌವನಗಳು ಅಸಾಧಾರಣವಿದ್ದವೆಂದು ಹೇಗೆ ಹೇಳಬಹುದು? ೩. ವರ್ಧಮಾನ ಮುನಿಯ ಅನುಗ್ರಹದಿಂದ ಚಂದನೆಯ ಜೀವನವು ಹೇಗೆ ಪರಿವರ್ತನ ಹೊಂದಿತು? ೪. ಜೈನರು ಕನ್ನಡ ಭಾಷೆಗೆ ಯಾವ ಉಪಕಾರ ಮಾಡಿರುವರು? ಕನ್ನಡದಲ್ಲಿ ಪ್ರಸಿದ್ಧರಾದ ಮೂವರು ಜೈನ ಕವಿಗಳನ್ನು ಹೇಳಿರಿ; ಅವರು ಏತರಿಂದ ಹೆಸರಾಗಿದ್ದಾರೆ? (ಈ ಮಾಹಿತಿಯನ್ನು ಶಿಕ್ಷಕರು ಒದಗಿಸಿಕೊಡಬೇಕೆಂದು ಅಪೇಕ್ಷಿಸಿ ಈ ಪ್ರಶ್ನವನ್ನು ಕೇಳಿದೆ.) ೫. ಕೆಳಗಿನ ವಾಕ್ಯಗಳಲ್ಲಿ ಆದಷ್ಟು ಕನ್ನಡ ಪದಗಳನ್ನೇ ಉಪಯೋಗಿಸಿ ಆ ವಾಕ್ಯಗಳ ಅಂದವು ಕೆಡದಂತೆ ಬರೆಯಿರಿ: (ಅ) ಚೈತ್ರಶುಕ್ಲ ತ್ರಯೋದಶಿ, ಸೋಮವಾರ ಬೆಳಗಿನ ಜಾವದ ಶುಭ-ಮುಹೂರ್ತದಲ್ಲಿ ಸಿದ್ಧಾರ್ಥ ಮಹಾರಾಜನ ಜಗತ್ಪ್ರಸಿದ್ಧ ಕುಮಾರನು ತ್ರಿಶಲಾರಾಣಿಯ ಗರ್ಭದಿಂದ ಭೂಮಿಗೆ ಅವತರಿಸಿದನು. (ಆ) ಕುಮಾರನು ಜನನಿಯ ಜಠರದಿಂದ ಭೂಮಿಗೆ ಬಂದೊಡನೆ ಪೂರ್ವದಿಙ್ಮಂಡಲದಿಂದ ಸಹಸ್ರರಶ್ಮಿ ಉದಯಿಸಿದಂತೆ ಭಾಸವಾಯಿತು. ೬. ಅಗಸ, ಓಲಗ, ಬಸಿರಿ, ನೆಮ್ಮದಿ, ಒಸಗೆ, ತಣಿ, ಬೆಡಗು, ಹರಯ, ಕೈಕೊಳ್ಳು, ನಲ್ನುಡಿ —ಇವುಗಳಿಗೆ ಸಮಾನಾರ್ಥದ ಸಂಸ್ಕೃತ ಪದಗಳನ್ನು ಹಾಗು ಶುಭ-ಮುಹೂರ್ತ, ಸಹಸ್ರರಶ್ಮಿ, ವಸ್ತ್ರಾಭರಣ, ಕರತಲಭಿಕ್ಷೆ, ಪರಮಾದರ ಇವುಗಳಿಗೆ ಸಮಾನಾರ್ಥದ ಕನ್ನಡ ಪದಗಳನ್ನು ಹೇಳಿರಿ.

# ೩. ಮಲ್ಲಿಗೆ

[ **ಕೆ. ವಿ. ಕೃಷ್ಣಭಟ್ಟರು ಬರೆದ ಪ್ರಬಂಧವಿದು. ಲೇಖಕರು ಮಂಗಳೂರಿನಲ್ಲಿ ಕನ್ನಡದ ಅಧ್ಯಾಪಕರಾಗಿದ್ದಾರೆ. 'ಪಂಚಾಮೃತ' ಎಂಬ ಹೆಸರಿನ ಒಂದು ಪ್ರಬಂಧಗಳ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಅಲ್ಲದೆ ಪತ್ರಿಕೆಗಳಿಗೂ ಲೇಖನ ಬರೆಯುತ್ತಿರುತ್ತಾರೆ. ಈ ಪ್ರಬಂಧದಲ್ಲಿ ವರ್ಣನೆಯ ಸೊಗಸಿನೊಂದಿಗೆ ಪ್ರಾಚೀನ ಕಾವ್ಯಗಳ ಅಭ್ಯಾಸದ ಪರಿಣಾಮವೂ ಕಂಡು-ಬರುತ್ತಿದೆ. ವಿಷಯ ಪ್ರತಿಪಾದನೆ, ಭಾಷೆಯ ಗಾಂಭೀರ್ಯ ಇವುಗಳ ಮೂಲಕ ಇದೊಂದು ಒಳ್ಳೆಯ ತರಗತಿಯ ಪ್ರಬಂಧವಾಗಿದೆ. ಇದನ್ನು ಸೊ. ಓ. ನ ೬ ನೆಯ ಪುಸ್ತಕದಲ್ಲಿಯ ಮೂರ್ತಿರಾಯರ 'ಹೂವುಗಳು' ಎಂಬ ಪ್ರಬಂಧದೊಡನೆ ಹೋಲಿಸಿ ಅಭ್ಯಾಸವಾಡುವದು ಉಪಯುಕ್ತ-ವಾಗುವದು.** ]

ನನಗೆ ಮಲ್ಲಿಗೆಯ ಪರಿಚಯವಾಗಿ ಕೆಲವು ವರ್ಷಗಳಾದವು. ಈ ವಿಷಯದಲ್ಲಿ ನಿಮಗೆ ಸಂಶಯವಿದ್ದರೆ ಒಮ್ಮೆ ನಮ್ಮಲ್ಲಿಗೆ ಬಂದು ನೋಡಿ; ಆಗ ತಿಳಿಯುವುದು. ಒಂದು ವೇಳೆ ನಮ್ಮಲ್ಲಿಗೆ ಬರುವ ಇಚ್ಛೆಯು ನಿಮಗಿಲ್ಲದಿದ್ದರೆ ಮಲ್ಲಿಗೆಯನ್ನೇ ನಿಮ್ಮಲ್ಲಿಗೆ ಬರುವಂತೆ ಆಮಂತ್ರಣವನ್ನು ಕಳುಹಿಸಿರಿ. ಆಗ ಮಲ್ಲಿಗೆ ನಿಮ್ಮಲ್ಲಿಗೆ ಬಂದರೆ ಮಲ್ಲಿಗೆಯ ಪರಿಚಯದ ಯೋಗ್ಯತೆ ತಾನಾಗಿಯೇ ನಿಮಗೆ ತಿಳಿದು-ಬರುವುದು. ನಮ್ಮಲ್ಲಿಗೆಯ್ದಿದ್ದ ಮಲ್ಲಿಗೆಯ ಸತ್ಕಾರಕ್ಕೆ ಆರಂಭವಾ-ದಂದಿನಿಂದ ನಮ್ಮ ಮನೆಯ ಯಜಮಾನಿ ಎಲ್ಲಿ ಸವತಿಮತ್ಸರವನ್ನು ಪ್ರಕಟಿಸಿಬಿಡುವಳೋ ಎಂದು ತಲ್ಲಣಗೊಂಡಿದ್ದೆನು. ಆದರೆ ನನ್ನ ಸುದೈವದಿಂದ ಆಕೆ ಬಹಳ ಸಜ್ಜನೆಯಾದುದರಿಂದ ಮಲ್ಲಿಗೆ ನಮ್ಮಲ್ಲಿಗೆ ಬಂದಾಗಳೆಲ್ಲಾ ಮಲ್ಲಿಗೆಯನ್ನು ಆದರದಿಂದ ಬರಮಾಡಿಕೊಂಡುದು ಮಾತ್ರವಲ್ಲದೆ, ಆತ್ಮೀಯತೆಯಿಂದ ತಲೆಯ ಮೇಲೆ ಹೊತ್ತುಕೊಂಡುದೂ ನನಗೆ ವಿಶೇಷ ಆಶ್ಚರ್ಯವನ್ನುಂಟುಮಾಡಿತು! ಅಂತರಂಗ ಬಹಿರಂಗ-ಗಳಲ್ಲಿ ನಿಷ್ಕಪಟ ಪರಿಶುದ್ಧತೆಯ ಸೂಚಕವಾದ ಧಾವಳ್ಯವನ್ನು ಒಳಕೊಂಡು ಶೋಭಿಸುತ್ತಿರುವುದರಿಂದಲೇ ಮಲ್ಲಿಗೆಗೆ ಈ ತೆರನಾದ

ಅಪೂರ್ವ ಸತ್ಕಾರವು ದೊರೆಕೊಂಡಿದ್ದಿರಬಹುದೆಂದು ಊಹಿಸುತ್ತೇನೆ. ಆದುದರಿಂದ, ಅಂದಿನಿಂದ ಮನೆ ತುಂಬ ತುಂಬಿ ಬಯಸುವ ಮಲ್ಲಿಗೆಯ ಪರಿಮಳವೇ 'ಘಮಘಮಿಸು'ತ್ತ ಇರುವಂತೆ ಏರ್ಪಾಡು ಮಾಡಿರುತ್ತೇನೆ. ಬಯಕೆ ಇದ್ದರೆ ನೀವು ಹಾಗೆ ಮಾಡಿಕೊಳ್ಳಬಹುದು; ಮಲ್ಲಿಗೆಯ ಅಡ್ಡಿಯಿಲ್ಲ.

ಮಲ್ಲಿಗೆಯನ್ನು ಕಂಡರೆ ಎಲ್ಲರಿಗೂ ಪ್ರೀತಿ. ಏತಕ್ಕೆಂದರೆ ಮಲ್ಲಿಗೆಯ ಗುಣ (ದಾರ) ಸಂಬಂಧವು ಎಲ್ಲರಿಗೂ ಪ್ರಿಯವಾದುದು. ಮಲ್ಲಿಗೆಯ ಸಂಬಂಧದಿಂದಲ್ಲವೇ ಬಾಳೆಯ ನಾರಿಗೂ ನಾರಿಯ ಸಿರಿ-ಮುಡಿಯನ್ನು ಅಲಂಕರಿಸುವ ಸೌಭಾಗ್ಯವು ಸಮನಿಸಿದುದು? ಇಲ್ಲ-ವಾದರೆ ಬಾಳೆಯ ನಾರಿಗೆ ನಾರುವ ಗತಿಯಲ್ಲದೆ ನೀರೆಯ ಚಾರು-ವೇಣಿಯನ್ನು ಏರುವ ಸ್ಥಿತಿಯೆಂದೂ ಬರುತ್ತಿದ್ದಿಲ್ಲ. ಮಲ್ಲಿಗೆಯಲ್ಲಿರುವ 'ಗುಣಬಂಧ' ವೂ ಮಲ್ಲಿಗೆಯನ್ನು ಕುರಿತ ಸೊಲ್ಲಿನ 'ಬಂಧುಗುಣ' ವೂ ಮೆಲ್ಲೆದೆಯ ಬಲ್ಲಿದರಿಗೆ ಉಲ್ಲಾಸಪ್ರದವೇ ಆಗಿವೆಯಲ್ಲವೇ?

ಮಲ್ಲಿಗೆಯ ಮೈಮೆಯನ್ನು ಎಷ್ಟು ಕೊಂಡಾಡಿದರೂ ಮುಗಿ-ಯದು; ಆದುದರಿಂದಲೇ ಅದಕ್ಕೆ ಇರುವ ಗೌರವವು ಮತ್ತಾವ ಮನೋಹರ ಪುಷ್ಪಕ್ಕೂ ಇಲ್ಲವು. ಮಲ್ಲಿಗೆಯ ಮುಗುಳು ಮನಸಿಜನ ಪಂಚಬಾಣಗಳಲ್ಲೊಂದೆಂಬುದು ಎಲ್ಲರಿಗೂ ತಿಳಿದ ವಿಷಯವಷ್ಟೆ.

ಕವಿಗಳಿಗೆ— ಕನ್ನಡ ಕವಿಗಳಿಗೆ— ಅದರಲ್ಲಿಯೂ ಶೃಂಗಾರ ಕವಿಗಳಿಗೆ—ಮಲ್ಲಿಗೆಯೆಂದರೆ ಬಹಳ ಆದರವೆಂದು, ಹಲಕೆಲವು ಕನ್ನಡ ಕಾವ್ಯಗಳ ಪಠನದಿಂದ ತಿಳಿದುಬರುವುದು. ನಮ್ಮೀ 'ಕನ್ನಡಮೆನಿಪ್ಪಾ ನಾಡು ಮಲ್ಲಿಗೆಯ ನೆಲೆವೀಡು!' ಅದುಕಾರಣವೇ ಕನ್ನಡದ ಕವಿಗಳು ಒಂದಿಲ್ಲೊಂದು ತೆರನಾಗಿ ಮಲ್ಲಿಗೆಯನ್ನು ಹೊಗಳಿಯೇ ಇರುವರು. ಮಂದಗಮನೆಯರ ಮಂದಹಾಸವನ್ನೂ ಚಂದ್ರವದನೆಯರ ಕುಂದದ ಚೆಂದದ ರದನಪಙ್ತಿಯನ್ನೂ ಮಲ್ಲಿಗೆಗೂ ಕುಂದಮಲ್ಲಿಗೆಗೂ ಹೋಲಿಸಿ ಬಣ್ಣಿಸಿರುವುದನ್ನು ಕುರಿತು ರಸಿಕರಿಗೆ ಬೇರೆ ಹೇಳುವ ಆವಶ್ಯಕತೆಯಿಲ್ಲ. ರುದ್ರಭಟ್ಟನೆಂಬ ಮಹಾಕವಿಯೊರ್ವನು ಜಗನ್ನಾಥವಿಜಯದಲ್ಲಿ—

" ಮಲ್ಲಿಗೆಯುಂ ನಗೆಯಿಂ, ಕರ-
ಪಲ್ಲವದಿಂದರುಣಸರಸಿರುಹಮುಂ, ರದದಿಂ ||
ಮೊಲ್ಲೆಯ ಮುಗುಳಂ ತೋರ್ಪರ್
ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್ || "

ಎಂದು ಬರೆದಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಇಲ್ಲಿ 'ಲತಾಂಗಿಯರ್' ಎಂದು ಪ್ರಯೋಗಿಸಿದ ಪದವು ಅರ್ಥವತ್ತಾಗಿದೆ. 'ಸಲ್ಲಲಿತಾಂಗದ ಲತಾಂಗಿಯರಾದುದರಿಂದಲೇ ತಮ್ಮ ನಗೆಯಿಂದ ಮಲ್ಲಿಗೆಯನ್ನು, ಕರಪಲ್ಲವದಿಂದ ಚೆಂದಾವರೆಯನ್ನು, ಹಲ್ಲುಗಳಿಂದ ಮೊಲ್ಲೆಯ ಮುಗುಳುಗಳನ್ನು ತೋರಿಸುವರಂತೆ!' ಲತೆಯಲ್ಲಿಯಲ್ಲವೆ ಚಿಗುರುಗಳೂ ಮುಗುಳುಗಳೂ ಹೂಗಳೂ ತೋರುವುದು? ಅದರಲ್ಲಿಯೂ ಒಂದೇ ಅಂಗಲತೆಯಲ್ಲಿ ಮಲ್ಲಿಗೆಯನ್ನೂ ಚೆಂದಾವರೆಯನ್ನೂ ಮೊಲ್ಲೆಯ ಮುಗುಳನ್ನೂ ತೋರಿಸಿದುದೀಗ ಇಲ್ಲಿಯ ವೈಚಿತ್ರ್ಯವು!

'ಮಲ್ಲಿಗೆ' ಎಂಬ ಶಬ್ದವೇ ಬಹು ಮಂಜುಳವಾದುದು. ಅದರ ಜೊತೆಯಲ್ಲೇ 'ಎಮ್ಮಲ್ಲಿಗೆ' ಎಂಬ ವಿನೋದಾರ್ಥ ವಿಶಿಷ್ಟವಾದ ಪದ-ಪ್ರಯೋಗವನ್ನು ಮಾಡಿದ ಒಬ್ಬ ಶೃಂಗಾರಕವಿಯೂ ಇರುವನು. ಆತನೇ ಭರತೇಶವೈಭವವೆಂಬ ಕಾವ್ಯವನ್ನು ರಚಿಸಿದ ನಮ್ಮ ಜಿಲ್ಲೆಯ ಪ್ರಾಚೀನ ಕವಿಗಳಲ್ಲಿ ಶ್ರೇಷ್ಠನಾದ ರತ್ನಾಕರನು. ಆತನು ರಚಿಸಿದ ಆ ಮಲ್ಲಿಗೆಯ ಪದ್ಯವು ಎಷ್ಟು ಚಮತ್ಕಾರವಾಗಿದೆ ನೋಡಿ —

"ಎಲ್ಲರ ಮುಂದೊರ್ವಮುಗ್ಧೆ ನಾಚುತ ಬಂದು
ಮಲ್ಲಿಗೆ ಸರಗೊಡುವಾಗ ||
ಮಲ್ಲಿಗೆ ಜಾರಿತು ; ಜಾರಿದರೆನದೆ-
ಮ್ಮಲ್ಲಿಗೆಯೆಂದನು ನೃಪತಿ || "

'ಮಲ್ಲಿಗೆ ಸರವು ಜಾರಿದುದು ಎಮ್ಮಲ್ಲಿಗೆ ಆದುದರಿಂದ ಕೈಯಿಂದ ಜಾರಿ-ಬಿದ್ದುದು ಅನುಕೂಲವೇ ಆಯ್ತು,' ಎಂದು ಹೇಳಿದ ನೃಪತಿಯ ನುಡಿಯು ಚಮತ್ಕಾರವುಳ್ಳುದಲ್ಲವೇ ?

ಇದೂ ಸಾಲದಿದ್ದರೆ, ' ಕಬ್ಬಿಗರಕಾವ 'ವನ್ನು ಬರೆದ ಮಹಾಕವಿ ಆಂಡಯ್ಯನು 'ಕನ್ನಡಮೆನಿಪ್ಪಾನಾಡಿ'ನ ಚೆಲ್ವನ್ನು ಸೊಲ್ಲಿಸುವೆಡೆಯಲ್ಲಿ—

**"ಮಲ್ಲಿಗೆಯುಲ್ಲದೆ ಸಂಪಗೆ–**
**ಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂ– ||**
**ಗಲ್ಲದೆ ಮಾವಲ್ಲದೆ ಕೌಂ–**
**ಗಲ್ಲದೆ ಗಿಡಮರಗಳೆಂಬುವಿಲ್ಲಾನಾಡೊಳ್ ||"**

ಎಂದು ಹೇಳಿ ಕನ್ನಡನಾಡಿನ ಹೂಗಿಡಗಳಲ್ಲಿ ಮಲ್ಲಿಗೆಗೇ ಅಗ್ರಸ್ಥಾನ-ವನ್ನು ಸಲ್ಲಿಸಿದುದನ್ನು ಓದಿದರೆ ಯಾವ ಕನ್ನಡಿಗನ ಮನಸ್ಸು ತಾನೇ ಮಲ್ಲಿಗೆಯಲ್ಲಿ ತಲ್ಲೀನವಾಗದಿರಬಲ್ಲುದು ? ಹೀಗೆ ಹಲವು ಕನ್ನಡ ಕಬ್ಬಿಗರು ನಮ್ಮೂರ ಮಲ್ಲಿಗೆಗೆ ಬಹುಮಾನವಿತ್ತು ಮಲ್ಲಿಗೆಯ ಮಾಲೆಯಂದದ ಸಲ್ಲಲಿತ ಕಾವ್ಯಗಳನ್ನು ಕಟ್ಟಿರುವರು ; ಬೇಕಾದವರು ಯಥೇಷ್ಟವಾಗಿ ಮುಡಿದುಕೊಳ್ಳಬಹುದು ! ಮಲ್ಲಿಗೆಯ ಅಡ್ಡಿಯಿಲ್ಲ !

ಮಲ್ಲಿಗೆಯಲ್ಲಿ ಹಲವು ಜಾತಿಗಳಿವೆಯಾದರೂ ಜಾತಿಭೇದವ್ಯವಸ್ಥೆ-ಯಿಂದಲಾಗಿ ಮಲ್ಲಿಗೆಯ ಮಾನ್ಯತೆಗೆ ಯಾವ ರೀತಿಯಿಂದಲೂ ಅವನತಿ-ಯಾದಂತೆ ತೋರುವುದಿಲ್ಲ. ಮಲ್ಲಿಗೆಗಳಲ್ಲಿ ಜಾತಿಮಲ್ಲಿಗೆಗೆ ಮಾತ್ರ ಅಗ್ರಪೂಜೆ ಸಲ್ಲುತ್ತಿದೆ ; ' ಪುಷ್ಪೇಷು ಜಾಜೀ ' ಎಂಬ ಸಿದ್ಧಾಂತವಿರು-ವುದರಿಂದ ಉದಯಕಾಲದಲ್ಲಿ ಮುದವನ್ನು ಒದವಿಸುವ ಉದಯಮಲ್ಲಿಗೆ, ಕಂಡು ಕಂಡು ಕಣ್ದಣಿದ ದುಂಡುಮಲ್ಲಿಗೆ, ಮುಂಡೆಗೆ ಮುಂಡನಾರ್ಥವಾದ ಚೆಂಡುಮಲ್ಲಿಗೆ, ಮೂಜಗಕ್ಕೂ ಸಾಜವಾದ ಸೋಜಿಗವನ್ನುಂಟು-ಮಾಡುವ ಸೂಜಿಮಲ್ಲಿಗೆ, ಸುಮಂಗಲೆಯರಿಗೆ ಮಂಗಲಕರವಾದ ಮಂಗಳೂರ ಮಲ್ಲಿಗೆ—ಎಂದು ಮುಂತಾಗಿ ಮಲ್ಲಿಗೆಯ ಅವತಾರಗಳನ್ನು ವರ್ಣಿಸಿದಷ್ಟೂ ತೀರದು. ಈ ಮಲ್ಲಿಗೆಗಳೆಲ್ಲಾ ಮುಗಿದ ಬಳಿಕ ಬರುವುದು ಮರಮಲ್ಲಿಗೆ ! ಮರಮಲ್ಲಿಗೆಯನ್ನಾದರೂ ಮರೆವುದಕ್ಕೆ ಮನವೊಪ್ಪದು. ಇಂತು ಪರಿಪರಿಯ ಮಲ್ಲಿಗೆಗಳ ಸೌರಭವನ್ನು ಆಘ್ರಾಣಿಸಿದಾಗ 'ನಮ್ಮಲ್ಲಿಗೆ ಕೊಂಚ ನಿಮ್ಮಲ್ಲಿಗೆ ' ಹರಡುತ್ತಿರಲಿ.

ಗಿರಿಮಲ್ಲಿಕಾರ್ಜುನನೆನಿಸಿದ ಗಿರೀಶಗೇ ಮಲ್ಲಿಗೆಯು ಅಚ್ಚುಮೆಚ್ಚಿನ ಪುಷ್ಪವಾಗಿರ್ದ ಬಳಿಕ್ಕೆ, ಪಲವುಂ ಪೇಳ್ದುದರಿಂದೇಂ ?— ಮಲ್ಲಿಗೆಗೆ ಜಯವಾಗಲಿ ! ( ಜವಳಿ ಅಂಗಡಿಗೆ ಹೋಗಿ ಮಲ್ಲಿಗೆ ಬೆಲೆ ಮಾಡು-ವವರಿಗೆ ಮಾತ್ರ ಈ ಮಲ್ಲಿಗೆಯ ಪರಿಮಳವು ಸಿಕ್ಕದಿರಲಿ.) ಸ್ವದೇಶಿ ಮಲ್ಲಿಗೆಗೆ, ಒಟ್ಟಾರೆ ಭದ್ರಂ ಶುಭಂ ಮಂಗಳಂ.

—ಕೆ. ವಿ. ಕೃಷ್ಣಭಟ್ಟ.

೧. ಮಲ್ಲಿಗೆಯಲ್ಲಿ ಎಷ್ಟು ಜಾತಿಗಳಿವೆ ? ೨. ಮಲ್ಲಿಗೆ ಎಲ್ಲರಿಗೂ ಪ್ರಿಯವಾಗುವದಕ್ಕೆ ಅದರಲ್ಲಿ ಯಾವ ಗುಣಗಳಿವೆ ? ೩. ಕನ್ನಡಕವಿ-ಗಳು ಮಲ್ಲಿಗೆಯನ್ನು ಯಾವ ಯಾವ ರೀತಿಯಿಂದ ಹೊಗಳಿದ್ದಾರೆ ? ೪. ಸ್ಪಷ್ಟೀಕರಿಸಿರಿ : (ಅ) (ಮಲ್ಲಿಗೆಯ ಸಂಬಂಧ) ಇಲ್ಲವಾದರೆ ಬಾಳೆಯ ನಾರಿಗೆ ನಾರುವ ಗತಿಯಲ್ಲದೆ, ಹೀರೆಯ ಚಾರುವೇಣಿಯನ್ನು ಏರುವ ಸ್ಥಿತಿ-ಯೆಂದೂ ಬರುತ್ತಿದ್ದಿಲ್ಲ. (ಅ) ಈ ಪಾಠದಲ್ಲಿ ಬಂದ ಕವಿತೆಗಳಲ್ಲಿ ಒಂದು.

# ೪. ಬಳೆಗಾರನ ಹಾಡು

[ ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರ ಮಲ್ಲಿಗೆ' ಎಂಬ ಕವನಸಂಗ್ರಹದಿಂದ ಈ ಕವಿತೆಯನ್ನು ತೆಗೆದುಕೊಳ್ಳಲಾಗಿದೆ. ಪತ್ನಿಯನ್ನು ತವರೂರಿನಲ್ಲಿ ಬಿಟ್ಟು ಕಾರಣಾಂತರಗಳಿಂದ ಸಿಟ್ಟಾಗಿ ಅಲ್ಲಿಗೆ ಹೋಗದೆ ಇದ್ದ ಗಂಡನನ್ನು ಕುರಿತು ಬಳೆಗಾರನು ಹೇಳಿದ ಮಾತುಗಳು ಇಲ್ಲಿವೆ. ಆ ಮಾತುಗಳು ಮನಕರಗುವಂತಹವು ಇವೆ. "ತಾಯಿ ಕೊರಗುವರಲ್ಲಿ, ನೀವಿಲ್ಲಿ ದೂರಿನಲಿ; ನಿಮಗಿಲ್ಲ ಒಂದು ಹನಿ ಕರುಣ," ಎಂದು ಬಳೆಗಾರನು ಸರಿಯಾಗಿ ಸೂಚಿಸಿ, "ದುಂಡುಮಲ್ಲಿಗೆಯ ದಂಡೆಯನು ಹಿಂಡಬಾರದು," ಎಂದು ಒಳ್ಳೆಯ ಮಾರ್ಮಿಕವಾಗಿ ಬುದ್ಧಿ ಹೇಳುತ್ತಾನೆ. ]

ಬಳೆಗಾರ ಚೆನ್ನಯ್ಯ ಬಾಗಿಲಿಗೆ ಬಂದಿಹೆನು.
ಒಳಗೆ ಬರಲಪ್ಪಣೆಯೆ ದೊರೆಯೇ ?
ನವಿಲೂರ ಮನೆಯಿಂದ ನುಡಿಯೊಂದ ತಂದಿಹೆನು—
ಬಳೆಯ ತೊಡಿಸುವುದಿಲ್ಲ ನಿಮಗೆ.



ಮುಡಿದ ಮಲ್ಲಿಗೆಯರಳು ಬಾಡಿಲ್ಲ, ರಾಯರೇ,
ತೌರಿನಲಿ ತಾಯಿ ನಗುತಿಹರು.
ಕುಡಿದ ನೀರಲುಗಿಲ್ಲ, ಕೊರಗದಿರಿ, ರಾಯರೇ—
ಅಮ್ಮನಿಗೆ ಬಳೆಯ ತೊಡಿಸಿದರು.

೨—೫೭೦೨

ಅಂದು ಮಂಗಳವಾರ ನವಿಲೂರ ಕೇರಿಯಲಿ
ಓಲಗದ ಸದ್ದು ತುಂಬಿತ್ತು;
ಬಳೆಯ ತೊಡಿಸಿದರಂದು ಅಮ್ಮನಿಗೆ ತೌರಿನಲಿ
ಅಂಗಳದ ತುಂಬ ಜನವಿತ್ತು.

ಹಬ್ಬದೂಟವನುಂಡು ಹಸೆಗೆ ಬಂದರು ತಾಯಿ,
ಹೊಳೆದಿತ್ತು ಕೊರಳಿನಲಿ ಪದಕ.
ಒಬ್ಬರೇ ಹಸೆಗೆ ಬಂದರು ತಾಯಿ ಬಿಂಕದಲಿ,
ಕಣ್ತುಂಬ ನೋಡಿದೆನು ಮುದುಕ.

ಸಿರಿಗೌರಿಯಂತೆ ಬಂದರು ತಾಯಿ ಹಸೆಮಣೆಗೆ,
ಸೆರಗಿನಲಿ ಕಣ್ಣೀರನೊರಸಿ ;
ಸುಖದೊಳಗೆ ನಿಮ್ಮ ನೆನೆದರು ತಾಯಿ ಗುಣವಂತೆ,
ದೀಪದಲಿ ಬಿಡುಗಣ್ಣ ನಿಲಿಸಿ.

ಬೇಕಾದ ಹಣ್ಣಿಹುದು, ಹೂವಿಹುದು ತೌರಿನಲಿ
ಹೊಸ ಸೀರೆ, ರತ್ನದಾಭರಣ ;
ತಾಯಿ ಕೊರಗುವರಲ್ಲಿ, ನೀವಿಲ್ಲಿ ದೂರಿನಲಿ,
ನಿಮಗಿಲ್ಲ ಒಂದು ಹನಿ ಕರುಣ.

ದಿನವಾದ ಬಸುರಿ ಉಸ್ಸೆಂದು ನಿಟ್ಟುಸಿರೆಳೆದು
ಕುದಿಯಬಾರದು, ನನ್ನ ದೊರೆಯೇ ;
ಹಿಂಡಬಾರದು ದುಂಡುಮಲ್ಲಿಗೆಯ ದಂಡೆಯನು;
ಒಣಗಬಾರದು ಒಡಲ ಚಿಲುಮೆ.

ಮುಳಿಸು ಮಾವನ ಮೇಲೆ; ಮಗಳೇನು ಮಾಡಿದಳು ?
ನಿಮಗೇತಕೀ ಕಲ್ಲು ಮನಸು ?
ಹೋಗಿ ಬನ್ನಿರಿ, ಒಮ್ಮೆ, ಕೈಮುಗಿದು ಬೇಡುವೆನು,
ಅಮ್ಮನಿಗೆ ನಿಮ್ಮದೇ ಕನಸು.

—ಕೆ. ಎಸ್. ನರಸಿಂಹಸ್ವಾಮಿ.

೧. ಬಸುರಿ ಹೆಂಗುಸು ಹಸೆಗೆ ಕಣ್ಣೀರೊರಿಸುತ್ತ ಬಂದುದೇಕೆ ? ಆಕೆಯ ಮನದ ಹಂಬಲು ಏನಿರಬಹುದು ? ೨. ‘ಹಿಂಡಬಾರದು ದುಂಡುಮಲ್ಲಿಗೆಯ ದಂಡೆಯನು,’ ಈ ಮಾತಿನಲ್ಲಿ ಗರ್ಭಿತವಾದ ಭಾವವನ್ನು ಸ್ಪಷ್ಟಗೊಳಿಸಿರಿ. ೩. ಬಸುರಿ ಹೆಂಗುಸಿನ ಸಮಾಧಾನವು ಏತರಿಂದಾಗ-ಬಹುದೆಂದು ಬಳೆಗಾರನು ಸೂಚಿಸುತ್ತಾನೆ ?

# ೫. ಮಗುವಿನ ಕರೆ

[ ದ. ರಾ. ಬೇಂದ್ರೆಯವರ “ನಿರಾಭರಣಸುಂದರಿ” ಎಂಬ ಪುಸ್ತಕದಿಂದ ಈ ಕತೆಯನ್ನು ಆರಿಸಿಕೊಳ್ಳಲಾಗಿದೆ. ಸೊ. ಓ. ನ ಆರನೆಯ ಪುಸ್ತಕದ ೪೧ ನೆಯ ಪಾಠದಲ್ಲಿ ಈ ಲೇಖಕರ ಪರಿಚಯ ಕೊಟ್ಟಿದೆ. ಈ ಕತೆಯಲ್ಲಿ ಒಂದು ಕುಟುಂಬದ ವಸ್ತುಸ್ಥಿತಿಯ ಚಿತ್ರವು ಕಂಡುಬರುತ್ತಿದೆ. ಅತ್ತೆಯಮನೆಯ ಸೊಸೆಯ ತೊಂದರೆಯ ಸಹಜ ಚಿತ್ರವು ಇಲ್ಲಿ ಚಿತ್ರಿ-ಸಲ್ಪಟ್ಟಿದೆ. ಮಗುವನ್ನು ನೆನಿಸಿ ತಾಯಿ ಆತ್ಮಹತ್ಯೆಯಿಂದ ಹೇಗೆ ತಿರು-ಗಿದಳೆಂಬದನ್ನು ಲೇಖಕರು ಮನೋವೇಧಕವಾಗಿ ಬಣ್ಣಿಸಿದ್ದಾರೆ. ]

ಮಟಮಟ ಮಧ್ಯಾಹ್ನ. ಅಂಥ ಹೊತ್ತಿನಲ್ಲಿ ಆ ಹಳ್ಳಿಯಲ್ಲಿಕೂಡ ಯಾರೂ ಮನೆಯಿಂದ ಹೊರಬೀಳಲಾರರು. ಆದರೆ ಶಾಸ್ತ್ರಿಗಳ ಸೊಸೆಯು ಮಧ್ಯಾಹ್ನ ಕುಡಿಯುವ ನೀರು ತರಲು ಊರ ಹೊರಗಿನ ಬಾವಿಗೆ ಹೊರಟಳು. ಏನು ದಿವ್ಯ ಮಾಡಿದಳು ? ಎಂದು ಯಾರಾದರೂ ಕೇಳ-ಬಹುದು. ಬಾವಿಯಿಂದ ಹಳ್ಳಿಯ ಕೊನೆಯ ಮನೆ ಅರ್ಧ ಮೈಲು ದೂರವಿತ್ತು. ಆಲದ ಹಾಗು ಹುಣಿಸೆಯ ಎರಡು ದೆವ್ವನಂಥ ಮರಗಳ ಹೊರತು ಆ ಬಾವಿಯ ಸಮೀಪಕ್ಕೆ ಬೇರೆ ಉಲಿವು ಯಾವದೂ ಇರಲಿಲ್ಲ. ಹಳೆಯ ಕೋಟೆಯ ಹಾಳು ಕಂದಕದೊಳಗಿಂದ ಹೊರಬೀಳುವ ಕಾಡು ಮಿಕಗಳು ಹಳ್ಳಕ್ಕೆ ನೀರು ಕುಡಿಯಲು ಹೊರಟಿದ್ದರೇನೋ ಅದೇ ಸದ್ದು

ಬಾವಿಯ ಬಳಿ ಕೇಳಿಸಬೇಕು. ಆದರೆ ಆ ಸದ್ದು ಎಂಥ ಸದ್ದು ! ಹೆದರಿ-ಸುವ ಸದ್ದು. ಮರಗಳ ನೆರೆಯಾದರೂ ಆ ಬಾವಿಯ ಭಯಾನಕತೆಯನ್ನೇ ಹೆಚ್ಚಿಸುತ್ತಿದ್ದಿತು. ಕುಡಿಯುವ ನೀರಿನ ಬಾವಿಯು ಆ ಊರಿಗೆ ಅದೊಂದೇ. ಎಲ್ಲರಂತೆ ಶಾಸ್ತ್ರಿಗಳ ಮನೆಯವರೂ ಪ್ರಾತಃಕಾಲಕ್ಕೇ ತಮಗೆ ಬೇಕಾಗುವ ನೀರು ನಿಡಿ ತಂದುಕೊಂಡಿದ್ದರು. ಆದರೆ ಮಡಿ-ಯೊಳಗೆ ಇದ್ದ ಒಂದೇ ಒಂದು ಕೊಡವು ಶಾಸ್ತ್ರಿಗಳ ಮನೆಯ ಸಂದಿಯ ಸಮಾರಾಧನೆಯಲ್ಲಿ ಉರುಳಿತು. ಆದರಿಂದ ಅಡಿಗೆಯ ಮನೆಯಲ್ಲಿಯೇ ಆದ ತೊಂದರೆ ಇರಲಿ, ಶಾಸ್ತ್ರಿಗಳ ಸೊಸೆ ನೀರಿಗೆ ಹೊರಡಬೇಕಾಯಿತು.

ಶಾಸ್ತ್ರಿಗಳ ಮನೆಯ ತೊಂದರೆಯನ್ನು ಅದನ್ನು ನೋಡಿದವರೆ ತಿಳಿಯಬಲ್ಲರು. ಪುರಾತನಕಾಲದಲ್ಲಿ ಬಹಳ ದೊಡ್ಡ ಮನೆಯಂತೆ. ಈಗ ಅಣ್ಣತಮ್ಮಂದಿರಲ್ಲಿ ನಿಜವಾಗಿಯೆ ನೂರಾರು ಪಾಲಾಗಿ ಅವರ ಪಾಲಿಗೆ ಎರಡುವರೆ ಗೇಣಿನ ತುಂಡೊಂದು ಬಂದಿತು. ಅಷ್ಟರಲ್ಲಿ ಅವರು, ಅವರ ಕುಟುಂಬ, ಹಿರಿಯ ಮಗ, ಸೊಸೆ, ವಿಧವೆಯಾಗಿ ಮನೆಗೆ ಬಂದ ತರುಣ ಮಗಳೊಬ್ಬಳು—ಇಷ್ಟು ಜನರು ಮಾನದಿಂದ ಬದುಕು ಮಾಡು-ತ್ತಿದ್ದರು. ಶಾಸ್ತ್ರಿಗಳ ದುರ್ದೈವದಿಂದ ಅವರ ಹಿರಿಯ ಮಗನು ವ್ಯಾಧಿ-ಯಿಂದಲೋ ಬಾಧೆಯಿಂದಲೋ ಮನೆಯ ಒಂದು ಭಾಗವನ್ನು ( ಇದ್ದ ಒಂದು ಅಡಕಲ ಕೋಣೆಯನ್ನು ) ಹಿಡಿದು ನರಳುತ್ತಿದ್ದ. ಚೊಚ್ಚಲ ಮೊಮ್ಮಗನು ಮೊನ್ನೆ ಮೊನ್ನೆ ಒಂದು ಅಡಿಗೆಮನೆಯ ಒಂದು ಭಾಗವನ್ನು ಕಟ್ಟಿಕೊಂಡಿದ್ದ. ಪಡಸಾಲೆ ಎಂಬ ಹೆಸರಿನ ಭಾಗವು ( ಆ ಮನೆಗೆ ನಡುಮನೆಯೇ ಇರಲಿಲ್ಲ. ) ಶಾಸ್ತ್ರಿಗಳ ಅಧ್ಯಯನ ಅಧ್ಯಾಪನ-ಶಯನ-ವಿಶ್ರಾಂತಿ ಇವೆಲ್ಲಕ್ಕೂ ಆಶ್ರಯವಾಗಿತ್ತು. ಮಡಿಯ ಸಾಮ್ರಾಜ್ಯವೆಲ್ಲ ಅಡಿಗೆ ಮನೆಯನ್ನು ಸೇರಿತ್ತು. ಅಲ್ಲಿಯೇ ಮೊಮ್ಮಗನು ಬಿಡಾರ ಬಿಟ್ಟಿದ್ದನು. ಅಡಿಗೆಯ ಒಲೆಯ ಉರಿಯನ್ನೇ ಧೂಪದೀಪವೆಂದೂ ಅದೇ ಅಡಿಗೆಯನ್ನೇ ನೈವೇದ್ಯ ಎಂದೂ ತೋರಿಸುವಷ್ಟು ಸಮೀಪ ದೇವರ ಸಾನ್ನಿಧ್ಯವಿತ್ತು. ಮೀಸಲು ನೀರು ಈ ಸಂಧಿಯಲ್ಲಿಯೇ ತನ್ನ ಪ್ರತ್ಯೇಕ ಪ್ರತಿಷ್ಠೆಯನ್ನು ಸಾರಿತ್ತು. ಶಾಸ್ತ್ರಿಗಳ ಸೊಸೆಯು ಮಡಿಯ ನುಸು-ಳಾಟದಲ್ಲಿ ಇಣಚಿಗಿಂತ ಹೆಚ್ಚಿನ ಚಪಲತೆಯನ್ನು ತೋರಿಸುತ್ತಿದ್ದಳು.

ಆದರೂ ಅವಳ ಕಾಲು ತಾಕಿ ಕೊಡ ಉರುಳಿ, ಅಗ್ನಿದೇವರು ಶಾಂತರಾಗಿ, ದೇವರು ಜಲಸಮಾಧಿ ಹೊಂದಿದರು. ಪೂಜೆಯೂ ಆಗಿತ್ತು, ಅಡಿಗೆಯೂ ತೀರುತ್ತ ಬಂದಿತ್ತು. ಊಟಕ್ಕೆ ಕೂತ ಕಾಲಕ್ಕೆ ಹಳ್ಳ ಬಂದಂತೆ ಈ ಅನಾಹುತವಾಗಿ, ಶಾಸ್ತ್ರಿಗಳ ಮುಖದಲ್ಲಿ ಬೆಂಕಿ ಕಾಣದಿದ್ದರೂ ಹೊಗೆ ಮುಸುಕಿತು. ಅವರು ತಮ್ಮ ಹೆಂಡತಿಯನ್ನೇ ಸಿಟ್ಟಿನ ಸಮಾಧಾನದಿಂದ ನೋಡಿದರು. ಶಾಸ್ತ್ರಿಗಳ ಪತ್ನಿ ಶಾಂತಸ್ವಭಾವದವರಾದರೂ, "ಮಹಾ-ರಾಯತೀ, ಏನು ಮಾಡಿಟ್ಟೀ? ಎಲ್ಲಿಯಾದರೂ ನೀರು ತಂದು ನಮ್ಮ ಇಲ್ಲಿಯ ಸೆರೆ ಬಿಡಿಸು. ಮುಂಜಾವಿನಿಂದ ಒಲೆಹಿಡಿದು ಕೂತಿದ್ದೇನೆ. ಹೊಗೆಯಾಗದೆ ಉರಿಯಾಗಬೇಕು. ಬಿಸಿಹತ್ತದೆ ಬೆಂಕಿಯಿರಬೇಕು. ಇಷ್ಟಾಗಿ ಎಲ್ಲರಿಗೂ ಬೇಗನೆ ಪ್ರಸಾದ ಸಿಗಬೇಕು. ನಾನಾದರೂ ಏನು ಸಾಯಲಿ!" ಎಂದು ತುಸು ರಂಬಾಟವನ್ನೇ ಮಾಡಿದರು. ಸೊಸೆ ಪಿಟ್ಟೆನ್ನದೆ ಕೂಡಲೇ ಕೊಡ, ಹಗ್ಗ ತಕ್ಕೊಂಡು ನೀರಿಗೆ ಹೊರಟಳು.

ನಾದಿನಿ ಅತ್ತಿಗೆಯ ಕೂಡ ಹೊರಡಲಿಲ್ಲ. ಏನೋ ಮುಸು-ಗುಟ್ಟಿದಳು. ಶಾಸ್ತ್ರಿಗಳ ಸೊಸೆಗೆ ತಾನು ಚೊಚ್ಚಲ ಗಂಡು ಹಡೆದು ಬಂದ ಸುಖ ಇರಲಿ, ಹಡೆದದ್ದೇ ಮಹಾಪರಾಧವಾಗಿದೆಯೇನೋ ಎನಿಸಿತ್ತು. ಅತ್ತೆಯ ಮನೆಗೆ ಬಂದಂದಿನಿಂದ, ಹುಡುಗನ ಕಾಲಗುಣ ಕೆಟ್ಟ ಎಂದು ಯಾರೋ ಅಂದಿದ್ದರು ಬೇರೆ. ಏಕೆಂದರೆ, ಹುಡುಗನ ತಂದೆಗೆ ಭ್ರಮೆ ಹಿಡಿದಂತಾಗಿತ್ತು ಎರಡು ತಿಂಗಳಿಂದ. ಶಾಸ್ತ್ರಿಗಳ ಹೆಂಡತಿಗೆ ತಮ್ಮ ಮಗನ ಕಷ್ಟದಿದಿರು ಮೊಮ್ಮಗನ ಸುಖ ಮಸಕಾಗಿತ್ತು. ಬಡವರ ಸೊಸೆಗೆ ನಾಲಿಗೆ ಸಡಿಲು ಬಿಡಬಲ್ಲವರೆಲ್ಲ ಅತ್ತೆಗಳೇ. ನೆರೆ-ಮನೆಯ ಗುಬ್ಬಿಯೊಬ್ಬಳು, "ಅವಳಿಗೆ ಹುಚ್ಚ ಗಂಡ ಬೇಕಾಗಿದ್ದಾನೆಲ್ಲಿ?" ಎಂದು ಇವಳ ಕಿವಿಗೆ ಬೀಳುವಂತೆ ಆಡಿದ್ದಳು. ಊರ ಅತ್ತೆಯೊಬ್ಬಳು "ಹುಡುಗನ ಮುಖ ಅತ್ತೆ ಮನೆಯವರಾರಂತೆಯೂ ಇಲ್ಲ. ಅಪ್ಪನಂತೆ ಇಲ್ಲ, ಅಜ್ಜನಂತೆ ಇಲ್ಲ!" ಎಂದು ಪ್ರಕಟನೆ ಹೊರಡಿಸಿದ್ದಳು. ಹಾಳು-ಗುಡಿಯ ಒಕ್ಕಣ್ಣ ಪೂಜಾರಿಯೊಬ್ಬ ಈಕೆಯನ್ನು ಕಂಡಾಗ್ಗೆ ಪಿಸಿಪಿಸಿ ನಕ್ಕಿದ್ದ. ಯಾರಾರೋ ಏನೇನೋ ಅಂದಿದ್ದರು, ಆಡಿದ್ದರು. ಮಟಮಟ ಮಧ್ಯಾಹ್ನದಲ್ಲಿ ಮಸಣದ ನಾಲ್ಕು ಭೂತಗಳು ಕವಕ್ಕೆಂದು ಬಂದಂತೆ

ಅವಳ ಜೀವ ಹೆದರಿಕೊಂಡಿತು. ನೆನಸಿದಂತೆ ರೋಸಿಗಿಟ್ಟಿತು. ತಾನು ಯಾರಿಗೆ ಬೇಕಾಗಿದ್ದೇನೆ? ತನ್ನ ತಾಯಿಗೆ ಅಯ್ಯೋ ಪಾಪ, ಅವಳಿಗೆ ತಾನೊಂದು ಭಾರ. ಮದುವೆಯಾಗುವ ಮುಂಚೆ ಒಂದು ರೀತಿ, ಆದಮೇಲೆ ಇನ್ನೊಂದು ರೀತಿ. ತನ್ನ ತಾಯಿಗೆ ತಾನಲ್ಲದೆ ಯಾರಿದ್ದಾರೆ? ಹೌದು, ಅಂತೆಯೆ ತಾನು ಭಾರ. ಸಂಸಾರ ಸುಖವಾಗಿ ಇದ್ದರೆ ಅದೆಲ್ಲ ಸರಿಯಿತ್ತು. ಈಗ? ತಾನು ಅವಳೆದೆಗೆ ಹುಣ್ಣು. ತನ್ನ ಗಂಡನಿಗೆ ತಾನು ಬೇಡಾಗಿರುವೆನೆ? ಇಲ್ಲ. ಬೇಕಾಗಿರುವೆನೇ? ಅದೂ ಇಲ್ಲ. ಅವರಿಗೆ ಅವರ ಜೀವ ಸಾಕಾಗಿದೆ. ಕೂಸು ಬಂದು ತಿಂಗಳಾಗಿ ಅವರು ಅದರ ಹೆಸರನ್ನೆತ್ತಿಲ್ಲ. ಕಣ್ಣೆತ್ತಿ ನೋಡಿರುವರೋ ಇಲ್ಲವೋ— ಪಾಪ! ಅವರೆಚ್ಚರ ಅವರಿಗಿಲ್ಲ ಹೌದು. ನಾನು ಹೆಂಗಸು— ಊರವರೂ ಮನೆಯವರೂ ಹರಿದು ತಿಂದರೆ ನಾನೇನು ಮಾಡಬೇಕು? ಅತ್ತೆ ಮಾವಂದಿರಿಗೆ ನಾನಾರು? ಮಗ ಬೇಕಾದರೆ ಜಗ ಬೇಕು. ತಾನಾರಿಗೂ ಬೇಕಾಗಿಲ್ಲ. ತನಗಾರಾದರೂ ಕರುಣೆ ನೀಡುವರೆ? ಎಂದು ಆಕೆ ಸುತ್ತುಮುತ್ತು ನೋಡಿದಳು. ಹುಣಿಸೆ ಮರ, ಹಾಳುಗೋಡೆ, ಬೀಳು ಹೊಲ 'ನೀನು ಹಾಳು ಬಾವಿ ಬಿದ್ದರೆ ನಮಗೇನು' ಎನ್ನುವವರಂತೆ ತಟಸ್ಥಭಾವದಿಂದಿದ್ದವು. ಬಾವಿಯಲ್ಲಿ ಗೂಡು ಮಾಡಿದ ಹಕ್ಕಿಗಳು ಜಕ್ಕಣಿ ಕರೆದಂತೆ ಗುಬ್ಬಳಿಸಿದವು. 'ನೀರಿನ ತಳವೆ ನಿನಗೆ ತವರು, ಬಾ' ಎನ್ನುವಂತೆ ತಣ್ಣನೆಯ ನೀರು ಕಣ್ಣ ಸೆಳೆದಿತು. ಈಕೆ ಬಾವಿ- ಯನ್ನು ಹಣಿಕಿ ಹಾಕಿದಾಗ ಬಿದ್ದ ಕಣ್ಣೀರಿಗೆ ನೀರು ನಡುಗಿತು. ಈಗಾಗಳೆ ತನ್ನ ಜೀವ ನೀರಿನ ತಳಕ್ಕೆ ಹೋಗಿ ಕುಳಿತಂತೆ ತನ್ನ ಪ್ರತಿ ಬಿಂಬ ತೋರಿತು. ಹೌದು, ತಾನು ಅಲ್ಲಿಗೆ ಹೋಗಬೇಕು. ಅಲ್ಲಿ ಬಯ್ಯುವವರಿಲ್ಲ, ಬಾರಿಸುವವರಿಲ್ಲ; ಎಲ್ಲವೂ ತಣುವು, ತಣ್ಣಗೆ. ಅವಳ ಪ್ರೇತವು ಅವಳನ್ನು ಈಗಳೆ ಪಾಣಿಗ್ರಹಣ ಮಾಡಿ ಎಳೆಯುತ್ತಿತ್ತು.

ತಾನು ನೀರಿಗೆ ಬಂದವಳು, ಎಷ್ಟು ಹೊತ್ತಾಯಿತು, ಏನು ಮಾಡುತ್ತಿರುವಳೆಂಬ ಅರಿವು ಅವಳಿಗಿರಲಿಲ್ಲ. ಒಂದು ಲೋಕದ ಗುರುತ್ವಾಕರ್ಷಣದ ತಕ್ಕೆಯನ್ನು ತಪ್ಪಿಸಿಕೊಂಡ ಧೂಮಕೇತುವೊಂದು ಅಧೋಲೋಕಕ್ಕೆ ಧುಮುಕಲು ಹೊರಟಂತೆ ಅವಳ ಜೀವದ ಚಿಕ್ಕೆಯು

ತನ್ನ ಬಂಧಗಳನ್ನೆಲ್ಲ ತಟತಟನೆ ಹರಿದುಕೊಂಡು ಬೇರೆ ಸೆಳವಿಗೆ ಬಿದ್ದಿತ್ತು. ಕೊಡಕ್ಕೆ ಕಟ್ಟಬೇಕಾದ ಉಕ್ಕಡವನ್ನು ಅವಳು ತನ್ನ ಕೊರಳಿಗೆ ಕಟ್ಟಿಕೊಂಡಳು. ನೆರೆಯ ಹುಣಿಸೆಯ ಮರದಿಂದ ಹಾಲಕ್ಕಿಗಳೆರಡು ಚಿಲಿಪಿಲಿಗುಟ್ಟಿದವು. ಈಕೆ ತಾನಿದೇನು ಮಾಡುತ್ತೇನೆಂದು ಕೊರಲಿನ ಕುಣಿಕೆಯನ್ನು ನಡುವಿಗೆ ಬಿಗಿದು ಸರಿಮಾಡಿದಳು. ಅವಳ ಕೆಲಸವೆಲ್ಲ ಮೈದುಂಬಿದಂತೆ ಆವೇಶದಿಂದ ಸಾಗಿತ್ತು. ಹಗ್ಗದ ಒಂದು ತುದಿಯನ್ನು ಅವಳು ಮೇಲಿನ ತೊಲೆಯ ಅಡ್ಡಗಂಬಕ್ಕೆ ಬಿಗಿದಳು. ಬಾವಿಗೆ ನಮಸ್ಕಾರ ಮಾಡಿದಳು. ಸೂರ್ಯನಿಗೆ ನಮಸ್ಕಾರ ಮಾಡಿದಳು. ತನ್ನ ಸೆರಗು, ಕೂದಲು ಸಾವರಿಸಿಕೊಂಡಳು. ಬಾವಿಯ ತುದಿಗೆ ತನ್ನ ಪಾದ ಇಟ್ಟಳು. ಹಿಂದೆ ಯಾರದೋ ಕಾಲ ಸಪ್ಪಳವಾಯಿತು. ಹಿಂದಿರುಗಿ ನೋಡಿದಳು. ಯಾರೂ ಇರಲಿಲ್ಲ. ಅವಳು ಹಗ್ಗವನ್ನು ಮೈಗೆ ಸುತ್ತಿಕೊಂಡಳು. ಬಾವಿಯಲ್ಲಿ ಇಳಿಯಲು ಸಿದ್ಧಳಾದಳು. ಯಾರೋ ಅತ್ತಂತಾಯಿತು. ಅದಾರು ? ಯಾರ ಗೊಡವೆ ಇವಳಿಗೇನು ? ಇವಳಿಗಾರಿದ್ದಾರೆ ? ಅವಳು ಹಗ್ಗವನ್ನು ನಮಸ್ಕರಿಸಿದಳು. ಯಾರೋ ಕೂಗಿದರೇನು ? ಕೂಗಿದರೋ? ಅತ್ತರೋ ? ತನ್ನ ಕೂಸೇನು ? ಕುಡಿದು ಮಲಗಿ ಬಹಳ ಹೊತ್ತಾಯಿತು. ಎದ್ದಿರಬಹುದು. ಹಸಿದಿದ್ದೀತು ಏಕೆ ಅತ್ತಿರಲಾರದು ? ಅವಳು ತನ್ನ ಹಗ್ಗದ ಸುತ್ತನ್ನು ಬಿಡಿಸಿದಳು, ಉಕ್ಕಡವನ್ನು ಉಚ್ಚಿದಳು. ಬರಿಗೊಡವನ್ನು ಬಗಲಿಗೆತ್ತಿ ಹೊರಟಳು. ಎಲ್ಲಿಗೆ ? ಎಲ್ಲಿ ಮನೆ ? ಎಲ್ಲಿ ಭಾವಿ ? ಕೂಗುವವರಾರು ? ಕೇಳಿಸಿದ್ದೇನು ? ಈಗಾರೂ ಅಳುತ್ತಿಲ್ಲ, ಕರೆಯುತ್ತಿಲ್ಲ. ತಾನು ಹುಚ್ಚಿ, ತನ್ನ ಭ್ರಮೆಯಿದು. ಆಕೆ ಮತ್ತೆ ಭಾವಿಯತ್ತ ಹೊರಳಿದಳು. ಅತ್ತ ನೋಡಿದಳು, ಇತ್ತ ನೋಡಿದಳು ; ಮಟಮಟ ಮಧ್ಯಾಹ್ನ ! ಭಾವಿಯಲ್ಲಿ ಗೂಡು ಮಾಡಿದ ಹಕ್ಕಿಗಳೆರಡು ಕೂಜಿಸುತ್ತ ಅತ್ತ ಹೋದವು. ತನ್ನ ಕೊಡ ಬರಿದು ! ತಾನು ಬಂದು ಎಷ್ಟು ಹೊತ್ತಾಯಿತು ! ಆಕಾಶವಾಣಿ ಬಂದಂತೆ ಇನ್ನೂ ಕೂಸು ಕರೆಯುತ್ತಿದೆ. ಪಾಪ, ಅದಕ್ಕೆ ತಾನಲ್ಲದೆ ಯಾರು ? ಅತ್ತೆಯವರಿಗೆ ಮಾವನವರಿದ್ದಾರೆ. ಮಾವನವರಿಗೆ ಅವರ ಮಗನಿದ್ದಾನೆ. ಅವರಿಗೆ ತಾನಿಲ್ಲದಿದ್ದರೆ ಇನ್ನೊಬ್ಬಳು ಮಾಲೆಹಿಡಿದು ಕುಳಿತಿದ್ದಾಳು ! ತನ್ನ

ಮಗುವಿಗೆ ತಾನಲ್ಲದೆ ಯಾರು? ಹೌದು, ತನ್ನ ತಾಯಿಗೆ ತಾನಲ್ಲದೆ ಯಾರು? ಬರುವವಳು ಬಂದಾಗ ಬರಲಿ. ಭ್ರಮೆ ಹಿಡಿದವರ ಕೈ ಬಿಡುವದೇ? ಅವರು ತನಗೆ ಏನೂ ಅಂದಿಲ್ಲವಲ್ಲ! ತನ್ನನ್ನು ಕಣ್ಣೀರು ತಂದು ನೋಡುತ್ತಾರೆ. ಹೌದು, ಅವರು ಹಸಿದಿದ್ದಾರೆ, ಮಾವನವರು ಏನಂದಾರು? ಅತ್ತೆಯವರು ಏನಂದುಕೊಂಡಿರಬಹುದು! ಏನು ನೊಂದುಕೊಂಡಿರಬಹುದು!

ವಾತ್ಸಲ್ಯ, ಪತಿಭಕ್ತಿ, ಕೃತಜ್ಞತೆ, ಆದರ, ಇವೆಲ್ಲ ನಾಲ್ಕೆಳೆಯ ಹಗ್ಗವಾಗಿ ಹೊಸೆದು ಆಕೆಯನ್ನು ಮನೆಯತ್ತ ಎಳೆಯಹತ್ತಿದ್ದವು. ಆಕೆ ಬಾವಿಗೆ ಬಂದು ಕೊಡ ಸೇದಿದಳು. ಬಿರಬಿರನೆ ಮನೆಗೆ ಹೊರಟಳು. ಕೂಸಿನ ದನಿ ಕಿವಿದುಂಬಿತ್ತು. ವಾತ್ಸಲ್ಯವು ಎದೆದುಂಬಿ ಬಂದಿತ್ತು.

ಹಾದಿಯಲ್ಲಿ ಒಬ್ಬ ಮುತ್ತೈದೆ, "ಎಷ್ಟೊತ್ತಿಗವ್ವಾ ನೀರಿಗೆ ಹೋಗೋದು?" ಎಂದಳು. ಗುಡಿಯ ಹತ್ತಿರ ಬೆಕ್ಕೊಂದು ಬಲಕ್ಕೆ ಹೋಯಿತು. ಈಕೆ ದೇವರಿಗೆ ತಲೆಬಾಗಿಸಿದಳು, ಕೈಜೋಡಿಸುವ ಸನ್ನೆ-ಮಾಡಿದಳು. ಮನೆಗೆ ಬಂದಾಗ ಮಾವನವರು ತಾಂಬೂಲಮೆಲ್ಲುತ್ತಿದ್ದರು. ಕೂಸು ಯಜಮಾನರ ತೊಡೆಯಮೇಲಿತ್ತು. ಅತ್ತೆ, "ಬಾ, ತಾಯಿ, ಬಿಸಿಲಲ್ಲಿ ಹೋಗಿದ್ದಿ, ಬಾವಿಯ ಮೇಲೆ ಯಾರಿರತಾರ? ನಾನೇ ಕಳಿಸ-ಬಾರದಿತ್ತು" ಎಂದು ಮರುಗಿದಳು.

ಕೊಡವನ್ನು ದೇವರ ಬದಿಗಿಟ್ಟು ಮೈಯ, ಮುಖದ ಬೆವರೊರಸು-ವಾಗ ನಾದಿನಿ ಮಗುವನ್ನು ತಂದು ಮಡಿಲಲ್ಲಿಟ್ಟಳು. ಅದು ಆಗ ಅಳ-ಹತ್ತಿತು. ತನಗಾಗಿ ಒಂದು ಜೀವಂತ ಜಗತ್ತು ಅಳುತ್ತಿರುವಾಗ, ಯಾರದೋ ಮಾತಿಗಾಗಿ ಮಧ್ಯಾಹ್ನದ ಬೇಸರಕ್ಕೆ ತಾನು ಜೀವಕ್ಕೆರ-ವಾಗುತ್ತಿದ್ದೆನಲ್ಲಾ ಎಂದು ಆಕೆಗೆ ಎನಿಸಿತು. ತಾಯಿಯ ನೆನಪಾಗಿ ಕಣ್ಣೀರು ಬಂತು. ಅದನ್ನೊರಸಿ ತಮ್ಮ ಕುಲದೇವರಿಗೆ ಮನದಲ್ಲಿಯೇ ಆಕೆ ಬಾಗಿದಳು. ಅತ್ತೆ, ಅತ್ತಿಗೆ, ನಾದಿನಿಯರು ಊಟಕ್ಕೆ ಕುಳಿತಾಗ ಮಗುವೂ ಮನೆಯೂ ನಲಿಯುತ್ತಿತ್ತು.

—ದ. ರಾ. ಬೇಂದ್ರೆ.

೧. ಶಾಸ್ತ್ರಿಗಳ ಮನೆಯಲ್ಲಿ ಯಾವ ಯಾವ ತೊಂದರೆಗಳಿದ್ದವು? ೨. ಸೊಸೊಗೆ ತನ್ನ ಜೀವ ಬೇಡಾಗುವಂತೆ ಸುತ್ತಲಿನ ಜನರು ಏನೇನು ಅನ್ನುತ್ತಿದ್ದರು? ೩. ಸೊಸೆ ತನ್ನ ಜೀವಕೊಡುವ ನಿರ್ಧಾರವನ್ನು ಏಕೆ ಬಿಟ್ಟಳು? ೪. ಸ್ಪಷ್ಟೀಕರಿಸಿರಿ: (ಅ) ಮಡಿಯ ಸಾಮ್ರಾಜ್ಯವೆಲ್ಲ ಅಡಿಗೆಯಮನೆಯನ್ನೇ ಸೇರಿತ್ತು. (ಆ) ಬಡವರ ಸೊಸೆಗೆ ನಾಲಿಗೆ ಸಡಿಲು ಬಿಡುವವರೆಲ್ಲರೂ ಅತ್ತೆಗಳೇ. (ಇ) ವಾತ್ಸಲ್ಯ, ಪತಿಭಕ್ತಿ, ಕೃತಜ್ಞತೆ, ಆದರ, ಇವೆಲ್ಲ ನಾಲ್ಕೆಳೆಯ ಹಗ್ಗವಾಗಿ ಹೊಸೆದು ಆಕೆಯನ್ನು ಮನೆಯತ್ತ ಎಳೆಯಹತ್ತಿದವು. ೫. ನೀವಿರುವ ಮನೆಯ ವರ್ಣನೆಯನ್ನು, ಅದನ್ನು ನೋಡದವರಿಗೆ ತಿಳಿಯುವಂತೆ ಬರೆಯಿರಿ.

## ೬. ಸಿ. ವಿ. ರಾಮನ್

[ ವಿಜ್ಞಾನಶಾಸ್ತ್ರ ಶೋಧಗಳಿಂದ ಲೋಕವಿಖ್ಯಾತರಾದ ನಮ್ಮದೇಶದ ಒಬ್ಬ ಶಾಸ್ತ್ರಜ್ಞರ ಪರಿಚಯವು ಇದರಲ್ಲಿದೆ. ]

ಕಡಲು ನೋಡಿದೀರ ನೀವು? ಅದರ ನೀರಿನ ಬಣ್ಣ ಯಾವುದು ಗೊತ್ತೆ? ನೀಲಿ; ಮುಗಿಲ ಬಣ್ಣ. ನಕ್ಷೆಗಳಲ್ಲಾದರೂ ನೋಡಿರ-ಬೇಕು. ಕಡಲು ಆಳವಾದಂತೆ ಬಣ್ಣ ಗಟ್ಟಿನೀಲಿ. ಅದೇ ಕಡಲ ಅಂಚಿನಲ್ಲಿ ನಿಂತು ನೋಡಿದರೆ ಕಡಲು ಕಾಮನಬಿಲ್ಲು; ಬಣ್ಣದ ಸಂತೆ. ಮನೆಯಲ್ಲಿ ತಿಳಿನೀರಿಗೆ ಬಣ್ಣ ಇದೆಯೆ? ಇಲ್ಲ. ಹಾಗಾದರೆ ನೀರಿಗೆ ಬಣ್ಣ ಇದೆಯೊ ಇಲ್ಲವೊ? ಇಲ್ಲದಿದ್ದರೆ ಕಡಲಲ್ಲಿ ಕಾಣುವ ಬಣ್ಣ ಎಲ್ಲಿಯದು? ಯಾವುದರ ಬಣ್ಣ ಅದು?

ನಮಗೆ ಈ ಪ್ರಶ್ನೆಗೆ ಉತ್ತರ ಹೊಳೆಯಲಿಕ್ಕಿಲ್ಲ. ಸಿ. ವಿ. ರಾಮನರಂತೆ ನಾವೂ ಕಡಲ ತಡಿಯ ಊರಲ್ಲೇ ಬೆಳೆದಿರಬಹುದು. ದಿನವೂ ಕರೆಯಲ್ಲಿ ನಿಂತು ಕಡಲ ಬಣ್ಣದ ಮಯೂರ ನಾಟ್ಯವನ್ನು ಕಣ್ಣುತುಂಬ ನೋಡಿರಲೂ ಬಹುದು, ವೆಂಕಟರಾಮನ್ ಓದಿದಂತೆ

ವಿಜ್ಞಾನವನ್ನು ಬಲು ಪ್ರೀತಿಯಿಂದ ಓದಿರಬಹುದು; ಕಾಲೇಜಿನಲ್ಲಿ ವಿಜ್ಞಾನ ಶಾಸ್ತ್ರದ ಪಂಡಿತರನ್ನೇ ಬೆರಗುಗೊಳಿಸುವ ವಿದ್ಯಾರ್ಥಿಯಾಗಿರ-ಬಹುದು; ಹದಿನಾರು ವರ್ಷಕ್ಕೇ ಬಿ. ಎ. ಆಗಲೂ ಬಹುದು; ರಾಮನ್-ಗಿದ್ದ ಎಲ್ಲ ಗೆರೆಯೂ ಇದ್ದೀತು; ಆದರೆ ಈ ಸೃಷ್ಟಿರಹಸ್ಯವನ್ನು ಗಮನಿಸಿ ಅದನ್ನು ಪರಿಶೋಧಿಸುವ ಆಸೆ, ಸಾಮರ್ಥ್ಯ ಮಾತ್ರ ಪ್ರತಿಭೆಯ ವೈಶಿಷ್ಟ್ಯ. ವೆಂಕಟರಾಮನ್ ನಿಜವಾಗಿ ಪ್ರತಿಭಾಶಾಲಿ. ಈ ಸಮಸ್ಯೆಗೆ ಆತ ಉತ್ತರ ಹುಡುಕಿದರು.

ಕಡಲ ನೀರಿನ ಬಣ್ಣ ನೀರಿನದಲ್ಲ; ಅದರ ಮೇಲೆ ಬೀಳುವ ಸೂರ್ಯನ ಬೆಳಕಿನದು. ಪ್ರಖರವಾದ ಆ ಬೆಳಕು ನೀರಿನಲ್ಲಿ ಮುಳುಗಿ ಕರಗಿಹೋದಾಗ ಈ ಬಣ್ಣ ಹುಟ್ಟಿತು. ಈ ವೈವಿಧ್ಯಕ್ಕೆ ಕಾರಣ ಬೆಳಕಿನ ಕಿರಣಗಳ ಆಟ. ಈ ಸಂಗತಿಯೇ ವೆಂಕಟರಾಮನರ ವೈಜ್ಞಾನಿಕ ವಿಜಯದ ತಳಹದಿ; ಅವರು ೧೯೧೭ ರಿಂದ ೧೯೩೨ರ ತನಕ ಹದಿನೈದು ವರ್ಷಕಾಲ ನಡೆಸಿದ ಅಖಂಡ ಪರಿಶೋಧನೆಯ ಮೂಲಾಧಾರ.

೧೯೦೬ ರಲ್ಲಿಯೆ—ಇನ್ನೂ ಎಂ. ಎ. ತರಗತಿಯಲ್ಲಿ ಓದುತ್ತಿರು-ವಾಗಲೆ, ಹದಿನೆಂಟು ವರ್ಷದ ಪ್ರಾಯಕ್ಕೇ— ವೆಂಕಟರಾಮನ್ ತನ್ನ ಪ್ರಯೋಗಜೀವನ ಪ್ರಾರಂಭಮಾಡಿದರು. ಆಂಧ್ರದೇಶದ ವಾಲ್ಟೇರಿನಲ್ಲಿ ಕಡಲೂ ಬಾನೂ ಸೇರಿ ದೂರದಲ್ಲಿ ಆಡುತ್ತಿದ್ದ ಬಿಸಿಲುಕೋಲಾಟವನ್ನು ಎಳೆತನದಿಂದ ನೋಡಿದ್ದ ರಾಮನ್‌ಗೆ ಬೆಳಕಿನ ಕಣ್ಣುಮುಚ್ಚಾಲೆಯೇ ಪ್ರಯೋಗವಸ್ತುವಾಯಿತು. ಅವರ ತಂದೆ ಚಂದ್ರಶೇಖರ ಅಯ್ಯರ್ ಅಲ್ಲಿ ಭೌತಶಾಸ್ತ್ರದ ಅಧ್ಯಾಪಕರು. ಮನೆತನ ಚೆಲ್ಲೋ ಪಂಡಿತರದು. ಅವರ ತಾತ—ತಾಯ ತಂದೆ— ವಂಗದೇಶಯಾತ್ರೆ ಮಾಡಿದ ನ್ಯಾಯ-ಶಾಸ್ತ್ರ ಪಂಡಿತರು.

ಎಂ. ಎ. ಪರೀಕ್ಷೆಯಲ್ಲಿ ಪ್ರಥಮ ತರಗತಿ; ಭೌತಶಾಸ್ತ್ರದಲ್ಲಿ ಅಷ್ಟು ಗುಣ ಯಾರೂ ತೆಗೆದಿಲ್ಲ ಮದರಾಸು ವಿಶ್ವವಿದ್ಯಾನಿಲಯದಲ್ಲಿ. ವಿಜ್ಞಾನದಿಂದ ಲೇಸಾಗಿ ಹೊಟ್ಟೆಹೊರೆಯಲು ಪರಿಸ್ಥಿತಿ ಅನುಕೂಲ-ವಿರಲಿಲ್ಲ ಆಗ. ಇಂಗ್ಲೆಂಡು ಪ್ರವಾಸವಿಲ್ಲದೆ ಪ್ರತಿಭಾಶಾಲಿಗಳಾದ

ಹಿಂದುಸ್ಥಾನೀ ಜನಕ್ಕೆ ಸಿಗುತ್ತಿದ್ದ ಚಿಲ್ಲರೆ ಕೆಲಸ ಆರ್ಥಿಕಶಾಖೆ-
ಯೊಂದರಲ್ಲಿ. ರಾಮನ್ ಆ ಪರೀಕ್ಷೆಗೆ ಕೂತರು; ಪಥಮಸ್ಥಾನ ಕಾದು
ನಿಂತಿತ್ತು. ಸರಿ; ಹಿಂದೀ ಸರಕಾರದ ಅರ್ಥಶಾಖೆಯಲ್ಲಿ ಅಧಿಕಾರಿ-
ಯಾದರು. ಹತ್ತುವರ್ಷ ಕಾಲ, ೧೯೧೭ ರ ತನಕ ಅದು ನಡೆಯಿತು.



ಅದರಲ್ಲೂ ರಾಮನ್ ಸುಮ್ಮನೆ ಕೂಡಲಿಲ್ಲ. ಕಲಕತ್ತೆ, ರಂಗೂನ್,
ನಾಗಪುರಗಳಿಗೆ ತಿರುಗಬೇಕಾಯಿತು. ವಿಮಾಪದ್ಧತಿ, ನಾಣ್ಯಚಲಾವಣೆ,
ಬ್ಯಾಂಕಿನ ವ್ಯವಸ್ಥೆ, ಸರಕಾರದ ಆಯವ್ಯಯ ಪಟ್ಟಿಯ ರೀತಿ ಎಲ್ಲ-
ವನ್ನೂ ಕೂಲಂಕಷವಾಗಿ ತಿಳಿದುಕೊಂಡರು. ಯಾವ ದಾರಿಯಲ್ಲಿ
ಬಿಟ್ಟರೂ ಜಾತಿಕುದುರೆಯ ನಡಿಗೆ ಅದರದೇ. ಮೇಲಿನವರಿಗೆ ಇವರ

ಜಾಣ್ಮೆ ತಿಳಿದು ಮೇಲುಪದವಿಗೇರಿಸಲು ಬಯಸಿದರು. ರಾಮನ್ ಅದಕ್ಕೊಪ್ಪಲಿಲ್ಲ. ಅಷ್ಟು ಹೊತ್ತಿಗೆ ಅವರ ಬದುಕು ಬೇರೆ ದಾರಿ ಹಿಡಿಯಿತು. ಕೊಳ್ಳದಲ್ಲಿ ಕಾಡಿನಲ್ಲಿ ಹರಿಯುತ್ತಿದ್ದ ಅವರ ವಿಜ್ಞಾನ-ಪ್ರಯೋಗ ಪ್ರೀತಿಗೆ ವಿಶಾಲವಾದ ಮೈದಾನ ದೊರೆಯಿತು. ಒಮ್ಮಿಂ-ದೊಮ್ಮೆಗೆ ನದಿ ಅಗಲವಾಗಿ, ಜನರಿಗೆ ಉಪಯೋಗವಾಗಿ, ಕಣ್ಣಿಗೆ ಹಬ್ಬವಾಗಿ ಹರಿಯತೊಡಗಿತು.

ಆ ಸಂದರ್ಭ ಹೀಗೆ. ಅರ್ಥಶಾಖೆಗೆ ಸೇರಿದರೂ ರಾಮನ್ ತನ್ನ ವಿಜ್ಞಾನ ಪ್ರಯೋಗದ ರುಚಿಯನ್ನು ಕಳೆದುಕೊಳ್ಳಲಿಲ್ಲ. ಕಲಕತ್ತೆಯ ಭಾರತೀಯ ವಿಜ್ಞಾನವರ್ಧಿನೀ ಸಂಘದ ಪ್ರಯೋಗಶಾಲೆಗೆ ಬಿಡುವಾದಾ-ಗೆಲ್ಲ ಹೋಗಿ ತಮ್ಮ ಪ್ರಯೋಗಗಳನ್ನು ನಡೆಸುತ್ತ ಬಂದರು. ರಂಗೂನ್ ನಾಗಪುರಗಳಲ್ಲಿದ್ದಾಗ ಅವರ ಮನೆಯೇ ಪ್ರಯೋಗಶಾಲೆ. ಅಲ್ಲಿ ಅವರ ಹರಿತವಾದ ಬುದ್ಧಿಗೆ ಕಂಡ ಸ್ವತಂತ್ರವಿಚಾರಲಹರಿ ಅಲೆಯಲೆಯಾಗಿ ಹೊರಬೀಳುತ್ತಲೇ ಇತ್ತು. ಈ ಲೇಖನಗಳನ್ನೆಲ್ಲ ಕಲಕತ್ತೆಯ ವಿಶ್ವ-ವಿದ್ಯಾನಿಲಯದ ಸ್ಥಾನಪತಿ ಆಶುತೋಷ ಮುಖರ್ಜಿ ನೋಡಿದರು. ಇಂಥ ಪ್ರತಿಭಾಶಾಲಿಯಾದ ವಿಜ್ಞಾನಿಯನ್ನು ತಮ್ಮ ವಿಶ್ವವಿದ್ಯಾನಿಲ-ಯಕ್ಕೆ ಹೇಗಾದರೂ ತಂದುಕೊಳ್ಳಬೇಕೆಂಬ ಬಯಕೆಯಾಯಿತು. ಒಳ್ಳೆ ಹೂಗಾರನಿದ್ದಂತೆ ಮುಖರ್ಜಿ. ಚೆಲೋ ಹೂ ಕಂಡರಾಯಿತು, ತನ್ನ ಮಾಲೆಗೆ ಅದನ್ನು ಸೇರಿಸುವುದೇ. ಪ್ರತಿಭಾಶಾಲಿಗಳು ಎಲ್ಲೇ ಇರಲಿ, ಯಾರೇ ಇರಲಿ, ತಮ್ಮ ವಿದ್ಯಾಲಯಕ್ಕೆ ಅವರನ್ನು ತಂದುಕೊಳ್ಳುವುದು ಅವರ ಗುಣ. ರಾಮನ್ ೧೯೧೭ ರಲ್ಲಿ ಅಲ್ಲಿ ಭೌತಶಾಸ್ತ್ರದ ಅಧ್ಯಾಪಕ-ರಾದರು.

ಅರ್ಥಶಾಖೆಯಲ್ಲಿ ಮೇಲಧಿಕಾರ ಬೇಕೋ, ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕ ಪದವಿ ಬೇಕೋ ಎಂದರೆ ಹೆಚ್ಚು ಸಂಬಳ ಸಿಗುವ ಅಧಿಕಾರ ಬೇಡ, ಇದೇ ಇರಲಿ ಎನ್ನುತ್ತಾರೆಯೇ ಯಾರಾದರೂ ? ಬಂಗಾರದ ಕಾಲುದೀಪ ಬೇಡ, ತಿಳಿವಿನ ಹಣತೆಯೇ ಸಾಕು ಎಂದರು ವೆಂಕಟ-ರಾಮನ್. ವಿಜ್ಞಾನಕ್ಕಾಗಿ ಅವರು ಮಾಡಿದ ತ್ಯಾಗ ಬಲು ದೊಡ್ಡದು.

ಅವರು ಜಗತ್ತಿಗೆ ನೀಡಿದ ವಿಜ್ಞಾನದಾನಕ್ಕಿಂತ ಅವರೀ ತ್ಯಾಗ ಹಿರಿದು; ಅವರ ಜೀವನದ ರಸನಿಮಿಷ ಅದು.

ರಾಮನ್ ಅಧ್ಯಾಪಕರಾದರೋ ಇಲ್ಲವೋ, ಕಲಕತ್ತೆ ವಿಜ್ಞಾನ-ಪ್ರಯೋಗಕ್ಕೆ ತವರುಮನೆಯಾಯಿತು. ಹೂವಿದ್ದ ಕಡೆ ದುಂಬಿಗಳಿಗೆ ಕಡಮೆಯೇ? ವಿಜ್ಞಾನ ವಿದ್ಯಾರ್ಥಿಗಳೆಷ್ಟೋ ಜನ ಗುರುವಿನ ಬಳಿಗೆ ಓಡಿಬಂದರು. ಅವರಲ್ಲೆಷ್ಟೋ ಜನ ಈಗ ಹೆಸರಾದ ವಿಜ್ಞಾನಿಗಳು; ಎಷ್ಟೋ ಜನ ದೊಡ್ಡ ಅಧಿಕಾರಿಗಳು. ಆ ಕಾಲದಲ್ಲೆ ವೆಂಕಟರಾಮನರ ಪ್ರಯೋಗಸಿದ್ಧಿ ಜಗತ್ತನ್ನೇ ಬೆರಗಾಗಿಸಿದುದು. 'ಭಾರತೀಯ ಭೌತ-ಶಾಸ್ತ್ರ'ವೆಂಬ ಪತ್ರಿಕೆ ಆ ಸಿದ್ಧಸತ್ಯಗಳ ದುಂದುಭಿ. ಅವರೆ ಅದರ ಸಂಪಾದಕರು.

ಈ ಸತ್ಯಶೋಧನೆಗೆ ಮನ್ನಣೆಯೂ ಕಾಲಕಾಲಕ್ಕೆ ದೊರೆಯುತ್ತ ಬಂತು. ಅಧ್ಯಾಪಕರಾದ ಆರೇಳು ವರ್ಷಕ್ಕೆ ವಿಲಾಯತಿಯ ಭೌತ-ಶಾಸ್ತ್ರಸಂಘ ರಾಮನ್‌ಗೆ ಸದಸ್ಯತ್ವದ ಮರ್ಯಾದೆ ಮಾಡಿತು. ೧೯೨೯ ರಲ್ಲಿ ಬ್ರಿಟಿಶು ಸರಕಾರ 'ಸರ್' ಬಿರುದು ಕೊಟ್ಟಿತು. ಇಟಲಿಯ ಸಂಘದ ಬಿರುದು ಬಿಲ್ಲೆ, ವಿಲಾಯತಿಯ ಮೂರು ನಾಲ್ಕು ವಿಶ್ವವಿದ್ಯಾಲಯಗಳ ಗೌರವ ಪದವಿ, ಹೆಸರುವಾಸಿಯಾದ ಎಲ್ಲ ವಿಜ್ಞಾನ ಸಂಸ್ಥೆಗಳ (ಜರ್ಮನಿ, ಹಂಗೆರಿ, ಐರ್ಲೆಂಡ್, ಇಂಗ್ಲೆಂಡ್, ಸ್ಕಾಟ್ಲೆಂಡ್) ಸದಸ್ಯತ್ವ ದೊರೆತವು. ಜಗತ್ತಿನ ವಿಶ್ವವಿದ್ಯಾನಿಲಯಗಳ ಸಮ್ಮೇಳನ ೧೯೨೧ ರಲ್ಲಿ ಆಕ್ಸ್‌ಫರ್ಡಿನಲ್ಲಿ ನಡೆದಾಗ ರಾಮನ್ ಆದಕ್ಕೆ ಪ್ರತಿನಿಧಿ. ೧೯೨೪ ರಲ್ಲಿ ಗಣಿತ ಪಂಡಿತರ ಅಂತರರಾಷ್ಟ್ರೀಯ ಸಭೆ ಟೊರಾಂಟೊದಲ್ಲಿ ನಡೆದಾಗ 'ಬೆಳಕು ಹೇಗೆ ಚೆಲ್ಲುತ್ತದೆ' ಎಂಬ ವಿಷಯ ಚರ್ಚಿಸಲು ಇವರಿಗೆ ಕರೆ ಬಂತು. ಆಗ ಅಮೇರಿಕೆಯಲ್ಲಿ ನಾಲ್ಕು ತಿಂಗಳು ಕ್ಯಾಲಿಫೋರ್ನಿಯದ 'ಯಂತ್ರವಿದ್ಯಾ-ಲಯ'ದಲ್ಲಿ ಅಧ್ಯಾಪಕರಾಗಿದ್ದರು. ಮರುವರ್ಷ ರಷ್ಯದ 'ವಿಜ್ಞಾನ ಪರಿಷತ್ತಿ'ನ ಇನ್ನೂರು ವರ್ಷದ ಹಬ್ಬಕ್ಕೆ ಅತಿಥಿಯಾಗಿ ಮಾಸ್ಕೋಗೆ ಹೋಗಿದ್ದರು. ೧೯೨೯ ರಲ್ಲಿ ಅಣುವಿನ ಸ್ವರೂಪವನ್ನು ಚರ್ಚಿಸಲು ಬ್ರಿಸ್ಟಲಿಗೆ ಕರೆದರು. ಆ ಸಂದರ್ಭದಲ್ಲಿ ವಿಲಾಯತಿಯ ಮುಖ್ಯ ಸ್ಥಳ-

ಗಳಿಗೆ ಹೋಗಿ ತಮ್ಮ ಪ್ರಯೋಗದ ವಿಷಯ ತಿಳಿಸಿದರು. ಮರುವರ್ಷ ವೆಂಕಟರಾಮನ್‌ಗೆ ನೋಬೆಲ್ ಬಹುಮಾನ ದೊರೆಯಿತು. ಜಗತ್ತಿನ ಹಿರಿಯ ವಿಜ್ಞಾನಿಗಳ ಸಾಲಿನಲ್ಲಿ ಅವರ ಹೆಸರು ಸೇರಿತು. 'ರಾಮನ್ ಪರಿಣಾಮ' (ರಾಮನ್ ಇಫೆಕ್ಟ್) ಎಂಬ ಹೆಸರೇ ಬಂತು ಅವರ ಸಿದ್ಧಾಂತಕ್ಕೆ.

ರಾಮನ್ ಸಿದ್ಧಾಂತ ಬಹು ಮುಖ್ಯವಾದುದು. ವಿಜ್ಞಾನದಲ್ಲಿ ರೇಡಿಯೋ, ಕ್ಷ-ಕಿರಣಗಳ ಶಾಸ್ತ್ರಕ್ಕೆ ಇನ್ನಿಲ್ಲದಷ್ಟು ಬಲ ದೊರೆಯಿತು ಇದರಿಂದ. ಎಲ್ಲೆಲ್ಲೂ ಈ ಸಿದ್ಧಾಂತ ಚರ್ಚೆಗೆ ಬಂತು; ಇದನ್ನು ಅವಲಂಬಿಸಿ ಬೇರೆ ಬೇರೆ ಪ್ರಯೋಗ ನಾನಾ ಕಡೆ ನಡೆದವು. 'ರಾಮನ್ ಪರಿಣಾಮ' ಸಿದ್ಧಾಂತವನ್ನು ಚರ್ಚಿಸಿ ವಿಜ್ಞಾನಿಗಳು ಲೇಖನ ಬರೆದರು; ಸುಮಾರು ಎರಡುಸಾವಿರ ಲೇಖನ ಬಂದಿವೆ; ಇನ್ನೂ ಬರುತ್ತಲೇ ಇವೆ. ಭೂತಗನ್ನಡಿ, ದೂರಗನ್ನಡಿ ಮಾಡುವ ಉದ್ಯೋಗಕ್ಕಂತೂ ಹೊಸ ಜೀವ ಬಂತು.

ಬೆಳಕಿನ ಕಣ್ಣುಮುಚ್ಚಾಲೆಯ ಮಾತು ಹೇಳಿತ್ತಷ್ಟೆ. ಅದೇ ರಾಮನ್ ಸಿದ್ಧಾಂತ. ಬೆಳಕು ನೀರಿನಲ್ಲಿ ಮುಳುಗಿ ಕರಗಿದಾಗ ಬಣ್ಣ ಹುಟ್ಟಿ ಕಡಲು ನೀಲಿಯಾಯಿತು. ಇದೇ ದಾರಿ ನಡೆದು ಪ್ರಯೋಗದ ಮೇಲೆ ಪ್ರಯೋಗ ಮಾಡಿ ಬೆಳಕಿನ ಬಸಿರಲ್ಲಿರುವ ಬಣ್ಣಬಣ್ಣದ ಸಂತೆ-ಯನ್ನು ಕಂಡರು; ಅದರ ಮಾರೀಚವಿದ್ಯೆಯನ್ನು ಅರಿತರು. ಇಲ್ಲಿದ್ದ ಬಣ್ಣ ಅಲ್ಲಿಲ್ಲ; ಬೆಳಕು ಇಲ್ಲಿ ದೂರಿದರೆ ಒಂದು ಬಣ್ಣ ಹೋಗುತ್ತದೆ, ಒಂದು ಬಣ್ಣ ಬರುತ್ತದೆ. ನೀರಲ್ಲಿ ಕರಗಿದಾಗ, ಗಾಜಿನಲ್ಲಿ ದೂರಿದಾಗ ಹರಡುತ್ತ ಹರಡುತ್ತ ಬೆಳಕು ಬಣ್ಣ ಬಿಡುತ್ತದೆ; ಬದಲಾಗುತ್ತದೆ. ಪಾದರಸದ ದೀಪಹಚ್ಚಿ ಪ್ರಯೋಗಮಾಡಿ ನೋಡಿದಾಗ ರಾಮನರಿಗೆ ಇದು ಸ್ಪಷ್ಟವಾಗಿ ಖಚಿತವಾಗಿ ತಿಳಿಯಿತು. ದೀಪದ ಕಿರಣದಲ್ಲಿ ಇಲ್ಲದ ಬಣ್ಣಬಣ್ಣದ ಗೆರೆ ಆ ಬೆಳಕನ್ನು ಹೀರಿದ ಗಾಜಿನ ಇನ್ನೊಂದು ಮಗ್ಗುಲಲ್ಲಿ ಕಾಣುವ ಬಣ್ಣದ ಸಾಲಿನಲ್ಲಿ ಕಂಡುಬಂತು. ಗಾಜಿಗೆ ತಗಲುವ ಮೊದಲು ಆ ಕಿರಣದಲ್ಲಿ ಅವು ಇರಲಿಲ್ಲ; ಗಾಜೂ ಬೆಳಕೂ ಸೇರಿ ಈ ಗೆರೆ ಬಂದವು.

ಇವನ್ನು 'ರಾಮನ್ ಗೆರೆ' ಎನ್ನುತ್ತಾರೆ ಈಗ; ಆ ಬಣ್ಣದ ಸಾಲಿಗೆ 'ರಾಮನ್ ಬಣ್ಣದ ಸಾಲು' ಎನ್ನುತ್ತಾರೆ.

ಇದೊಂದು ಅಲ್ಲ ರಾಮನ್ ಮಾಡಿದ ಪ್ರಯೋಗ. ಅವರ ರುಚಿ ಬಹು ವಿಸ್ತಾರ, ಬುದ್ಧಿ ಬಲು ಹರಿತ. ಧ್ವನಿಶಾಸ್ತ್ರದಲ್ಲೂ ಅವರಿಗೆ ರುಚಿ. ಸಂಗೀತ ವಾದ್ಯಗಳ ವಿಷಯ, ನಾದತರಂಗಗಳ ವಿಷಯ ಬೇಕಾದಷ್ಟು ಬರೆದಿದಾರೆ. ನಾನಾ ಸಮಸ್ಯೆ, ಅನೇಕ ಪ್ರಯೋಗ. ಅವರು ಅಧ್ಯಾಪಕರಾಗಿದ್ದಾಗ ನಡೆಸಿದ ಪ್ರಯೋಗಗಳ ಫಲವಾಗಿ ಆರುನೂರು ಸ್ವತಂತ್ರ ಲೇಖನ ಹೊರಬಿದ್ದಿವೆ. ಎಲ್ಲದರಲ್ಲೂ ಒಂದು ವೈಶಿಷ್ಟ್ಯ, ಸ್ವಾತಂತ್ರ್ಯ ಕಾಣುತ್ತದೆ ಯಾವ ಗುರುವಿನ ಬಳಿಯಲ್ಲೂ ಕಲಿಯುವ ಭಾಗ್ಯ ಅವರಿಗೆ ಸಿಗಲಿಲ್ಲ. ಪ್ರಕೃತಿಯೇ ಅವರ ಗುರು. ವಿಲಾಯತಿಯ ಪ್ರಯೋಗಶಾಲೆಗಳ ಶಿಕ್ಷಣವೂ ಇಲ್ಲ. ಯಾರ ಪ್ರೋತ್ಸಾಹವನ್ನೂ ಕಾಣರು. ಚಿಕ್ಕಂದಿನಿಂದಲೂ ಕ್ರಕೃತಿಯ ತೊಡೆಯಲ್ಲಿ ಆಡಿದ ಮಗು. ಅವರ ಸ್ಫೂರ್ತಿ ಸ್ವಯಂಭೂ ; ಅವರ ದಾರಿ ತೀರ ಸ್ವತಂತ್ರ. ಎಲ್ಲಕ್ಕಿಂತ ಹೆಚ್ಚಿನದು ಅವರ ನಿಷ್ಠೆ.

ಬೆಂಗಳೂರಿನಲ್ಲಿ ಅಖಿಲಭಾರತದ ವಿಜ್ಞಾನಕೇಂದ್ರವಿದೆ; ತಾತಾವಿಜ್ಞಾನಶಾಲೆ. ಅಲ್ಲಿ ನಿಂತು ವೆಂಕಟರಾಮನ್ ಭಾರತವನ್ನು ಬೆಳಗಿಸುತ್ತಿದಾರೆ. ವಿಜ್ಞಾನಪ್ರಯೋಗದ ಆಸೆ ಅವರಿಗೆ ದಿನೇದಿನೇ ಇಮ್ಮಡಿಸುತ್ತಿದೆ. ಅವರ ನೆರಳಿನಲ್ಲಿ ಹಿಂದುಸ್ಥಾನದ ವಿಜ್ಞಾನಿಗಳು ತಮ್ಮ ಭವಿಷ್ಯವನ್ನು ಕಟ್ಟುತ್ತಿದಾರೆ.

—ಸಿದ್ದವನಹಳ್ಳಿ ಕೃಷ್ಣಶರ್ಮ.

**೧. ರಾಮನ್ನರಿಗೆ ಮೊದಲಿನಿಂದಲೂ ಯಾವ ವಿಷಯದಲ್ಲಿ ವಿಶೇಷ ಆಸಕ್ತಿ ಇತ್ತು ? ೨. ಇವರು ತಮಗೆ ಪ್ರಿಯವಾದ ವಿಜ್ಞಾನಕ್ಕಾಗಿ ಆರ್ಥಿಕ ಶಾಖೆಯನ್ನು ಬಿಟ್ಟ ಸಂದರ್ಭ ಹೇಳಿರಿ. ೩. ರಾಮನರ ಕಾರ್ಯಕ್ಕೆ ಯಾವ ಯಾವ ಮನ್ನಣೆ ದೊರೆಯಿತು ? ೪. ರಾಮನರ ಮುಖ್ಯ ಶೋಧವಾವುದು ? ೫. ಸ್ಪಷ್ಟೀಕರಿಸಿರಿ: (ಅ) ಯಾವ ದಾರಿಯಲ್ಲಿ ಬಿಟ್ಟರೂ ಜಾತಿಕುದುರೆಯ**

ನಡಿಗೆ ಆದರದೇ. (ಆ) ಒಮ್ಮಿಂದೊಮ್ಮೆಗೆ ನದಿ ಅಗಲವಾಗಿ ಜನರಿಗೆ ಉಪಯೋಗವಾಗಿ, ಕಣ್ಣಿಗೆ ಹಬ್ಬವಾಗಿ ಹರಿಯುತೊಡಗಿತು. (ಇ) ಒಳ್ಳೆ ಹೂಗಾರನಿದ್ದಂತೆ ಮುಖರ್ಜಿ ಚೆಲೋ ಹೂ ಕಂಡರಾಯಿತು– ತನ್ನ ಮಾಲೆಗೆ ಅದನ್ನು ಸೇರಿಸುವದೇ. (ಈ) ಬಂಗಾರದ ಕಾಲುದೀಪ ಬೇಡ; ತಿಳಿವಿನ ಹಣತೆಯೇ ಸಾಕು.

## ೭. ನಾಗರಿಕತೆ ಎಂದರೇನು?

[ ಪಂಡಿತ ಜವಾಹರ ನೆಹರೂ ಇವರು ತಮ್ಮ ಮಗಳಾದ ಇಂದಿರೆಗೆ ಪತ್ರರೂಪದಲ್ಲಿ ಎಷ್ಟೋ ವಿಷಯಗಳನ್ನು ತಿಳಿಸಿರುವರು. ಮಾನವ ಜನಾಂಗವೂ ಭಾಷೆಗಳೂ ಎಂಬ ಬಗ್ಗೆ ಅವರು ಬರೆದ ಪತ್ರವನ್ನು ಸೊ. ೬. ೬ನೆಯ ಪುಸ್ತಕದ ೫ನೆಯ ಪಾಠದಲ್ಲಿ ಕೊಟ್ಟಿರುವೆವು. ಈ ಲೇಖನದಲ್ಲಿ ನಾಗರಿಕತೆಯು ನಿಜವಾದ ಲಕ್ಷಣಗಳಾವವು ಎಂಬದನ್ನು ಚರ್ಚಿಸಿರುವರು ]

ಪುರಾತನ ಕಾಲದ ನಾಗರಿಕತೆಗಳನ್ನು ಕುರಿತು ಕೆಲ ಸಂಗತಿಗಳನ್ನು ನಿನಗೀಗ ಹೇಳುವವನಿದ್ದೇನೆ. ಆದರೆ ಮೊದಲು ನಾಗರಿಕತೆ ಎಂದರೇನೆಂಬುದರ ಕಲ್ಪನೆಯನ್ನು ಕೆಲಮಟ್ಟಿಗೆ ನಾವು ಮಾಡಿಕೊಳ್ಳಲು ಯತ್ನಿಸಬೇಕು. ನಾಗರಿಕನಾಗುವುದು ಎಂದರೆ ಸುಧಾರಣೆ ಹೊಂದುವುದು, ನಯವಾಗುವುದು ಅಥವಾ ಕಾಡುತರದ ಚಟ ಅಭ್ಯಾಸ ಇವುಗಳನ್ನು ಬಿಟ್ಟು ಒಳ್ಳೆಯವುಗಳನ್ನು ಪಡೆದುಕೊಳ್ಳುವುದು, ಹೀಗೆಂದು ಶಬ್ದಕೋಶವು ಹೇಳುತ್ತದೆ. ನಾಗರಿಕತೆ ಎಂಬುದು ಒಂದು ಸಮಾಜಕ್ಕೆ ಅಥವಾ ಒಂದು ಜನಸಮುದಾಯಕ್ಕೆ ಹೆಚ್ಚಾಗಿ ಅನ್ವಯಿಸುತ್ತದೆ. ಮಾನವನು ಇನ್ನೂ ಮೃಗದ ಹಾಗೆಯೇ ಇದ್ದಾಗಿನ ಕಾಡುಸ್ಥಿತಿಯನ್ನು ಪಶುತ್ವ ಎಂದು ಕರೆಯುತ್ತಾರೆ. ನಾಗರಿಕತೆ ಪಶುತ್ವಕ್ಕೆ ತೀರ ವಿರೋಧಕವಾದುದು. ಪಶುತ್ವವನ್ನು ಬಿಟ್ಟು ನಾವು ದೂರ ದೂರ ಹೋದಂತೆ ಹೆಚ್ಚು ಹೆಚ್ಚು ನಾಗರಿಕರಾಗುತ್ತೇವೆ.

ಆದರೆ ಒಂದು ವ್ಯಕ್ತಿಯಾಗಲಿ, ಒಂದು ಜನಾಂಗವಾಗಲಿ ಪಶುತ್ವ-ವುಳ್ಳದ್ದೋ ನಾಗರಿಕತೆಯುಳ್ಳದ್ದೋ ಎಂಬುದನ್ನು ನಾವು ಹೇಗೆ ಗುರು-ತಿಸಬಲ್ಲೆವು ? ಯುರೋಪಖಂಡದಲ್ಲಿ ಅನೇಕರು ತಾವು ನಾಗರಿಕರೆಂದೂ ಏಸಿಯಖಂಡದವರು ತೀರ ಪಶುಸಮಾನರೆಂದೂ ತಿಳಿಯುತ್ತಾರೆ. ಯುರೋಪದವರು ಏಸಿಯ ಮತ್ತು ಆಫ್ರಿಕದವರಿಗಿಂತ ಹೆಚ್ಚು ಬಟ್ಟೆ-ಗಳನ್ನು ತೊಡುತ್ತಾರೆಂದು ಅವರು ಹೆಚ್ಚು ನಾಗರಿಕರೆನ್ನಬಹುದೇ ? ಬಟ್ಟೆ ತೊಡುವುದು ಹವೆಯ ಸ್ಥಿತಿಗತಿಯನ್ನು ಅವಲಂಬಿಸಿರುತ್ತದೆ. ಶೀತಲ ಪ್ರದೇಶಗಳಲ್ಲಿಯ ಜನರು ಉಷ್ಣಪ್ರದೇಶದವರಿಗಿಂತ ಹೆಚ್ಚು ಬಟ್ಟೆಗಳನ್ನು ಧರಿಸುತ್ತಾರೆ. ಇನ್ನು ಬಂದೂಕು ಕೈಯಲ್ಲಿರುವ ಮನು-ಷ್ಯನು ಅದಿಲ್ಲದವನಿಗಿಂತ ಶೂರನೆಂದೂ ಅಂತೆಯೇ ಅವನು ಹೆಚ್ಚು ನಾಗರಿಕನೆಂದೂ ತಿಳಿಯಬೇಕೇ ? ಬಂದೂಕು ಕೈಯಲ್ಲಿದ್ದವನು ಹೆಚ್ಚು ನಾಗರಿಕನು ಅಲ್ಲವೋ ಅಹುದೋ ಎಂಬುದನ್ನು ನಿಃಶಸ್ತ್ರ ಮನುಷ್ಯನು ಅವನ ಮುಂದೆ ಹೇಳಲಾರನು. ಹಾಗೆ ಹೇಳಿದ ಪಕ್ಷದಲ್ಲಿ ಅವನು ಗುಂಡು ಹಾಕಿಸಿಕೊಳ್ಳಬೇಕಾದೀತು.

ಈಗ ಕೆಲವು ವರ್ಷಗಳ ಹಿಂದೆ ಒಂದು ಮಹಾಯುದ್ಧವು ಜರಗಿದ ಸಂಗತಿ ನಿನಗೆ ಗೊತ್ತಿದೆಯಷ್ಟೇ. ಅದರಲ್ಲಿ ಬಹುಮಟ್ಟಿಗೆ ಜಗತ್ತಿನ ಎಲ್ಲ ರಾಷ್ಟ್ರಗಳು ಭಾಗವಹಿಸಿ ಪ್ರತಿಯೊಂದು ರಾಷ್ಟ್ರವೂ ತನ್ನ ವೈರಿಪಕ್ಷದ ಜನರನ್ನು ಶಕ್ಯವಿದ್ದಷ್ಟು ಹೆಚ್ಚಿಗೆ ಕೊಲ್ಲಲು ಯತ್ನಿಸಿತು. ಜರ್ಮನರನ್ನು ಕೊಲ್ಲಲು ಇಂಗ್ಲಿಷರು, ಇಂಗ್ಲಿಷರನ್ನು ಕೊಲ್ಲಲು ಜರ್ಮನರು ಸಾಧ್ಯ-ವಾದಷ್ಟು ಸಾಹಸಪಟ್ಟರು. ಈ ಯುದ್ಧದಲ್ಲಿ ಕೋಟ್ಯವಧಿ ಜನರು ಪ್ರಾಣಬಿಟ್ಟರು; ಸಾವಿರಾರು ಜನರು ಅವಯವ ಹೀನರಾಗಿ ಬದುಕ-ಬೇಕಾಯಿತು. ಕೆಲವರು ಕುರುಡರಾದರು, ಕೆಲವರು ಕೈಕಾಲುಗಳಿಗೆ ಎರವಾದರು. ಯುದ್ಧದಲ್ಲಿ ಊನರಾದವರನ್ನು ಫ್ರಾನ್ಸದಲ್ಲಿ ಮತ್ತು ಇತರ ದೇಶಗಳಲ್ಲಿ ನೀನು ನೋಡಿರಬಹುದು. ಪ್ಯಾರಿಸ್ ಪಟ್ಟಣದಲ್ಲಿದ್ದ ಮೆಟ್ರೊ ಎಂಬ ಸುರಂಗದ ರೇಲ್ವೆಗಾಡಿಗಳಲ್ಲಿ ಹೀಗೆ ಊನರಾದ ಪ್ರಯಾಣಿಕರಿಗಾಗಿಯೇ ಪ್ರತ್ಯೇಕ ಕೂಡ್ರುವ ಸ್ಥಳಗಳನ್ನು ಏರ್ಪಡಿ-ಸಿದ್ದಾರೆ. ಹೀಗೆ ಒಬ್ಬರು ಮತ್ತೊಬ್ಬರನ್ನು ಕೊಲ್ಲುವುದು ನಾಗರಿಕತೆಯ

ಅಥವಾ ವಿವೇಕದ ಲಕ್ಷಣವೆಂದು ನಿನಗೆನಿಸುತ್ತಿದೆಯೆ? ಬೀದಿಗಳಲ್ಲಿ ಇಬ್ಬರು ಹೊಡೆದಾಡುತ್ತಿದ್ದಾಗ ಶಿಪಾಯಿಯು ಅವರನ್ನು ಬಿಡಿಸಿ ಸರಿಸುತ್ತಾನೆ. ಸುತ್ತಲಿದ್ದ ಜನರೆಲ್ಲ ಅವರಿಬ್ಬರನ್ನು ನೋಡಿ ಏನು ಹುಚ್ಚುತನವೆನ್ನುವರಾವರೆ ದೊಡ್ಡ ದೊಡ್ಡ ರಾಷ್ಟ್ರಗಳು ಯುದ್ಧಮಾಡಿ ಸಾವಿರಗಟ್ಲೆ ಲಕ್ಷಗಟ್ಲೆ ಪ್ರಾಣಹಾನಿ ಮಾಡುವುದು ಇನ್ನೆಷ್ಟು ಅವಿವೇಕ! ಇನ್ನೆಷ್ಟು ಮೂರ್ಖತನ! ಇಂಥ ಯುದ್ಧಗಳೂ ಅಡವಿಯ ಮನುಷ್ಯರ ಹೊಡೆದಾಟಗಳೂ ಎರಡೂ ಒಂದೇ. ಅಡವಿಯ ಮನುಷ್ಯರನ್ನು ಪಶುಜಾತಿ ಎಂದು ಕರೆವುದಾದರೆ ಅದೇ ರೀತಿಯಲ್ಲಿ ವರ್ತಿಸುವ ರಾಷ್ಟ್ರಗಳು ಕ್ರೌರ್ಯದಲ್ಲಿ ಯಾವ ಪಶುಜಾತಿಗೆ ಕಡಿಮೆ?

ನೀನು ಈ ರೀತಿಯಲ್ಲಿ ಪ್ರಶ್ನೆಯನ್ನು ಅವಲೋಕಿಸಿದರೆ ಕಳೆದ ಮಹಾಯುದ್ಧದಲ್ಲಿ ಭಾಗವಹಿಸಿ ಪ್ರಾಣಹಾನಿಗೆ ಕಾರಣಗಳಾದ ಇಂಗ್ಲಂಡ್, ಜರ್ಮನಿ, ಫ್ರಾನ್ಸ್, ಇಟಲಿ ಮತ್ತು ಇತರ ರಾಷ್ಟ್ರಗಳಲ್ಲಿ ನಾಗರಿಕತೆಯ ಗಂಧವೇ ಇಲ್ಲವೆಂದು ನೀನು ಹೇಳಬಹುದು. ಆದರೆ ಹೀಗಿದ್ದರೂ ಈ ರಾಷ್ಟ್ರಗಳಲ್ಲಿ ಅನೇಕ ಉತ್ತಮ ವಸ್ತುಗಳಿವೆ, ಅನೇಕ ಉತ್ತಮ ಜನರಿದ್ದಾರೆ ಎಂದು ನೀನು ಬಲ್ಲೆಯಷ್ಟೆ?

ಎಂದಮೇಲೆ ನಾಗರಿಕತೆ ಎಂದರೇನೆಂಬುದನ್ನು ತಿಳಿದುಕೊಳ್ಳುವುದು ಸುಲಭವಲ್ಲವೆಂದು ನಿನಗೆನಿಸುವುದು ನ್ಯಾಯವಿದೆ. ಅದು ಬಹು ಗಹನ ಸಮಸ್ಯೆ. ರಮಣೀಯ ಕಟ್ಟಡಗಳು, ಸುಂದರ ಚಿತ್ರಗಳು ಹಾಗೂ ಗ್ರಂಥಗಳು ಮತ್ತು ರಮ್ಯವಾದೆಲ್ಲವೂ ನಾಗರಿಕತೆಯ ಚಿಹ್ನಗಳೇ ಆಗಿವೆ. ಆದರೆ ಇದೆಲ್ಲಕ್ಕೂ ಮಿಗಿಲಾದ ಬೇರೊಂದು ಲಕ್ಷಣವಿದೆ. ಅದಾವುದೆಂದರೆ ಉತ್ತಮ ಮಾನವವ್ಯಕ್ತಿ, ಎಲ್ಲರ ಕಲ್ಯಾಣಕ್ಕಾಗಿ ಪರರೊಡನೆ ಸಹಕರಿಸಿ ನಿಃಸ್ವಾರ್ಥಬುದ್ಧಿಯಿಂದ ಕೆಲಸಮಾಡುವ ಶ್ರೇಷ್ಠ ಮಾನವಪ್ರಾಣಿ. ಒಬ್ಬನು ಕೆಲಸಮಾಡುವುದಕ್ಕಿಂತ ಎಲ್ಲರೂ ಕೂಡಿ ಕೆಲಸಮಾಡುವುದು ಲೇಸು, ಮತ್ತು ಹಾಗೆ ಒಕ್ಕಟ್ಟಾಗಿದ್ದು ಎಲ್ಲರ ಕಲ್ಯಾಣಕ್ಕಾಗಿ ಕೆಲಸಮಾಡುವುದು ಎಲ್ಲಕ್ಕೂ ಹೆಚ್ಚಿನದು.

ನಿನ್ನ ಪ್ರೀತಿಯ

**—ಜವಾಹರ.**

೧. ನಾಗರಿಕತೆಯ ಲಕ್ಷಣಗಳಾವವು ? ಇದರಲ್ಲಿ ಮುಖ್ಯವಾದದ್ದು ಯಾವದು ? ೨. ನಾಗರಿಕತೆಯ ಯಾವ ಯಾವ ತಪ್ಪು ಕಲ್ಪನೆಗಳನ್ನು ಇದರಲ್ಲಿ ಚರ್ಚಿಸಿದ್ದಾರೆ ? ಅವು ಯೋಗ್ಯ ನಾಗರಿಕತೆಯ ಮಟ್ಟಕ್ಕೆ ಏಕೆ ಮುಟ್ಟುವದಿಲ್ಲ ? ೩. ವಿರುದ್ಧಾರ್ಥದ ಶಬ್ದಗಳನ್ನು ಹೇಳಿರಿ : ಶ್ರೇಷ್ಠ, ನಾಗರಿಕತೆ, ಕಲ್ಯಾಣ, ವ್ಯಕ್ತಿ, ಶೀತಲ. ೪. ನಾಗರಿಕತೆ ಜನರಲ್ಲಿ ಹಬ್ಬ-ಬೇಕಾದರೆ ನಾವು ಯಾವ ಯಾವ ಕಾರ್ಯಗಳನ್ನು ಕೈಕೊಳ್ಳಬೇಕೆಂಬದನ್ನು ಒಂದೆರಡು ವಾಕ್ಯವೃಂದಗಳಲ್ಲಿ ಬರೆಯಿರಿ.

## ೮. ಕೋಗಿಲೆ

[ ಎಸ್. ವೆಂಕಟರಾಜರು ದಕ್ಷಿಣ ಕನ್ನಡದ ಉಡುಪಿಯವರು. ಶಿರೋಮಣಿ ಪರೀಕ್ಷೆಯ ವರೆಗೆ ಸಂಸ್ಕೃತ, ಜೊತೆಯಲ್ಲಿಯೇ ಪ್ರಾಚೀನ ಕನ್ನಡ ಕಾವ್ಯಗಳ ಅಧ್ಯಯನ ಮಾಡಿದರು. ಅನೇಕ ವರ್ಷಗಳಿಂದಲೂ ಕವನ ಕಥೆ ಮೊದಲಾದವನ್ನು ಕಟ್ಟುತ್ತಲಿರುವರು. ಕವಿತ್ವದೊಡನೆ ಸಂಗೀತಕಲೆಯೂ ನಾಟಕಲೇಖನದೊಡನೆ ನಟನಕಲೆಯೂ ಇವರಲ್ಲಿ ಉಂಟು. 'ವೀರಭೂಮಿ' ಎಂಬ ಸಣ್ಣ ಕತೆಯೂ ಇತ್ತೀಚೆಗೆ 'ರಂಗ-ಭೂಮಿ' ಎಂಬ ನಾಟಕವೂ ಇವರಿಂದ ರಚಿತವಾಗಿವೆ. ಇವರ ಕವನ-ಕಥೆಗಳು ಕನ್ನಡ ಪತ್ರಿಕೆಗಳಲ್ಲಿ ವಿಶೇಷವಾಗಿ ಪ್ರಸಿದ್ಧವಾಗಿವೆ. ಬಯಲಿಗೆ ಬಾರದ ಮುಗುದ ಆದರೆ ಉತ್ತಮನಾದ ಕವಿಯನ್ನು ಕೋಗಿಲೆಗೆ ಹೋಲಿಸಿ ಈ ಕವಿತೆಯನ್ನು ರಚಿಸಿದ್ದಾರೆ. ]

ಆವ ಕಬ್ಬಿಗನಿವನು ?
ಮಾಮರದ ಕೆಂದಳಿರ
ತೂಗುವುಯ್ಯಾಲೆಯೊಳೊರಗಿ
ಜೀವಿಗಳ ಬಗೆವಗೆಯ
ನೋವಿನುರಿಯನು ತವಿಸಿ
ನೋಡದಕೊ ! ಹಾಡುತಿಹನು. ॥ ೧ ॥

ಇವನ ಕಬ್ಬದ ವೈವಮೆ-
ಯೆನಿತೊ ! ಜಡತರ ವಿಶ್ವ-
ವನೆ ತೀವಿ ತುಳುಕುತಿಹುದು !
ಹೊನಲು ಕಲಕಲ ರವವ-
ನುಳಿದದಕೆ ಮರುಳಾಗಿ
ಕಿವಿಗೊಟ್ಟು ಕೇಳುತಿಹುದು ! ॥ ೨ ॥

ಒಂದು ಭಾವಕೆ ಹಲವು
ಬಣ್ಣಗಳ ಮಿರುಗಿಟ್ಟು
ಹಾಡುತಿಹರೆನಿತೊ ಮಂದಿ
ಒಂದೆ ಹಾಡಿನೊಳತುಲ
ಭಾವಗಳು ತುಂಬಿರಲು
ಹಾಡುತಿಹರೆನಿತು ಮಂದಿ ? ॥ ೩ ॥

ಹಾಡಲೆಂದುಸಿರೆತ್ತಿ,
ಭಾವಗಳನೆಳೆದೆಳೆದು
ಕೂಡಿಸುವ ಕವಿಗಳೆಲ್ಲಿ !
ಮೂಡಿರುವ ಭಾವಗಳೆ
ಹಾಡಾಗಿ ಹರಿಯುತಿರ-
ಲಿವನ ಬಿನ್ನಾಣವೆಲ್ಲಿ ! ॥ ೪ ॥

ನೇಸರನು ಮೂಡುತಿರ-
ಲಿವನೆದೆಯ ಮಲರರಳಿ
ತನಿಸೊದೆಯ ಸೂಸುತಿಹುದೆ ?
ಬಾಸೆವೆಣ್ಣಿನ ಕೈಯ
ಬೀಣೆಯದು ಕೆಳಗುರುಳು-
ತಿವನೆದೆಯನೊಂದಿರುವುದೆ ? ॥ ೫ ॥

ಆವ ಕಬ್ಬಿಗನಿವನು ?
ನರುಗಂಪಿನೈಸಿರಿಯಿ-
ನೆಸೆವ ವನಕುಸುಮದಂತೆ ;
ಜಸದ ಮಾಳ್ಕೆಯನೆಣಿಸ-
ದೆಳದಳಿರ ಹಿಂದುಳಿದು
ನೋಡದಕೊ ! ಹಾಡುತಿಹನು. || ೬ ||

—ಎಸ್. ವೆಂಕಟರಾಜ.

೧. ಕೋಗಿಲೆ ಎಲ್ಲಿ ಕುಳಿತು ಹಾಡುತ್ತಿರುವದು ? ಯಾವ ಋತುವಿನಲ್ಲಿ ? ಹಾಡಲು ಸ್ಫೂರ್ತಿ ಏತರಿಂದ ಅದಕ್ಕೆ ಉಂಟಾಗುತ್ತದೆ ? ೨. ಸಾಮಾನ್ಯ ಕವಿಗಳಿಗೂ ಕೋಗಿಲೆಗೂ ಏನು ಭೇದ ? ಶ್ರೇಷ್ಠರು ಯಾರು ? ಏಕೆ ? ೩. ಸ್ಪಷ್ಟೀಕರಿಸಿರಿ : (ಅ) ಜೀವಿಗಳ ಬಗೆಬಗೆಯ ನೋವಿನುರಿಯನು ತವಿಸಿ ನೋಡದಕೊ ಹಾಡುತಿಹನು. (ಆ) ಹೊನಲು ಕಲಕಲ ರವವನುಳಿದದಕೆ ಮರುಳಾಗಿ ಕಿವಿಗೊಟ್ಟು ಕೇಳುತಿಹುದು !

# ೯. ಸದಾಶಿವರಾಯರೊಡನೆ ಆಕ್ಸಫರ್ಡದಲ್ಲಿ

[ ವಿ. ಕೃ. ಗೋಕಾಕರು ಪರದೇಶದಲ್ಲಿದ್ದಾಗಿನ ಅನುಭವದ ಅವರ ಒಂದು ಲೇಖನವಿದು. ಸೊ. ಓ. ೫ನೆಯ ಪುಸ್ತಕದ ೨೮ನೆಯ ಪಾಠದಲ್ಲಿ ಇವರ ಪರಿಚಯವನ್ನು ಮಾಡಿಕೊಟ್ಟಿದೆ. ಪೇಜಾವರ ಸದಾಶಿವರಾಯರು ಮಂಗಳೂರ ಪ್ರಾಂತದ ಉತ್ಸಾಹಿ ತರುಣರು ; ಸಾಹಿತ್ಯಕಾರರು ; ಕನ್ನಡದ ಅಭಿಮಾನಿಗಳು. ಅವರ ಅಕಾಲಿಕ ಮರಣವು ಕನ್ನಡಕ್ಕೆ ಒಂದು ಹಾನಿಯೇ ಸರಿ. ಅವರ ವಿಚಾರವಾಗಿ ಆದರವುಳ್ಳ ಗೋಕಾಕರು ಅವರೊಡನೆ ಆಕ್ಸ-ಫರ್ಡಿನಲ್ಲಿ ಕಳೆದ ದಿನದ ನೆನಹನ್ನು ಇಲ್ಲಿ ಚಿತ್ರಿಸಿದ್ದಾರೆ. ]

ಸದಾಶಿವರಾಯರ ನಾಡಾದ ಮಂಗಳೂರು ಜಿಲ್ಹೆಯಲ್ಲಿ ಸಂಚರಿಸಿ ಮಂಗಳೂರಿನಲ್ಲಿ ಸದಶಿವರಾಯರ ಸ್ನೇಹಿತರು ಕೆಲವರನ್ನು ಕಂಡು, ನಮ್ಮ ಯಾತ್ರೆಯ ಗುಂಪಿನ ನೇತೃವಾಗಿದ್ದ ಕಾರಂತರ ಸಹಾಯದಿಂದ ಬೆಂಗಳೂರನ್ನು ಮುಟ್ಟಿ ಒಂದು ದಿನವಾಗಿತ್ತು. ಸಂಜೆಯ ಹೊತ್ತಿನಲ್ಲಿ ಒಂದೆಡೆಗೆ ' ಭಾಷಣ ' ಕ್ಕಾಗಿ ಹೊರಟಿದ್ದೆವು. ಆಗ ಸದಾಶಿವರಾಯರ ಮರಣದ ಸುದ್ದಿಯು ಬಂದು ಸಿಡಿಲು ಬಡಿದಂತೆ ನನ್ನ ಕಿವಿ ಮುಟ್ಟಿತು. ವೃತ್ತಪತ್ರಗಳಲ್ಲಿ ಅದನ್ನೋದಿದ್ದ ಗೆಳೆಯರೊಬ್ಬರು ಬಳಿಸಾರಿ ಮೆಲ್ಲನೆ ಈ ಸುದ್ದಿಯನ್ನು ಹೇಳಿದರು. ಹತ್ತಿರ ನಿಂತಿದ್ದ ವಿ. ಸೀ. ಯವರಿಗೂ ಸಂಕಟವಾಯಿತು. ಇಟಲಿಯಿಂದ ಸದಾಶಿವರಾಯರು ಬರೆದು ಕಳಿಸಿದ್ದ ಅನೇಕ ಕವನಗಳಲ್ಲಿ—ವಿಶೇಷತಃ ನರ್ತನದ ಕವನದಲ್ಲಿ—ಒಂದು ಹೊಸ ಬಗೆಯ ಓಟವಿದೆಯೆಂದು ಅವರೂ ನಾನೂ ಕೂಡಿಯೇ ಕೆಲವು ತಾಸು-ಗಳ ಹಿಂದೆ ಮಾತಾಡಿದ್ದೆವು.

ಅಂತೂ ಅನೇಕ ವರ್ಷಗಳಿಂದ ಕನ್ನಡಕ್ಕಾಗಿ ಟೊಂಕಕಟ್ಟಿ ದುಡಿದ ಸದಾಶಿವರಾಯರು ಇಲ್ಲದಾದರು. ಬನಾರಸದಲ್ಲಿ ಅವರು ಕನ್ನಡದ ಧ್ವಜವನ್ನು ನಿಲ್ಲಿಸಿದ್ದರು. ಇಟಲಿಯಲ್ಲಿ ತಮ್ಮ ಕನ್ನಡದ ದೃಷ್ಟಿಯನ್ನು ಅವರು ಕೊನರಿಸಿದ್ದರು. ತರುಣ ಸಾಹಿತ್ಯಕಾರರಲ್ಲಿ ಈಗಾಗಲೇ ಪ್ರಮುಖ ಸ್ಥಾನವನ್ನು ಅವರು ಸಂಪಾದಿಸಿದ್ದರು. ಇಂಥ ನಮ್ಮ ಕನ್ನಡದ ಅಭಿಮನ್ಯುವು ಅಪೆಂಡಿಸಾಯ್ಟಿಸ್ ರೋಗದ ' ಉಗ್ರರೂಪ 'ವೊಂದರಿಂದ ಹಾಸಿಗೆ ಹಿಡಿದು ಕೆಲವು ತಿಂಗಳು ಬಂದ ಯಾತನೆಯನ್ನೆಲ್ಲ ಸಹಿಸಿ ಕೊನೆಗೆ ದೂರ ದೇಶದಲ್ಲಿಯ ಒಂದು ಆಸ್ಪತ್ರೆಯಲ್ಲಿಯೇ ಇಲ್ಲದಾದನೆಂಬದನ್ನು ಕೇಳಿ ಯಾರ ಅಂತಃಕರಣವು ಕಲಮಲವಾಗಲಿಕ್ಕಿಲ್ಲ? ದೂರದೇಶದಲ್ಲಿ ಹೋಗಿರುವದೆಂದರೆ ಏನೆಂಬದು ನನಗೆ ಗೊತ್ತು. ಆಸ್ಪತ್ರೆಯಲ್ಲಿ ಹಾಸಿಗೆ ಹಿಡಿದು ಸತ್ತುಸತ್ತು ಉಳಿದ ನನಗೆ ದೂರದೇಶದಲ್ಲಿ ಅಸಹಾಯ-ನಾಗಿ ಬೇನೆಬಿದ್ದಿರುವದೇನೆಂಬದೂ ಗೊತ್ತು. ಆದರೆ ಅದನ್ನು ಬಣ್ಣಿಸುವದು ಸಾಧ್ಯವಿಲ್ಲ. ಇಂಥ ಸ್ಥಿತಿಯು ಯಾರಿಗೂ ಬರಬಾರದು. ಆ ಸ್ಥಿತಿಯಲ್ಲಿದ್ದಾಗ ಸದಾಶಿವರಾಯರು ಏನೆನಿಸಿಕೊಂಡು ಪ್ರಾಣಬಿಟ್ಟಿರ-ಬಹುದೆಂಬದನ್ನು ನೆನಿಸಿದಾಗ ನನ್ನ ಮೈಗೆ ಮುಳ್ಳು ಚುಚ್ಚುತ್ತದೆ.

ಸದಾಶಿವರಾಯರ ಸುದ್ದಿಯು ಅಂದೇ ರಾತ್ರಿ ನಮ್ಮಿಂದ ಮಾಸ್ತಿ-ಯವರಿಗೆ ತಿಳಿಯಿತು. ಅವರೆಷ್ಟು ವ್ಯಥೆಪಟ್ಟುಕೊಂಡರು! ಇಟಲಿಯಿಂದ ಸದಾಶಿವರಾಯರು ಅವರಿಗೊಂದು ಸುಂದರ ಚಿತ್ರವನ್ನು ಕಳಿಸಿಕೊಟ್ಟಿ-ದ್ದರು. ಮಾಸ್ತಿಯವರು ಅದಕ್ಕೊಂದು ಒಳ್ಳೆಯ ಕಟ್ಟುಹಾಕಿ ತಮ್ಮ ಕೋಣೆಯಲ್ಲಿ ಜತನದಿಂದ ಇಟ್ಟಿದ್ದರು. ನಮ್ಮೆಲ್ಲರನ್ನು ಕರೆದುಕೊಂಡು ಹೋಗಿ ಅದನ್ನು ತೋರಿಸಿದರು. ಅವರೊಡನೆ ಬಂದ ತಮ್ಮ ಸ್ನೇಹ-ಸಂಬಂಧದ ಕಥೆಯನ್ನೆಲ್ಲ—ಅದೆಲ್ಲ ಕಥೆಯಾಯಿತಲ್ಲವೆ ಈಗ?—ಹೇಳಿದರು. ಇನ್ನೆಲ್ಲಿಯ ಸದಾಶಿವರಾಯರು?

ಆದರೆ ಕನ್ನಡವನ್ನು ಕಟ್ಟಲು ಹೆಣಗಿದ ಸಾಹಸಿಗಳಲ್ಲಿ ಒಬ್ಬರೆಂದು ಅವರ ಹೆಸರು ಕನ್ನಡದ ಇತಿಹಾಸದಲ್ಲಿ ಉಳಿಯುವದೆಂಬಲ್ಲಿ ಯಾವ ಸಂಶಯವೂ ಇಲ್ಲ. ಕನ್ನಡಸಾಹಿತ್ಯವನ್ನು ಕುರಿತು ಈ ಮಾತನ್ನು ಹೇಳಬೇಕಾಗಿದ್ದೇ ಇಲ್ಲ. ಅವರ ಕವಿತೆಗಳೂ ಲೇಖನಗಳೂ ಓಲೆಗಳೂ ಅವರ ಉಜ್ವಲ ವ್ಯಕ್ತಿತ್ವವನ್ನು ಎತ್ತಿ ತೋರಿಸುವವು.

೧೯೩೦ ನೆಯ ಇಸ್ವಿಯಿಂದ ಸುಮಾರು ನಾನು ಸದಾಶಿವರಾಯರ ಹೆಸರನ್ನು ಅಚ್ಚಿನಲ್ಲಿ ಕಾಣುತ್ತಿದ್ದೆ. ಆದರೆ ಅವರನ್ನು ಕಂಡಿದ್ದಿಲ್ಲ. ಬನಾರಸದಲ್ಲಿದ್ದುಕೊಂಡು ಅವರು ಕೈಕೊಂಡಿದ್ದ ಕನ್ನಡದ ಚಟುವಟಿಕೆ-ಗಳ ವಿಷಯವನ್ನೋದಿ ದೂರದಿಂದ ಸಂತೋಷಪಡುತ್ತಿದ್ದೆ; ಅವರ ಕೃತಿಗಳನ್ನೋದಿ,—ಇಂಥ ಯೋಗ್ಯತೆಯುವರು ಅಲ್ಲಿ ಬೇಕೆಂದು ಮನಸ್ಸಿ-ನಲ್ಲಿಯೇ ಅಂದುಕೊಳ್ಳುತ್ತಿದ್ದೆ. ಅವರು ಇಟಲಿಗೆ ಹೋದ ವಿಷಯ ನಾನು ಇಂಗ್ಲಂಡಿನಲ್ಲಿದ್ದಾಗ ಮಾತ್ರ ನನಗೆ ಗೊತ್ತಾಯಿತು. ಮಂಗ-ಳೂರಿನ ಕಡೆ ಪ್ರಕಟವಾಗುತ್ತಲಿದ್ದ ಮಾಸಿಕವೊಂದು ಆಗ ನನಗೆ ಬರುತ್ತಿತ್ತು. ಅದರಲ್ಲಿ—೧೯೩೭ ನೆಯ ಇಸ್ವಿಯ ನವೆಂಬರ್ ಇಲ್ಲವೆ ಡಿಸೆಂಬರ್ ತಿಂಗಳ ಸಂಚಿಕೆಯಲ್ಲಿ— ಸದಾಶಿವರಾಯರ ಲೇಖನ-ವೊಂದಿತ್ತು. ಸಹಜ ಸಂತೋಷದಿಂದ ಓದಿದೆ. ಆದರೆ ಅವರ ಹೆಸರಿನ ಬಳಿ 'ಬನಾರಸ' ಎಂಬುವದರ ಬದಲು 'ಇಟಲಿ' ಎಂದಿತ್ತು. ಎಲ! ಇವರು ಇಟಲಿಗೆ ಬಂದದ್ದೇ ಗೊತ್ತಿಲ್ಲವಲ್ಲ! ಎಂದುಕೊಂಡೆ. ಅವರ

ವಿಳಾಸವನ್ನು ದೊರಕಿಸಿ ಪತ್ರ ಬರೆದು ನಾನು ಸ್ವದೇಶಕ್ಕೆ ಮರಳಿ ಹೋಗುವಾಗಾದರೂ ಇಟಲಿಯಲ್ಲಿ ಅವರೊಡನೆ ಸಂಚರಿಸಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿದೆನು.

ಒಂದು ದಿನ ಬೆಳಗಿನೂಟವನ್ನು ತೀರಿಸಿಕೊಂಡು ಮಿಲ್ಟನ್ ಕವಿಯ 'ಪೆರಡಾಯಿಜ್ ಲಾಸ್ಟ್' ಹಾಗೂ ವೆರಿಟಿಯ 'ಮಲ್ಲಿನಾಥಿ' ಯನ್ನು ಓದುತ್ತ ಕುಳಿತಿದ್ದೆ. ಇಬ್ಬರು ನನ್ನನ್ನು ಕಾಣಲು ಬಂದಿರುವ-ರೆಂದು ಮನೆಯ ಒಡತಿಯು ಸುದ್ದಿ ತಂದಳು. ನಾನು ಕೋಣೆಯ ಬಾಗಿಲನ್ನು ತೆರೆದು ನೋಡಿದೆ. ತರುಣರಿಬ್ಬರು ನಿಂತಿದ್ದರು. ಅವರಲ್ಲಿ ಒಬ್ಬರು ಭಾರತೀಯರು, ಇನ್ನೊಬ್ಬರು ಆಂಗ್ಲೇಯರು. ಇಬ್ಬರ ಗುರುತೂ ನನಗಿರಲಿಲ್ಲ. ಅರೆನಿಮಿಷದಷ್ಟು ಹೊತ್ತು ನಾನು ದಿಟ್ಟಿಸುತ್ತ ನಿಂತೆ.

'ನಾನು ಪೇಜಾವರ ಸದಾಶಿವರಾಯ. ಇವರು ಮಾರಿಸ್ ಎಂಬ ಹೆಸರಿನ ನನ್ನ ಸ್ನೇಹಿತರು. ನೀವೇ ಗೋಕಾಕರಲ್ಲವೆ? ನಿಮ್ಮನ್ನು ಭೆಟ್ಟಿಯಾಗಲು ಬಂದೆ!' ಎಂದು ಸದಾಶಿವರಾಯರು ಕನ್ನಡದಲ್ಲಿ ಮಾತನಾಡಿದರು.

ಆಕ್ಸಫರ್ಡದಲ್ಲಿ ಕನ್ನಡವನ್ನು ಕೇಳುವದೇ ಅಪರೂಪ ; ಕನ್ನಡಿಗ-ರನ್ನು ಕಾಣುವದು ದುರ್ಲಭ; ಅದರಲ್ಲಿಯೂ ಕನ್ನಡಕ್ಕೆ ಸರ್ವಸ್ವವನ್ನು ನೀಡಿ ನಿಂತ ಕನ್ನಡ ಸಾಹಿತಿಗಳು! ನಾನು ನೋಡಬೇಕೆಂದಿದ್ದವರು! ಮನಸ್ಸಿನಲ್ಲಿಯೇ ನಾನು ಕುಣಿದಾಡಿದೆ. ಇಂಥ ಅನಿರೀಕ್ಷಿತ ಆನಂದ-ಗಳು ಜೀವನದಲ್ಲಿ ಬಹಳ ಸಲ ದೊರೆಯುವದಿಲ್ಲ. ಸದಾಶಿವರಾಯರೂ ಅವರ ಸ್ನೇಹಿತರೂ ಬಂದು ನನ್ನ ಕೋಣೆಯಲ್ಲಿ ಕುಳಿತುಕೊಂಡರು. ಆಮೇಲೆ ಮಾತು ನಡೆಯಿತು.

ಅಷ್ಟರಲ್ಲಿ ಹನ್ನೆರಡೂವರೆ ಗಂಟೆಯಾಯಿತು; ಮಧ್ಯಾಹ್ನದ ಊಟದ ವೇಳೆ ಸಮೀಪಿಸಿತು. ನಾನಿದ್ದ ಮನೆಯ ಯಜಮಾನಿತಿಯಾದ ಮಿಸೆಸ್ ಟರ್ನರಳಿಗೆ 'ಲಂಚ್' ಬೇಕೆಂದು ಮೊದಲೇ ಹೇಳಿರಲಿಲ್ಲ. ಹೀಗಾಗಿ ನಾವು ಆಕ್ಸಫರ್ಡದ ಮುಖ್ಯ ಬೀದಿಗಳ ವರೆಗೆ ಹೋಗಬೇಕಾ-ಯಿತು. ನನ್ನ ಕೋಣೆಯಿಂದ ಎರಡು ಮೈಲು ಹೋಗಬೇಕು, ಸರಿ.

ಮೂವರೂ ಹೊರಬಿದ್ದು ಬಸ್ಸು ಹತ್ತಿ ಸಾಗಿದೆವು. ಬಸ್ಸಿನ ಮೇಲಂತಸ್ತಿನ ಮೇಲೆ ಎಲ್ಲಕ್ಕೂ ಮುಂದಿನ ಸೀಟಿನ ಮೇಲೆ ಹೋಗಿ ಮೂವರೂ ಕುಳಿತೆವು. ಹಾದಿಯಲ್ಲಿ ಕಂಡ ಕೆಲವು ಪ್ರಸಿದ್ಧ ಸ್ಥಳಗಳನ್ನು ನಾನು ಗೆಳೆಯರಿಬ್ಬರಿಗೂ ತೋರಿಸುತ್ತಿದ್ದೆ.

'ಕೆಂಪಸ್ ಹೊಟೆಲ್' ಎಂಬಲ್ಲಿ ಊಟಕ್ಕಾಗಿ ಹೋದೆವು. ಈ ಹೊಟೆಲ್ಲಿನ ವೈಶಿಷ್ಟ್ಯವೆಂದರೆ ಇಲ್ಲಿ ವೇಟರ್ಸ ಎಂದರೆ ಬಡಿಸುವವರೇ ಇಲ್ಲ! ಊಟದ ಎಲ್ಲ ಸಾಮಾನುಗಳನ್ನು ಕಾಜಿನ ದೊಡ್ಡ ದೊಡ್ಡ ಭಾಂಡಗಳಲ್ಲಿ ಹಾಕಿ ಇಟ್ಟಿರುತ್ತಾರೆ. ಕಾರಣ, ಆ ಸಾಮಾನು ಹೇಗಿದೆ, ಏನಿದೆ ಎಂಬುದೆಲ್ಲ ತತ್ಕ್ಷಣ ಒಡೆದು ಕಾಣಿಸುತ್ತದೆ. ಬಿಸಿಯಾಗಿರ-ಬೇಕಾದುದನ್ನು ಗ್ಯಾಸ್ ಒಲೆಗಳ ಮೇಲೆ ಬಿಟ್ಟಿರುತ್ತಾರೆ. ಅಡಿಗೆ ಮನೆಯು ಮೇಲಟ್ಟದಲ್ಲಿರುತ್ತದೆ. ಅಡಿಗೆಯ ಮೇಲ್ವಿಚಾರಕರಾಗಿ ಮೂವರು ನಾಲ್ವರು ಹೆಂಗುಸರು ನಿಂತಿರುತ್ತಾರೆ. ಎಲ್ಲವನ್ನೂ ನೋಡಿ-ಕೊಂಡು ಏನು ಬೇಕೆಂಬುದನ್ನು ಅವರಿಗೆ ಹೇಳಿದರೆ ಪ್ಲೇಟಿನಲ್ಲಿ ಬಡಿಸಿ ನಿಮ್ಮ ಕೈಯಲ್ಲಿ ಕೊಡುವ ಕೆಲಸವು ಅವರದು. ಆ ಪ್ಲೇಟನ್ನು ನಾವು ತೆಗೆದುಕೊಂಡು ಹೋಗಿ ತೆರವಿದ್ದ ಟೇಬಲ್ಲಿನ ಮೇಲಿಟ್ಟು ತಿನ್ನಬೇಕು. ಫೋರ್ಕ್ (ಮುಳ್ಳು ಚಮಚೆ) ಚಮಚೆ, ಮುಂತಾದವು ಬೇಕಾದರೆ,—ಅವೆಲ್ಲವುಗಳನ್ನು ಒಂದೆಡೆಗೆ ಸಂಗ್ರಹಿಸಿ ಇಟ್ಟಿರುತ್ತಾರೆ. ಅಲ್ಲಿ ಹೋಗಿ ತರಬೇಕು. ಬಡಿಸುವವರೇ ಇಲ್ಲಿ ಇರದ್ದರಿಂದ ಊಟದ ಖರ್ಚು ಕಡಿಮೆ-ಯಾಗಿ 'ಟಿಪ್ಸ್' (ಖುಷಿ) ಸಹ ಕೊಡಬೇಕಾಗಿ ಬರುವುದಿಲ್ಲ. ಸದಾ-ಶಿವರಾಯರಿಗೆ ಇದೊಂದು ರೀತಿಯನ್ನು ತೋರಿಸಬೇಕೆಂದು ನಾನು ಈ ಹೊಟೆಲ್ಲನ್ನು ಆರಿಸಿದ್ದೆನು.

ಊಟವಾಗಿ ತುಸು ಹೊತ್ತಾದ ಮೇಲೆ ಮಾರಿಸನು ತಮ್ಮೂರಿಗೆ ಹೊರಟ. ಕಾರ್ಫ್ಯಾಕ್ಸ್ ಎಂಬ ಕೇಂದ್ರ ಮಾರ್ಗವಿದೆ ಆಕ್ಸಫರ್ಡಿನಲ್ಲಿ. ಅಲ್ಲಿ ನಾಲ್ಕು ರಹದಾರಿಗಳು ಕೂಡುತ್ತವೆ. ಅಲ್ಲಿಂದ ನಿಲ್ಮನೆಯು ಮೂರು ನಾಲ್ಕು ಫರ್ಲಾಂಗಿದೆ. ಕಾರ್ಫ್ಯಾಕ್ಸಿನ ಹತ್ತಿರ ಮಾರಿಸನನ್ನು ನಾವು ಬಸ್ಸಿ-ನಲ್ಲಿ ಕುಳ್ಳಿರಿಸಿ ಅಲ್ಲಿಯೇ ನಿಂತೆವು. ಮತ್ತೆ ಬೇಸಿಗೆಯ ಸೂಟಿಯಲ್ಲಿ

ಭೆಟ್ಟಿಯಾಗುವದಾಗಿ ಗೆಳೆಯರಿಬ್ಬರೂ ಮಾತನಾಡಿದರು. ಹೋಗುವಾಗ ಮಾರಿಸನ ಅಂತಃಕರಣವು ಉಕ್ಕಿ ಬಂದಿತ್ತು. 'ಗುಡ್ ಬಾಯ್, ರಾವ್' ಎಂದು ಕೈ ಅಲ್ಲಾಡಿಸುತ್ತ ನಗುತ್ತ ಬಸ್ಸಿನ ತುದಿಗೆ ನಿಂತ ಮಾರಿಸನ ಚಿತ್ರವು ಇನ್ನೂ ನನ್ನ ಕಣ್ಣು ಮುಂದೆ ಕಟ್ಟಿದೆ. ಮಾರಿಸನು ಕಣ್ಮರೆಯಾದಾಗ, "ನೋಡಿ! ಎಷ್ಟು ನಿರ್ವ್ಯಾಜವಾದ ಸ್ನೇಹ!" ಎಂದು ಸದಾಶಿವರಾಯರು ಮನಕರಗಿದವರಾಗಿ ಉದ್ಗಾರ ತೆಗೆದರು.

ಮುಂದೆ ನಾವು ಚಹ ತೆಗೆದುಕೊಂಡಿದ್ದು, ರಾತ್ರಿ ಊಟ ಮಾಡಿದ್ದು,—ಇದಾವುದೂ ನನಗೆ ನೆನಪಿಲ್ಲ. ಅದೇ ರಾತ್ರಿ ೮-೯ ಗಂಟೆಯ ಸುಮಾರು ಸದಾಶಿವರಾಯರು ಲಂಡನ್ನಿಗೆ ಹೋಗಬೇಕಾಗಿತ್ತು. ಸೂಟಿ ಮುಗಿಯುತ್ತ ಬಂದದ್ದರಿಂದ ನಾನು ಜುಲುಮೆ ಮಾಡಿದರೂ ಅವರು ನಿಲ್ಲುವ ಹಾಗಿರಲಿಲ್ಲ. ಲಂಡನ್ನಿನಿಂದ ಮುಂದೆ ಇಟಲಿಗೆ ಹೋಗತಕ್ಕವರಿದ್ದರು. ನಿಲ್ಮನೆಗೆ ಅವರನ್ನು ಕಳಿಸಲು ನಾನು ಹೋಗಿದ್ದೆ. ಅಲ್ಲಿ ನಮ್ಮಿಬ್ಬರ ಅಂತಃಕರಣವೂ ತುಂಬಿಬಂದಿತ್ತು. ಇಬ್ಬರೂ ಕನ್ನಡಿಗರು, ಆದರ್ಶವಾದಿಗಳು, ಸಾಹಿತ್ಯಕಾರರು. ಕೆಲವೊಂದು ತಾಸುಗಳಲ್ಲಿ ನಾವು ಏಕಜೀವಿಗಳಾಗಿಬಿಟ್ಟಿದ್ದೆವು. ಗಾಡಿ ಬಿಡಲು ಇನ್ನೂ ಅವಕಾಶವಿತ್ತು. ತಿರುಗಿ ಹೋಗಿರೆಂದು ಸದಾಶಿವರಾಯರು ದುಂಬಾಲು ಬಿದ್ದರು. ಗಾಡಿ ಬಿಟ್ಟ ಮೇಲೆ ಹೋಗುವದಿದ್ದೇಯಿದೆಯೆಂದು ನಾನು ಕಾಲು ಕಿತ್ತಲಾರದೆ ಅಲ್ಲಿ ನಿಂತೆನು. ಇಟಲಿಗೆ—ತಾವಿದ್ದ ಮಿಲಾನ್ ಪಟ್ಟಣಕ್ಕೆ—ಮಾತ್ರ ಬರೆಯಲು ಮರೆಯಬಾರದೆಂದು ಸದಾಶಿವರಾಯರು ಹತ್ತನೆಯ ಸಲ ಹೇಳಿದರು. ಪರೀಕ್ಷೆ ಮುಗಿದ ಕೂಡಲೆ ತಾಯ್ನಾಡಿಗೆ ಮರಳುವಾಗ ಇಟಲಿಯಲ್ಲಿ ಅವರ ಹತ್ತಿರ ೮-೧೦ ದಿವಸವಿದ್ದು ಅವರ ಜೊತೆಯಲ್ಲಿ ಇಟಲಿಯನ್ನೆಲ್ಲ ಸುತ್ತಾಡಿ ಹೋಗುವೆನೆಂದು ನಾನು ಮತ್ತೆ ಹೇಳಿದೆ. ಆ ದಿವಸಗಳಿಗಾಗಿ ಕಾದಿರುತ್ತೇನೆಂದು ಅವರು ಹೇಳಿದರು. ನಮ್ಮ ಪರಿಚಯವು ಹೀಗೆ ವಿದೇಶದಲ್ಲಾಗಿ ಇಷ್ಟು ಬೇಗ ಸ್ನೇಹವಾಗಿ ಪಲ್ಲಟಗೊಂಡದ್ದು ಬಹಳ ಸಂತೋಷದ ಮಾತೆಂದು ಇಬ್ಬರೂ ಒಪ್ಪಿದೆವು.

ಗಾಡಿಯೊಮ್ಮೆ ಬಿಟ್ಟಾಗ ಗಟ್ಟಿಯಾಗಿ ಒಬ್ಬರ ಕೈಯನ್ನೊಬ್ಬರು ಹಿಡಿದು ಅಲುಗಾಡಿಸಿದೆವು. 'ಹೋಗಿ ಬನ್ನಿ! ಹೋಗಿ ಬನ್ನಿ!' ಎಂದು

ಕೈಬೆರಳಾಡಿಸುತ್ತ ನಾನು ರೇಲ್ವೆಕಟ್ಟೆಯ ಮೇಲೆಯೆ ನಿಂತೆ. 'ಹೋಗಿ ಬರುತ್ತೇನೆ! ಹೋಗಿ ಬರುತ್ತೇನೆ!' ಎಂದು ಕಿಡಿಕಿಯೊಳಗಿಂದ ಹಣಿಕಿ ಹಾಕಿ ಕೈಮಾಡುತ್ತ ನಗುತ್ತ ನಿಂತಿದ್ದ ಸದಾಶಿವರಾಯರನ್ನು ಕರೆದು-ಕೊಂಡು ಗಾಡಿಯು ಕಣ್ಮರೆಯಾಯಿತು.........ಅಯ್ಯೋ! ದೈವವೆ! ಕಾಲವೂ ಅವರನ್ನು ಕರೆದುಕೊಂಡು ಕಣ್ಮರೆಯಾಗಿಹೋಯಿತು. ಸದಾಶಿವರಾಯರನ್ನು ನಾನು ನೋಡಿದ್ದು ಅದೇ ಮೊದಲನೆಯ ಸಲ; ಅದೇ ಕಡೆಯ ಸಲವೆಂದು ಹೇಳುವಾಗ ಎದೆಯಲ್ಲಿ ಸಂಕಟವಾಗುತ್ತದೆ.

—ವಿ. ಕೃ. ಗೋಕಾಕ.

೧. ಪೇಜಾವರ ಸದಾಶಿವರಾಯರಿಗೆ ಒದಗಿದ ಮರಣ ಬಲು ಶೋಚನೀಯವಾಗಿತ್ತು; ಏಕೆ? ೨. ಕೆಂಪಸ್ ಹೊಟೆಲಿನ ವೈಶಿಷ್ಟ್ಯ-ವೇನಿತ್ತು? ೩. ನಿಲ್ಮನೆಗೆ ಕಳಿಸಹೋದಾದ ನಡೆದ ಸಂಗತಿಗಳಾವವು? ಈ ನೆನವು ಆದಾಗ ಲೇಖಕರಿಗೆ ವಿಶೇಷ ಸಂಕಟವೇಕಾಗುತ್ತದೆ? ೪. ಈ ಪಾಠದಿಂದ ತಿಳಿಯುವ ಸದಾಶಿವರಾಯರ ಚರಿತ್ರೆ, ಸ್ವಭಾವ, ಅವರು ಕನ್ನಡಕ್ಕೆ ಸಲ್ಲಿಸಿದ ಸೇವೆ ಇವುಗಳ ವಿಷಯವಾಗಿ ಎರಡು ವಾಕ್ಯವೃಂದಗಳನ್ನು ಬರೆಯಿರಿ.

# ೧೦. ಕಮಾಲಪಾಶಾ

[ ಕರ್ನಾಟಕದ ಸುಪ್ರಸಿದ್ಧ ಲೇಖಕರಾದ 'ವಿಲಾಸಿ' ಅವರು ಬರೆದ 'ತರುಣ ತುರ್ಕಸ್ತಾನ ಎಂದರೆ ಕಮಾಲಪಾಶಾ' ಎಂಬ ಗ್ರಂಥದಿಂದ ಈ ಭಾಗವನ್ನು ತೆಗೆದುಕೊಳ್ಳಲಾಗಿದೆ. ತುರ್ಕಸ್ತಾನದಲ್ಲಿ ರಾಜಕೀಯ ಧಾರ್ಮಿಕ ಸಾಮಾಜಿಕ ಕ್ರಾಂತಿಯ ಮೂಲಕ ತುರ್ಕಸ್ತಾನವನ್ನು ಒಂದು ನವೀನವಾದ ಬಲವಾದ ರಾಷ್ಟ್ರವನ್ನಾಗಿ ಮಾರ್ಪಡಿಸಿದ ಶ್ರೇಯಸ್ಸು ಕಮಾಲಪಾಶಾನಿಗೆ ಇದೆ. ಅವನು ಮಾಡಿದ ಸುಧಾರಣೆಗಳ ಅಲ್ಪಪರಿಚಯ ಇಲ್ಲಿದೆ. ]

ಕಮಾಲನ ಜೀವನವು ಸರ್ವತೋಮುಖವಾಗಿ ಕ್ರಾಂತಿಮಯ-ವಾದದ್ದು. ಇಡಿಯ ತುರ್ಕಸ್ತಾನವನ್ನೆ ಕಮಾಲನು ಬದಲು ಮಾಡಿದನು. ತಾನು ಕಮಾಲ (ಬಲಿಷ್ಠ) ನೆನಿಸಿದಂತೆ ತನ್ನ ದೇಶವನ್ನು ದೇಶಬಾಂಧವ-ರನ್ನು ಕೂಡ ಬಲಿಷ್ಠರನ್ನಾಗಿ ಮಾಡಿದನು. ಮಹಾಯುದ್ಧದ ಮುಂಚೆ ತುರ್ಕಸ್ತಾನಕ್ಕೆ 'ಯುರೋಪದ ಮುದುಕ ರೋಗಿ' ಎಂದು ಮುತ್ಸದ್ದಿ-ಗಳು ನಗೆಯಾಡುತ್ತಿದ್ದರು. ಅದೇ ಮುತ್ಸದ್ದಿಗಳಿಗೆ ಮುಂದೆ ಕಮಾಲ-ನೊಡನೆ ಹೋರಾಡಿ ರಣರಂಗದಲ್ಲೂ ರಾಷ್ಟ್ರಸಂಘದಲ್ಲೂ ಸೋಲಬೇಕಾ-ಯಿತು. ರೋಗಿಯನ್ನು ವಾಸಿಮಾಡಿ, ಮುದುಕನನ್ನು ತರುಣನನ್ನಾಗಿ ಮಾಡಿದ ಮಾಯಾವಿಯನ್ನು ಕಂಡು ಬೊಟ್ಟುಕಚ್ಚಬೇಕಾಯಿತು.

ಕಮಾಲನು ಶಿಕ್ಷಣದಿಂದ ಸೈನಿಕವೃತ್ತಿಯವನಾಗಿದ್ದರೂ ಸ್ವಭಾವ-ದಿಂದ ಶಾಂತಿಪ್ರಿಯನಾಗಿದ್ದನು. ಅನಿರ್ವಾಹವಾದಲ್ಲಿ ಮಾತ್ರ ಅವನು ಯುದ್ಧವನ್ನು ಹೂಡುತ್ತಿದ್ದನು. ಕಾಣಲು ಕಲ್ಲೆದೆಯವನಂತಿದ್ದರೂ ಯುದ್ಧ ನಡೆದಲ್ಲಿ ಪ್ರತಿ ದಿನ ಸಾಯಂಕಾಲ 'ಇಂದು ಇಷ್ಟು ಜನ ಸೈನಿಕರು ಮಡಿದರಲ್ಲ!' ಎಂದು ಮರುಗುತ್ತಿದ್ದನು. ೧೯೨೨ ರಲ್ಲಿ ಗ್ರೀಕ ಸೈನ್ಯವನ್ನು ಹೊಡೆದೋಡಿಸಿದ ಮೇಲೆ ಕಮಾಲನು ಯುದ್ಧದ ಆವಶ್ಯಕತೆಯಿಲ್ಲವೆಂದು ನಿರ್ಣಯಿಸಿಬಿಟ್ಟನು. ಮುಂದೆ ಬ್ರಿಟಿಶರ ಕೂಡ ಅನೇಕ ಸಲ ತಿಕ್ಕಾಟವಾಯಿತು. ಕಮಾಲನಿಗೂ ಇಂಗ್ಲಂಡಿಗೂ ಯುದ್ಧವು ಆಗಿಯೇ ತೀರುವುದೆಂದು ಮುತ್ಸದ್ದಿಗಳು ಕೂಡ ಬಗೆದಿದ್ದರು. ಆದರೆ ಎಲ್ಲರನ್ನೂ ಮೀರಿದ ಮುತ್ಸದ್ದಿತನ ಕಮಾಲನದು. ಕೊನೆಯ ವರೆಗೂ ಇಂದಿನ ವರೆಗೂ ಅವನು ಯುದ್ಧದ ಪ್ರಸಂಗಗಳನ್ನು ತಪ್ಪಿಸಿ-ದ್ದಾನೆ; ಹೇಡಿತನದಿಂದಲ್ಲ, ವಿಶಾಲಹೃದಯದಿಂದ. ನೂರಾರು ವರ್ಷಗಳ ವರೆಗೆ ಯುದ್ಧಗಳಿಂದಲೆ ತನ್ನ ದೇಶವು ಸವೆದುಹೋಗಿತ್ತು, ತನ್ನ ದೇಶ-ಬಾಂಧವರು ಬಡವರಾಗಿದ್ದರು. ಇಂದು ತನ್ನ ಧ್ಯೇಯವು ಯುದ್ಧ-ಗಳನ್ನಾಡಿ ಜಯವನ್ನು ಸಂಪಾದಿಸುವುದಲ್ಲ, ಶಾಂತಿ-ಸುಖ-ಸಂರಕ್ಷಣೆ-ಗಳನ್ನೊದವಿಸಿ ತನ್ನ ದೇಶದಲ್ಲೂ ತನ್ನ ಜನರಲ್ಲೂ ಹೊಸ ರಕ್ತವನ್ನೂ ಹೊಸ ಶಕ್ತಿಯನ್ನೂ ತುಂಬುವುದು. ತುರ್ಕಸ್ತಾನವು ಯುರೋಪದ ಹಿಂದುಳಿದ ರಾಷ್ಟ್ರಗಳಲ್ಲಿ ಒಂದಾಗಿತ್ತು. ದೇಶದಲ್ಲಿ ವ್ಯವಸಾಯಗಳಿಲ್ಲ,

ಉದ್ಯೋಗಗಳಿಲ್ಲ, ಕಲೆಗಳಿಲ್ಲ, ಕೈಗಾರಿಕೆಗಳಿಲ್ಲ, ವ್ಯಾಪಾರವಿಲ್ಲ, ಅದಕಾಗಿ ಸಿರಿವಂತಿಕೆಯೂ ಇಲ್ಲ. ಇದನ್ನೆಲ್ಲ ಸರಿಪಡಿಸಿಕೊಳ್ಳಬೇಕೆಂದು ಕಮಾಲನು ಹಟತೊಟ್ಟನು. ಅವನು ಹೊಸದಾಗಿ ಸ್ಥಾಪಿಸಿದ ಅಂಗೋರಾ ರಾಜಧಾನಿಯು ಈ ಹಟದ ಸಂಕೇತವಾಗಿದೆ. ಮೊದಲು ಇಲ್ಲಿ ರಾಜ-



ಧಾನಿಯನ್ನು ಸ್ಥಾಪಿಸಿದಾಗ ಅದೊಂದು ಬಿಸಿಲಿನಿಂದ ರಣಗುಡುವ ನಿರ್ಜನ ಕಾಡುಪ್ರದೇಶವಾಗಿತ್ತು. ಅಲ್ಲಲ್ಲಿ ಮಳೆಯಿಂದ ನೀರು ತುಂಬಿ ನಿಲ್ಲುವ ತಗ್ಗುಗಳಿಂದ ನಾನಾತರದ ಅಪಾಯಕಾರಕ ಜ್ವರ ರೋಗಗಳ ತವರ್ಮನೆ-ಯಾಗಿತ್ತು. ಸೈನಿಕರು ತುಳಿದು ತುಳಿದು ಸಮಮಾಡಿದ ದೂಳಿಯ

ದಾರಿಗಳೆ ಬೀದಿಗಳೆನಿಸುತ್ತಿದ್ದುವು. ಹೊರಗಿನ ಜಗತ್ತಿಗೂ ಅಂಗೋ- ರಾಕ್ಕೂ ಯಾವ ರೀತಿಯಿಂದಲೂ ಸಂಬಂಧವಿರಲಿಲ್ಲ. ಯುದ್ಧದ ಕಾಲಕ್ಕೆ ತಾತ್ಪೂರ್ತಿಕವಾಗಿ ಒಂದು ರೈಲು ದಾರಿಯನ್ನು ಕಟ್ಟಲಾಗಿತ್ತು. ಎಷ್ಟೊಂದು ತೊಂದರೆಗಳು, ಅಪಾಯಗಳು ಸಂಭವಿಸಿದರೂ ಕಮಾಲನು ಈ ಸ್ಥಾನವನ್ನು ಬಿಡಲಿಲ್ಲ. ಜರ್ಮನಿಯಿಂದ ಶಿಲ್ಪಶಾಸ್ತ್ರಜ್ಞರು ಬಂದರು. ರೋಗಗಳ ತವರ್ಮನೆಯಾದ ತಗ್ಗುಗಳನ್ನು ತುಂಬಿಕೊಂಡರು. ಲಕ್ಷಾವಧಿ ಗಿಡಗಳನ್ನು ನೆಟ್ಟು ರಣಗುಡುವ ವನವನ್ನು ರಮ್ಯ ಉಪವನವನ್ನಾಗಿ ಮಾಡಿದರು. ಶಾಸ್ತ್ರೀಯ ಶೋಧಗಳ ಸರ್ವವಿಧವಾದ ಸಹಾಯದಿಂದ ವಿಶಾಲವಾದ ಬೀದಿಗಳನ್ನೂ ಎತ್ತರವಾದ ಸುಂದರವಾದ ಮನೆಗಳನ್ನೂ ಕಟ್ಟಿದರು. ಮಹಮ್ಮದೀಯ ಧರ್ಮದ ಪ್ರಭಾವವಿರುವ ವರೆಗೆ ವಿಗ್ರಹ- ಗಳನ್ನು ಕೆತ್ತುವುದು ಪಾಪವಾಗಿದ್ದಿತು. ಆದರೆ ಕಮಾಲನು ವಿಗ್ರಹ ಕೆತ್ತುವ ಕಲೆಗೆ ಪ್ರೋತ್ಸಾಹನ ಕೊಟ್ಟು ಕೂಟಗಳಲ್ಲೂ ಸಾರ್ವಜನಿಕ ಕಟ್ಟಡಗಳಲ್ಲೂ ಸುಂದರವಾದ ವಿಗ್ರಹಗಳನ್ನಿಡುವಂತೆ ಏರ್ಪಾಡು ಮಾಡಿ- ದನು. ಔಷಧಾಲಯಗಳೂ ಉಪಾಹಾರಗೃಹಗಳೂ ಶಿಕ್ಷಣಮಂದಿರಗಳೂ ಆಧುನಿಕ ಶೈಲಿಯಲ್ಲೂ ಸಾರ್ವಜನಿಕವಾಗಿಯೂ ಕಟ್ಟಸಲ್ಪಟ್ಟುವು. ಸ್ವಲ್ಪಾವಧಿಯಲ್ಲಿಯೆ ಮಯಸಭೆಯಂತೆ ಮನೋಹರವಾದ ನಗರದ ನಿರ್ಮಾಣವಾಯಿತು. ಇಷ್ಟೆಲ್ಲ ಮಾಡಿದ ಮೇಲೆ 'ಅಂಗೋರಾ' ಎಂಬ ಹೆಸರು ತುರ್ಕೀಯ ಭಾಷೆಯ ಶಬ್ದ ಅಲ್ಲವೆನಿಸಿ ಈ ರಾಜಧಾನಿಗೆ 'ಅಂಕೋರಾ' ಎಂಬ ಹೆಸರನ್ನು ಕೊಡಲಾಯಿತು.

ದೇಶವನ್ನಾದರೂ ನಗರದಂತೆ ನೀಟಾಗಿ, ನಿಯಮಿತವಾಗಿ ನವೀನ ರೀತಿಯಿಂದ ನಿಶ್ಚಯಬುದ್ಧಿಯಿಂದ ನಿಲ್ಲಿಸಿದನೆಂದು ಹೇಳಬಹುದು. ತುರ್ಕಸ್ಥಾನದ ಶಾಸನಪದ್ಧತಿಗಳು ತೀರ ಹಳೆಯ ಕಾಲದವು; ಇಂದಿನ ವ್ಯವಹಾರಕ್ಕೆ ಸಂಬಂಧವಿಲ್ಲ; ನ್ಯಾಯಾಧಿಕಾರವು ಹೆಚ್ಚಾಗಿ ಅಶಿಕ್ಷಿತ- ರಾದ ಧರ್ಮಗುರುಗಳ ಕೈಯಲ್ಲಿ. ಈ ಪದ್ಧತಿಯನ್ನು ತೆಗೆದೊಗೆದು ಸ್ವಿಝರ್ಲಂಡದ ಸಿವ್ಹಿಲ್‌ಕೋಡ್, ಇಟಲಿಯ ಪಿನಲ್‌ಕೋಡ್ ಇವುಗಳ ಆಧಾರದಿಂದ ಅತ್ಯಂತ ಆಧುನಿಕವಾದ ಮತ್ತು ಸಶಾಸ್ತ್ರೀಯವಾದ ಪದ್ಧತಿಗಳನ್ನು ೧೯೨೬ ರ ಮಾರ್ಚ್ ತಿಂಗಳಿನಿಂದ ಜಾರಿಯಲ್ಲಿ ತರ-

ಲಾಯಿತು. ಒಕ್ಕಲತನದ ವ್ಯವಸಾಯಕ್ಕೆ ಯಂತ್ರಗಳ ಸಹಾಯಗಳನ್ನು ಕೊಟ್ಟು, ಒಕ್ಕಲಿಗರ ಸಾಲದ ಭಾರವನ್ನು ಇಳುಹಿಸಿ, ತೆರಿಗೆಯ ಭಾರವನ್ನು ಕಡಮೆ ಮಾಡಿ ದೇಶಕ್ಕೆ ಅವಶ್ಯವೆನಿಸುವ ಆಹಾರದ್ರವ್ಯ-ಗಳನ್ನು ಬೆಳೆಸುವುದಕ್ಕೆ ಪ್ರೋತ್ಸಾಹ ದೊರಕಿತು. ಕಮಾಲನು ಸ್ವತಃ ಮಾದರಿಯ ಒಕ್ಕಲನ್ನು ಇಟ್ಟಿದ್ದನು. ಶಿಕ್ಷಣದ ವಿಷಯದಲ್ಲಂತೂ ಕಮಾಲನು ಪಟ್ಟ ಪರಿಶ್ರಮವು ಅಷ್ಟಿಷ್ಟೆಂದು ಹೇಳುವಂತಿಲ್ಲ. ಹಿಂದು-ಸ್ತಾನದಲ್ಲಿಯಂತೆ ತುರ್ಕಸ್ತಾನದಲ್ಲಿಯೂ ಪರಕೀಯರ ಆಡಳಿತೆಗೊಳ-ಗಾದ ಶಿಕ್ಷಣಸಂಸ್ಥೆಗಳೇ ಹೇರಳವಾಗಿದ್ದುವು. ಇಂತಹ ಅನೇಕ ಸಂಸ್ಥೆಗಳನ್ನು ಕಮಾಲನು ತೆಗೆದೊಗೆದನು. ತುರ್ಕೀಯ ಭಾಷೆಯನ್ನೆ ಮಾಧ್ಯಮಿಕವನ್ನಾಗಿ ಮಾಡಲು ಮತ್ತು ಕೆಲವು ತುರ್ಕೀಯರನ್ನಾದರೂ ಶಿಕ್ಷಕರೆಂದು ನಿಯಮಿಸಲು ಒಪ್ಪಿದ ಸಂಸ್ಥೆಗಳಿಗೆಯೆ ಮಾನ್ಯತೆಯನ್ನು ಕೊಟ್ಟನು. ತುರ್ಕಸ್ತಾನದ ಜನರು ಬಡವರಾಗಿದ್ದಾರೆ; ಅನೇಕರಿಗೆ ತಮ್ಮ ಮಕ್ಕಳಿಗಾಗಿ ಪಠ್ಯಪುಸ್ತಕಗಳನ್ನು ಕೊಂಡುಕೊಳ್ಳುವ ಯೋಗ್ಯತೆ ಇರಲಿಲ್ಲ; ಇಂತಹರಿಗಾಗಿ ರಾಷ್ಟ್ರದಿಂದ ಮುಂಗಡ ಹಣ ಕೊಡಿಸುವ ಅನುಕೂಲತೆ ಮಾಡಿಕೊಟ್ಟನು. ಇದಲ್ಲದೆ ಸ್ವತಃ ಆಗಾಗ ಯಾವು-ದಾದರೊಂದು ಶಿಕ್ಷಣ ಸಂಸ್ಥೆಯನ್ನು ನೋಡಲು ಅನಿರೀಕ್ಷಿತವಾಗಿ ಹೋಗುವನು. ರಾಷ್ಟ್ರೀಯ ಸಾಹಿತ್ಯ ಪರಿಷತ್ತು ಒಂದು ನಿರ್ಮಿತ-ವಾಗಿದೆ. ರಾಷ್ಟ್ರಭಾಷೆಯ ಶಬ್ದಕೋಶವನ್ನೂ ಸಾಹಿತ್ಯವನ್ನೂ ಬೆಳೆಸುವುದು ಈ ಪರಿಷತ್ತಿನ ಮುಖ್ಯ ಕಾರ್ಯಗಳಲ್ಲಿ ಒಂದಾಗಿದೆ. ರಾಷ್ಟ್ರದ ವ್ಯಾಪಾರವನ್ನೂ ವ್ಯವಸಾಯವನ್ನೂ ದೇಶಾಭಿಮಾನದ ದೃಷ್ಟಿಯಿಂದಲೇ ಬೆಳೆಸಿದ ಕಮಾಲನ ಧೈರ್ಯವನ್ನು ಹೊಗಳುವಂತಿದೆ. ತುರ್ಕಸ್ತಾನದಲ್ಲಿ ಹಣವಿರಲಿಲ್ಲ. ಇದ್ದ ಬಡತನವು ಯುದ್ಧದಿಂದ ಹೆಚ್ಚಾಗಿತ್ತು. ಪರರಾಷ್ಟ್ರಗಳು ಕಮಾಲನ ನೀತಿಯಲ್ಲಿ ಮತ್ತು ಅಧಿಕಾರಸ್ಥಿರತೆಯಲ್ಲಿ ವಿಶ್ವಾಸವಿಲ್ಲದ್ದಕ್ಕಾಗಿ ಸಾಲವನ್ನು ಕೊಡಲು ಹಿಂಜರಿಯುತ್ತಿದ್ದುವು. ಪರರಾಷ್ಟ್ರಗಳಿಂದ ಸಾಲವನ್ನು ಪಡೆಯ-ಬಾರದೆಂದು ಕಮಾಲನೂ ನಿಶ್ಚಯಿಸಿದ್ದನು. ಆರ್ಥಿಕ ವಿಷಯಗಳಲ್ಲಿ ಪರಾವಲಂಬಿಯಾದುದಕ್ಕೆಯೆ ಸುಲ್ತಾನನ ತುರ್ಕಸ್ತಾನವು ತನ್ನ ಸ್ಥಾನ-

ಮಾನಗಳನ್ನು ಕಳೆದುಕೊಂಡಿತ್ತು. ಅದಕಾಗಿ ಕಮಾಲನು ಇದ್ದಷ್ಟು ಹಣವನ್ನೆ ಉಪಯೋಗಿಸುವ ತತ್ತ್ವವನ್ನು ತನ್ನಷ್ಟಕ್ಕೆ ಒಪ್ಪಿಕೊಂಡನು. ದೇಶವ ಧನಮೂಲವನ್ನೆಲ್ಲ ದೇಶದ ಸುಧಾರಣೆಗಳಿಗಾಗಿಯೆ ವೆಚ್ಚ ಮಾಡಬೇಕು; ವೈಯಕ್ತಿಕ ಲಾಭಕ್ಕೆ ಯಾವ ಅವಕಾಶವೆ ಇಲ್ಲ; ವ್ಯಕ್ತಿಯ ಸಂಪತ್ತನ್ನೆಲ್ಲ ರಾಷ್ಟ್ರದ ಸೊತ್ತೆಂದು ತಿಳಿಯಬೇಕು—ಎಂಬುದು ಇವನು ಕೈಕೊಂಡ ಧೋರಣೆ. ರೈಲು ದಾರಿಗಳನ್ನೂ ಸೈನ್ಯದ ಯಾಂತ್ರಿಕ ಸಾಮಗ್ರಿಗಳನ್ನೂ ನವೀನ ವ್ಯವಸಾಯಗಳನ್ನೂ ಈ ಧೋರಣೆಯಿಂದಲೆ ಸಜ್ಜುಪಡಿಸಿಕೊಂಡನು. ಸ್ತ್ರೀಯರ ಸ್ವಾತಂತ್ರ್ಯದ ವಿಷಯವಾಗಿ ಮಾಡಿದ ಕಾರ್ಯವನ್ನೆಲ್ಲ ಈ ಮೊದಲೇ ಸೂಚಿಸಿದ್ದೇವೆ. ಒಟ್ಟಾರೆ ರಾಷ್ಟ್ರಸಂಸ್ಥೆಯ ಧ್ಯೇಯವು ಪ್ರಜಾರಂಜನೆಯಾಗಿರಬೇಕೆಂಬ ತತ್ತ್ವವೆ ಕಮಾಲನ ಆಡಳಿತದ ಸೂತ್ರವೆಂದು ಹೇಳಬಹುದು.

—ವಿಲಾಸಿ.

**೧. 'ಅಂಗೋರಾ'ದ ಮೊದಲಿನ ಸ್ಥಿತಿ, ರಾಜಧಾನಿಯಾದ ತರುವಾಯದ ಸ್ಥಿತಿ, ಇವುಗಳನ್ನು ವರ್ಣಿಸಿರಿ. ೨. 'ಅಂಗೋರಾ' ವನ್ನು 'ಅಂಕೋರಾ' ಎಂದು ತಿದ್ದುವದು, ವಿಗ್ರಹಗಳನ್ನು ಕೆತ್ತುವ ಕಲೆಗೆ ಪ್ರೋತ್ಸಾಹ ಕೊಡುವದು ಇವುಗಳಲ್ಲಿ ಕಮಾಲನ ಯಾವ ಗುಣಸ್ವಭಾವ-ಗಳು ಕಂಡುಬರುತ್ತಿವೆ? ೩. ನ್ಯಾಯ, ಪದ್ಧತಿ, ಶಿಕ್ಷಣ, ಉದ್ಯೋಗ ದೇಶದ ಸಂಪತ್ತಿ, ಈ ವಿಷಯದಲ್ಲಿ ಕಮಾಲನು ಮಾಡಿದ ತಿದ್ದುಪಾಟು-ಗಳಾವವು? ೪. ಸ್ಪಷ್ಟೀಕರಿಸಿರಿ.—(ಅ) ಕಮಾಲನ ಜೀವನವು ಸರ್ವತೋ-ಮುಖವಾಗಿ ಕ್ರಾಂತಿಮಯವಾದದ್ದು. (ಆ) ವ್ಯಕ್ತಿಯ ಸಂಪತ್ತನ್ನೆಲ್ಲ ರಾಷ್ಟ್ರದ ಸೊತ್ತೆಂದು ತಿಳಿಯಬೇಕು.**

# ೧೧. ಕರ್ನಾಟಕವು ಮೃತರಾಷ್ಟ್ರವೇ ?

[ ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ' ಎಂಬ ಗ್ರಂಥದಿಂದ ಈ ಭಾಗವನ್ನು ಆರಿಸಿದೆ. ಲೇಖಕರ ಪರಿಚಯುವನ್ನು ಸೊ. ಓ. ೬ನೆಯ ಪುಸ್ತಕದ ೩೫ ನೆಯ ಪಾಠದಲ್ಲಿ ಓದಿರುವಿರಿ. 'ಕರ್ನಾಟಕ ಗತ-ವೈಭವವು' ಕನ್ನಡಿಗರಲ್ಲಿ ಕನ್ನಡ ನುಡಿನಾಡುಗಳ ಬಗೆಗೆ ಅಭಿಮಾನವನ್ನು ಜಾಗ್ರತಗೊಳಿಸಲಿಕ್ಕೆ ಬಹುಮಟ್ಟಿಗೆ ಕಾರಣಗ್ರಂಥವಾಗಿದೆ. ಕರ್ನಾಟಕವು ಮೃತರಾಷ್ಟ್ರವೆಂದು ತಿಳಿದುಕೊಂಡು ಕನ್ನಡಿಗರು ಕರ್ನಾಟಕದ ಬಗೆಗೆ ಅಭಿಮಾನಶೂನ್ಯರಾಗಿದ್ದ ಕಾಲದಲ್ಲಿ ಈ ಸ್ಫೂರ್ತಿದಾಯಕ ಗ್ರಂಥವನ್ನು ಲೇಖಕರು ಬರೆದರು. ಈ ಆಯ್ಕೆಯಲ್ಲಿ ಕರ್ನಾಟಕವು ಮೃತರಾಷ್ಟ್ರವಲ್ಲ-ವೆಂಬ ಮಾತನ್ನು ಸಿದ್ಧಗೊಳಿಸಿ, ಕರ್ನಾಟಕತ್ವವನ್ನು ಅರಿತುಕೊಳ್ಳುವ ರೀತಿಯನ್ನು ಲೇಖಕರು ಪ್ರತಿಪಾದಿಸಿದ್ದಾರೆ. ]

ಇದು ಸಾಮಾನ್ಯ ವಿಚಾರವಾಯಿತು. ನಮ್ಮ ಜನ್ಮಭೂಮಿಯಾದ ಕನ್ನಡ ನಾಡಿನ ಸದ್ಯದ ಅವಸ್ಥೆಯೇನು? ಅದು ಮೃತರಾಷ್ಟ್ರವೋ, ಜೀವಂತ ರಾಷ್ಟ್ರವೋ ಎಂಬುದನ್ನು ನಾವಿನ್ನು ತಿಳಿಯಲು ಮುಂದು-ವರಿಯುವ. ಕನ್ನಡಿಗರೇ ! ನಾವು ನಿಮ್ಮ ಕೈಯಲ್ಲಿ ಕಡ್ಡೀ ಕೊಟ್ಟು ಸಾರಿದೂರಿ ಹೇಳುವುದೇನೆಂದರೆ, ನಮ್ಮ ಕರ್ನಾಟಕವು ಮೃತರಾಷ್ಟ್ರವಲ್ಲ ; ಅದು ಜೀವಂತ ರಾಷ್ಟ್ರವು ; ಅಷ್ಟೇಕೆ, ಅದೊಂದು ಪ್ರತಿಭಾಸಂಪನ್ನವಾದ ರಾಷ್ಟ್ರವು. ೧೦೦೦-೧೫೦೦ ವರ್ಷಗಳ ವರೆಗೆ ಅವ್ಯಾಹತವಾಗಿ ಹಿಂದೂ-ದೇಶದ ಇತಿಹಾಸದಲ್ಲಿ ವೈಭವದಿಂದ ಮೆರೆದ ರಾಷ್ಟ್ರವೆಂದರೆ ಕರ್ನಾಟಕ-ವೊಂದೇ ! ಉತ್ತರ ಹಿಂದುಸ್ತಾನದಂಥ ಬಲವಾದ ರಾಷ್ಟ್ರದ ಇತಿಹಾಸವು ಕೂಡ ಹರ್ಷವರ್ಧನನ ಕಾಲದಿಂದ ಲುಪ್ತವಾಗಿಹೋಯಿತು. ಆದರೆ ದಕ್ಷಿಣದಲ್ಲಿ ನಮ್ಮ ಕರ್ನಾಟಕವು ಮಾತ್ರ ಪೂರ್ವದಿಂದ ನಡೆದುಬಂದ ತನ್ನ ವೈಭವವನ್ನು ಸ್ವಲ್ಪವಾದರೂ ಕುಂದಿಸದೆ, ತಿರುಗಿ ಹಬ್ಬುವಂತೆ ಮಾಡಿ, ಮುಂದೆ ಸಾವಿರಾರು ವರ್ಷಗಳ ವರೆಗೆ ತನ್ನ ಘನತೆಯನ್ನು ಅತ್ಯಂತ ದಕ್ಷತೆಯಿಂದ ಕಾಪಾಡಿಕೊಂಡಿದೆ. ಈ ಕರ್ನಾಟಕದಲ್ಲಿಯೇ ಜಗತ್ತಿನ

ಇತಿಹಾಸದಲ್ಲಿ ಕ್ರಾಂತಿಯನ್ನುಂಟುಮಾಡಿದಂಥ ಧರ್ಮಸ್ಥಾಪನಾಚಾರ್ಯರು ಜನ್ಮ ತಾಳಿರುವರು. ಈ ಕರ್ನಾಟಕವೂ ಮಹಾಮಹಾ ಕವಿಪುಂಗವರಿಗೆ ಜನ್ಮಕೊಟ್ಟದೆ. ಈ ಕರ್ನಾಟಕದಲ್ಲಿಯೇ ಜಗತ್ತನ್ನೆಲ್ಲ ಆಶ್ಚರ್ಯಗೊಳಿಸು-ವಂಥ, ಅನ್ಯಾದೃಶವಾದ ಕಟ್ಟಡಗಳು ಹುಟ್ಟಿವೆ. ಈ ಕರ್ನಾಟಕದಲ್ಲಿಯೇ ಇತರ ವಾಙ್ಮಯಗಳನ್ನು ಮೀರಿಸುವ ಗ್ರಂಥಗಳು ನಿರ್ಮಾಣವಾಗಿವೆ. ಈ ನಮ್ಮ ಕರ್ನಾಟಕದ ಸುಧಾರಣೆಯು ವಿಶಿಷ್ಟಬಗೆಯದಾಗಿರುವುದರಿಂದಲೇ ಗಾಯನಶಾಸ್ತ್ರದಲ್ಲಿ ' ಕರ್ನಾಟಕ ' ಎಂಬುದೊಂದು ಹೊಸ ಪದ್ಧತಿಯೇ ರೂಢವಾಗಿದೆ. ಸಾರಾಂಶ, ನಮ್ಮ ಅರಸರು ದೊಡ್ಡವರಿದ್ದರು; ನಮ್ಮ ರಾಜ್ಯವು ವಿಸ್ತಾರವಾಗಿ ಹಬ್ಬಿತ್ತು ; ನಮ್ಮ ವೈಭವವು ಅತಿಶಯವಾದ ಘನತೆಗೇರಿತ್ತು ; ಆ ಕಾಲಕ್ಕೆ ಹಿಂದುಸ್ತಾನದಲ್ಲಿ ಕರ್ನಾಟಕವನ್ನು ಹಿಂದೆ ಹಾಕುವ ರಾಷ್ಟ್ರವು ಯಾವುದೂ ಇರಲಿಲ್ಲ. ಕರ್ನಾಟಕದೊಳಗಿರುವಷ್ಟು ದೊಡ್ಡ ಪಟ್ಟಣಗಳು ಹಿಂದೂ ದೇಶದಲ್ಲಿರಲಿಲ್ಲ. ಕರ್ನಾಟಕದಲ್ಲಿರುವಷ್ಟು ವಿದ್ವಾಂಸರು ಬೇರೆ ಕಡೆಯಲ್ಲಿರಲಿಲ್ಲ. ಕರ್ನಾಟಕದಷ್ಟು ಸಂಪನ್ನವಾದ ವಾಙ್ಮಯವೂ ಮಿಕ್ಕ ಕಡೆಯಲ್ಲಿರಲಿಲ್ಲ. ಕರ್ನಾಟಕದಲ್ಲಿರುವಂಥ ಕಟ್ಟಡ-ಗಳು ಹಿಂದೂದೇಶದ ಕಣ್ಣುಮುಂದಿರಲಿಲ್ಲ. ಹೀಗಿದ್ದು ನಾವು ಅದಕ್ಕೆ ಮೃತರಾಷ್ಟ್ರವೆಂದು ಕರೆವುದೆಂತು ?

ಕನ್ನಡಿಗರೇ ! ನಿಮ್ಮ ಸುತ್ತುಮುತ್ತಲೂ ದೃಷ್ಟಿಯನ್ನು ಚೆಲ್ಲಿದರೆ ಅಲ್ಲಲ್ಲಿ ನಿಮ್ಮ ಪ್ರಾಚೀನ ಕರ್ನಾಟಕದ ಸಂಪನ್ನತೆಯ ದೇದೀಪ್ಯಮಾನ-ವಾದ ಹೆಗ್ಗುರುತುಗಳು ಕಣ್ಣಿಗೆ ಕಟ್ಟದಿರಲಾರವು. ಆ ನಾಡಿನಲ್ಲಿ ಹುಟ್ಟಿ ಬೆಳೆದು ದಿಗಂತ ಕೀರ್ತಿಯನ್ನು ಪಡೆದ ರಾಜಕಾರ್ಯಧುರಂಧರರ, ಮೇಧಾವಿಗಳ ಮತ್ತು ರಾಜಗುರುಗಳ ಜೀವನ ಚರಿತ್ರೆಯನ್ನೋದಿದರೆ ನಿಮ್ಮ ಜೀವನದ ಒಗಟೆಯು ಸಹಜವಾಗಿ ಒಡೆಯದೆ ನಿಲ್ಲದು. ಆ ನಾಡಿನ ಪ್ರಾಚೀನ ಸಂಪತ್ತಿಗೂ ಕಲಾಕೌಶಲ್ಯಕ್ಕೂ ಸಾಕ್ಷಿಯಾಗಿ ನಿಂತಿರುವ ಗುಡಿಗೋಪುರಗಳನ್ನು ನೋಡಿದರೆ ಇಂತಹ ಅಮಾನುಷ ಕಾರ್ಯಗಳನ್ನು ಸುಲಭವಾಗಿ ನೆರವೇರಿಸಿದ ರಾಷ್ಟ್ರದ ಅಗ್ಗಳಿಕೆಯು ಸಹಜವಾಗಿ ಗೊತ್ತಾಗುವುದು. ಇಂಥ ರಾಷ್ಟ್ರವು ಮೃತವಾಗಿರುವುದೆಂದು ಕಲ್ಪನೆ ಮಾಡುವುದಾದರೂ ಹೇಗೆ? ಕನ್ನಡಿಗರೇ! ಕರ್ನಾಟಕವು ಮೃತರಾಷ್ಟ್ರವಲ್ಲ;

ಅದು ಸ್ವಭಾವತಃ ಚೈತನ್ಯಪೂರ್ಣವಾದ ರಾಷ್ಟ್ರವು. ಕಾಲಾನು-ಸಾರವಾಗಿ ಅದು ಮೇಲು ಕೀಳು ಸ್ಥಿತಿಗೆ ಈಡಾಗಿರಬಹುದು. ಆದರೆ ಅದರಲ್ಲಿರುವ ಚೈತನ್ಯಶಕ್ತಿಯು ಮಾತ್ರ ಯಾವ ಕೃತ್ರಿಮೋಪಾಯ-ಗಳಿಂದಲೂ ಕುಂದಲಾರದು. ಈಗ ಅದು ತನ್ನ ಆಲಸ್ಯದ ಮೂಲಕ, ತನ್ನ ಜನರ ಹೇಡಿತನದ ಮೂಲಕ, ತನ್ನ ಕಡುತರವಾದ ದೈವದುರ್ವಿ-ಲಾಸದ ಮೂಲಕ, ಸಾಲದುದಕ್ಕೆ ಸುತ್ತಲಿನ ಬಿಕ್ಕಟ್ಟಾದ ಪರಿಸ್ಥಿತಿಯ ಮೂಲಕ ವಿಲಕ್ಷಣವಾದ ನಿದ್ರೆಗೀಡಾಗಿರುವುದೇನೋ ಸರಿ! ಆದರೆ ಇಂಥ ಸಂದುಕಟ್ಟಿನಲ್ಲಿ ತಾನು ಸತ್ತಿರದೆ ಜೀವಂತವಾಗಿರುವುದೆಂಬ ತಿಳಿ-ವನ್ನು ಮಾತ್ರ ನಾವು ಆ ರಾಷ್ಟ್ರದ ಮನಸ್ಸಿನಲ್ಲಿ ಬಿಂಬಿಸಿದರೆ ಸಾಕು. ಅದೇ ಅದನ್ನು ಅಡಬಡಿಸಿ ಎಚ್ಚರಗೊಳ್ಳುವಂತೆ ಮಾಡುವುದು ; ಅಲ್ಲದೆ ತನ್ನ ಸಾಂಪ್ರತದ ಹೀನಸ್ಥಿತಿಯಬಗ್ಗೆ ಪರಾಕಾಷ್ಠೆಯ ಉದ್ವೇಗವನ್ನೂಉಂಟು-ಮಾಡುವುದು. ಸಾರಾಂಶ, ರಾಷ್ಟ್ರಕ್ಕೂ ಮನುಷ್ಯನಂತೆ ಆತ್ಮ-ವಿರುವ ಕಾರಣ, ವೇದಾಂತಶಾಸ್ತ್ರವನ್ನೋದಿ ಆತ್ಮನ ಅಮೃತತ್ವವನ್ನೂ ಅವ್ಯಯಿತ್ವವನ್ನೂ ಅವಿಕಾರಿತ್ವವನ್ನೂ ತಿಳಿದುಕೊಂಡಿರುವ ಮನುಷ್ಯನು ಹೇಗೆ ದುಃಖಿಸದೆ, ಎದೆಗುಂದದೆ, ಧೀರನಾಗಿಯೂ ವೀರನಾಗಿಯೂ ಇರುವನೋ, ಹಾಗೆಯೇ ತನ್ನ ಜೀವದ್ದಶೆಯನ್ನು ಅರಿತುಕೊಂಡ ರಾಷ್ಟ್ರವು ಎಂಥ ಕಷ್ಟಪರಂಪರೆಗಳಿಗೂ ಅಂಜದೆ ಅಳುಕದೆ ಇರುವುದು. ಆದರೆ ಈಗ ನಮ್ಮ ಸ್ಥಿತಿಯು ಹಾಗೆಲ್ಲಿದೆ, ಕನ್ನಡಿಗರಾದ ನಾವು ಈ ನಿತ್ಯತ್ವವನ್ನು ಎಂದರೆ 'ಕರ್ನಾಟಕತ್ವ'ವನ್ನು ಮರೆತು, ಈಗಿರುವ ನಮ್ಮ ಕ್ಷಣಿಕವಾದ ಅವಸ್ಥೆಯೇ ಕೊನೆಯವರೆಗೂ ಇರುವುದೆಂಬ ಭ್ರಾಮಕ ಭಾವನೆಯಿಂದ ಕೈಕಾಲು ಕಳೆದುಕೊಂಡು ಕುಳಿತಿರುವೆವಲ್ಲಾ! ಅದೇ ನಾವು ನಮ್ಮ ಗತವೈಭವದ ಇತಿಹಾಸವನ್ನು, ನಮ್ಮ ಪ್ರಾಚೀನ ಸಂಸ್ಕೃತಿಯ ಹೃದ-ಯಂಗಮವಾದ ಮೇಲ್ಮೆಯನ್ನು ಮನಸ್ಸಿನಲ್ಲಿ ನಡುವಂತೆ ಅರಿತವರಾಗಿ-ದ್ದರೆ, ನಮ್ಮ ಕರ್ನಾಟಕವು ಭಾರತೀಯ ಇತಿಹಾಸದ ನಾಟ್ಯರಂಗದೊಳಗೆ ಕೈಕೊಂಡ ಪಾತ್ರದ ಬಲ್ಮೆಯು ನಮ್ಮ ಮಸುಕಾದ ಮನಸ್ಸಿನಲ್ಲಿ ಮೂಡಿ-ದ್ದರೆ, ಈಗಿನಂತೆ ನಾವು ಜೋಲುಬಿದ್ದ ಮತ್ತು ಬಾಡಿದ ಮೋರೆಯವ-ರಾಗಿ ಎಂದಿಗೂ ಕುಳಿತುಕೊಳ್ಳುತ್ತಿರಲಿಲ್ಲ! ಒಳ್ಳೆಯದು! ಆದದ್ದಾ-

ಯಿತು ! ಈಗಲಾದರೂ ಕಣ್ದೆರೆದು, ನಾವು ನಮ್ಮ 'ಕರ್ನಾಟಕತ್ವ' ವನ್ನು ಅರಿತು ನಮ್ಮ ಮುಂದಣ ಮಾರ್ಗವನ್ನು ತಿದ್ದಿಕೊಂಡರೆ ಜಗತ್ತಿನ ನಗೆಗೀಡಾಗದೆ ನಮ್ಮ ಮಾನವನ್ನು ನಾವು ಕಾಯ್ದುಕೊಂಡಂತಾಗು-ವುದು. ಇದೀಗ ನಮ್ಮೆಲ್ಲರ ಶ್ರೇಷ್ಠವಾದ ಕರ್ತವ್ಯವು.

ಹಾಗಾದರೆ ಆ 'ಕರ್ನಾಟಕತ್ವ'ವನ್ನು ಅರಿತುಕೊಳ್ಳುವುದೆಂತು ? ಅದೇನು ಕಣ್ಣಿಗೆ ಕಾಣುವುದೋ ? ಕಿವಿಗೆ ಕೇಳುವುದೋ ? ಕೈಗೆ ಸ್ಪರ್ಶಿಸುವುದೋ ? ಮೂಗಿಗೆ ಮೂಸುವುದೋ ? ಇಲ್ಲ, ಇಲ್ಲ. ಹಾಗಿದ್ದರೆ ಈ ಕಾರ್ಯವು ಎಷ್ಟೊಂದು ಸುಲಭಸಾಧ್ಯವಾಗಬಹುದಾಗಿತ್ತು ! ಆ ಮೇಲೆ ಈ ತರದ ಗೊಂದಲಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಹಾಗಿಲ್ಲವೆಂದೇ ಪ್ರತಿಯೊಬ್ಬನು ಅದನ್ನು ಜ್ಞಾನದೃಷ್ಟಿಯಿಂದಲೇ ಕಂಡುಹಿಡಿದು, ಅದರ ಅಸ್ತಿತ್ವವನ್ನು ಹೃನ್ಮಂದಿರದಲ್ಲಿ ಚಿಂತಿಸಬೇಕಾಗಿದೆ ! ಆದರೆ ಆಹಾ ! ಆ ದೃಷ್ಟಿಯಿಲ್ಲದಿರುವುದರಿಂದಲೇ ನಾವು ಕಣ್ಣಿದ್ದು ಕುರುಡರೂ ಕಿವಿಯಿದ್ದು ಕಿವುಡರೂ ಆಗಿದ್ದೇವೆ ! ನಮ್ಮ ಸುತ್ತಲೂ ಎಲ್ಲೆಲ್ಲಿಯೂ ಇತಿಹಾಸದ ರಾಶಿಯೇ ಒಟ್ಟಿದ್ದರೂ ನಮಗೆ ಇತಿಹಾಸವೇ ಇಲ್ಲವೆಂದು ಸುಮ್ಮನೆ ಅರಚಿಕೊಳ್ಳುತ್ತಿದ್ದೇವೆ. ಇದೋ ! ಇಲ್ಲಿ ನಮ್ಮೆದುರಿಗೆ ಮೈಗೊಂಡು ನಿಂತಿರುವ ಈ ಕೋಟೆಕೊತ್ತಳಗಳು ನಮ್ಮ ಗತವೈಭವದ ಹೆಗ್ಗುರುತುಗಳಲ್ಲವೇ ? ಅದೋ ! ಅಲ್ಲಿ ಕಾಣುತ್ತಿರುವ ಸುಂದರವಾದ ಭವ್ಯ ದೇವಾಲಯುಗಳು ನಮ್ಮ ಇತಿಹಾಸದ ಪವಿತ್ರ ರಕ್ಷಾಭಾಂಡಾರ-ಗಳಲ್ಲವೇ ? ಜಗತ್ತಿನಲ್ಲೆಲ್ಲ ಹೆಸರುಪಡೆದಿರುವ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬೀ ಮತಗಳು ಕರ್ನಾಟಕಸ್ಥರ ಹೆಸರನ್ನು ಎಂದಾ-ದರೂ ಮರೆಯಿಸುವವೇ ? ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ, ಇವೆಲ್ಲವು ನಮ್ಮ ಮನಸ್ಸಿನಲ್ಲಿ ಕಿಂಚಿತ್ತಾದರೂ ಸ್ಫೂರ್ತಿಯನ್ನುಂಟು-ಮಾಡುವುದಿಲ್ಲವಲ್ಲ ! ಕರ್ನಾಟಕವು ನಮ್ಮ ಹುಟ್ಟುನಾಡು ; ಅದನ್ನಾಳಿದ ಅರಸರು ನಮ್ಮವರು ; ಸಂಕಟಕಾಲದಲ್ಲಿ ಅದರ ಜೋಕೆಗಾಗಿ ಕಾದಿ ನೀರಿನಂತೆ ತಮ್ಮ ಮೈನೆತ್ತರವನ್ನು ಬಸಿದಂಥ ಕಾದಾಳುಗಳು ನಮ್ಮ ವೀರಬಂಧುಗಳು ; ಅನೇಕ ಶತಮಾನಗಳು ಸಂದುಹೋದರೂ ದಿಕ್ಕು ದಿಕ್ಕುಗಳಲ್ಲಿ ತಮ್ಮ ಕೈಗಾರಿಕೆಯ ಸೊಕ್ಕಿನಿಂದ ಮೊಗವೆತ್ತಿಕೊಂಡು

ನಿಂತಿರುವ ಗುಡಿಗೋಪುರಗಳು ನಮ್ಮ ಪುರಾತನ ಶಿಲ್ಪಶಾಸ್ತ್ರದ ಮಾದರಿಗಳು ;— ಎಂಬ ಅಭಿಮಾನವು ನಮ್ಮ ಮನೋಭೂಮಿಕೆಯಲ್ಲಿ ಎಲ್ಲಿಯವರೆಗೆ ಅಂಕುರಿಸುವುದಿಲ್ಲವೋ ಅಲ್ಲಿಯವರೆಗೆ ಅವೆಲ್ಲವು ನಮ್ಮನ್ನು ಕಣ್ಣೆತ್ತಿ ನೋಡಲಾರವು ! ನಮ್ಮನ್ನು ಸಮೀಪಿಸಲಾರವು ! ನಮಗೆ ಬೋಧಿಸಲಾರವು ! ನಮ್ಮನ್ನು ಪ್ರೇರಿಸಲಾರವು ! ಎಂದಮೇಲೆ ಸವಿ-ಸವಿಯೂಟಗಳನ್ನುಂಡು ವೀಳ್ಯವನ್ನು ಮೆಲ್ಲುತ್ತಲೂ ಚಕ್ಕಂದವಾಡು-ತ್ತಲೂ ಕೇವಲ ತಾಮಸವೃತ್ತಿಯಿಂದ ಕಾಲಕಳೆಯುತ್ತಿರುವ ನಮ್ಮಂಥ ವಿಚಾರಶೂನ್ಯರಾದ ಕನ್ನಡಿಗರಲ್ಲಿ ಅವುಗಳ ನೋಟದಿಂದ ಉಚ್ಚ ಭಾವನೆಗಳು ಉಕ್ಕಿಬರುವ ಮಾತಂತೂ ದೂರವೇ ಸರಿ. ಕನ್ನಡಿಯಲ್ಲಿ ನಮ್ಮ ಮುಖವು ಕಾಣಿಸಬೇಕಾದರೆ ಅದು ಸ್ವಚ್ಛವಾಗಿರಬೇಕು. ಹಾಗೆಯೇ ಇಂಥ ಉದಾತ್ತ ಕಲ್ಪನೆಗಳು ನಮ್ಮಲ್ಲಿ ಮೂಡಬೇಕಾದರೆ, ನಮ್ಮ ಮನಸ್ಸು ಶುದ್ಧವೂ ಸಾತ್ವಿಕಾಹಂಕಾರದಿಂದೊಡಗೂಡಿದ್ದೂ ಇರಬೇಕು. ಯಾವ ಮನುಷ್ಯನಲ್ಲಿ ಸಾತ್ವಿಕಾಹಂಕಾರದ ಕಿರಣಗಳು ಕಾಣಬರುವುದಿಲ್ಲವೋ ಅವನ ಬಾಳು ಬಾಳಲ್ಲ. ಅದು ಭೂಭಾರವು. 'ನಾನು ಕನ್ನಡಿಗನು,' 'ಕರ್ನಾಟಕವು ನನ್ನ ನಾಡು' ಎಂಬ ಸದ್ವಿಚಾರತರಂಗಗಳಿಂದ ಯಾವನ ಹೃದಯವು ಅತ್ಯಾನಂದದಿಂದ ಧೀಂಕಿಡುವುದಿಲ್ಲವೊ ಕನ್ನಡ ತಾಯಿಗೆ ಈಗ ಬಂದೊದಗಿರುವ ವಿಷಮ-ಸ್ಥಿತಿಯಲ್ಲಿ ಯಾವಾತನ ಹೃದಯವು ತಲ್ಲಣಿಸುವುದಿಲ್ಲವೋ, ತಳಮಳಿ-ಸುವುದಿಲ್ಲವೋ ಅದು ಹೃದಯವಲ್ಲ ; ಕಲ್ಲಿನ ಬಂಡೆ! ದೇಹವಲ್ಲ ಮೋಟುಮರ ! ಇಂಥ ಚೇತನವಿಲ್ಲದಿರುವ ಜನರಿಗೆ ಕಣ್ಣೀರಿಡುತ್ತಿರುವ ಆ ಕನ್ನಡತಾಯಿಯ ಗೋಳಿನಿಂದೇನು ! ಕಳಚಿಬೀಳುತ್ತಿರುವ ಆ ಗುಡಿಗೋಪುರಗಳಿಂದೇನು! ಬಾಯಿಯಿಲ್ಲದ ಉಚ್ಚಧ್ವನಿಯಿಂದ ಕೂಗು-ತ್ತಿರುವ ಆ ವಾಙ್ಮಯದಿಂದೇನು ! ಕಾಡುಬೀಡುಗಳಲ್ಲಿ ಕೇಳುವವರಿಲ್ಲದೆ ಸುಮ್ಮನೆ ಗಂಟಲುಹರಿದುಕೊಂಡು ಕೂಗಿ ಹೊಗಳುಭಟ್ಟರಂತೆ ತಮ್ಮ ವೀರರನ್ನೂ ವೀರಸತಿಯರನ್ನೂ ಹೊಗಳುತ್ತಿರುವ ಆ ವೀರಗಲ್ಲು, ಮಹಾಸತಿಕಲ್ಲುಗಳಿಂದೇನು ! ಆದುದರಿಂದ ಎಲೇ ಕನ್ನಡಿಗರೇ ! ನೀವು 'ಕರ್ನಾಟಕಾಭಿಮಾನದೇವತೆ'ಯನ್ನು ಪ್ರಸನ್ನೀಕರಿಸಿಕೊಂಡು ಅವಳ

ಅಮರತ್ವವನ್ನು ಜ್ಞಾನದೃಷ್ಟಿಯಿಂದ ಕಂಡುಹಿಡಿದು, ಅವಳ ಇತಿಹಾಸ-ವನ್ನು ಆದ್ಯಂತವಾಗಿ ಪರಿಶೀಲಿಸಿ ಕನ್ನಡಿಗರೆಂಬ ನಿಮ್ಮ ಹೆಸರನ್ನು ಸಾರ್ಥಕಪಡಿಸಿಕೊಳ್ಳಿರಿ.

—ಆಲೂರ ವೆಂಕಟರಾಯ.

೧. ಕರ್ಣಾಟಕದ ಗತವೈಭವವನ್ನು ಸೂಚಿಸುವಂಥ ಸಂಗತಿಗಳು ಯಾವವು? ೨. ಕರ್ಣಾಟಕವು ಮೃತರಾಷ್ಟ್ರವಲ್ಲವೆಂಬದಕ್ಕೆ ಯಾವ ಆಧಾರಗಳಿವೆ? ೩. ಕನ್ನಡಿಗರು ಇಂಥ ಪರಿಸ್ಥಿತಿಯಲ್ಲಿ ಏನು ಮಾಡ-ಬೇಕೆಂದು ಲೇಖಕರು ಸೂಚಿಸುತ್ತಾರೆ? ೪. ಕಡ್ಡಿಕೊಟ್ಟು ಹೇಳು, ಈಡಾಗು, ಮೇಲ್ಕೈ, ಅರಚಿಕೊಳ್ಳು, ಸಂದುಹೋಗು, ತಲ್ಲಣಿಸು, ಕಳಚಿ ಬೀಳು ಈ ಶಬ್ದಗಳ ಅರ್ಥವನ್ನು ಹೇಳಿ ಅವನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

## ೧೨. ನಮ್ಮ ಊರು

[ ಹಳ್ಳಿಯ ಜೀವನದಲ್ಲಿಯ ಸೊಗಸನ್ನು ರಮ್ಯವಾಗಿ ಚಿತ್ರಿಸುವ ಒಳ್ಳೆಯ ಲೇಖಕರಾದ ಗೊರೂರು ರಾಮಸ್ವಾಮಿ ಅಯ್ಯಂಗಾರರ 'ನಮ್ಮ ಊರಿನ ರಸಿಕರು' ಎಂಬ ಪುಸ್ತಕದಿಂದ ಈ ಭಾಗವನ್ನು ಆಯ್ದುಕೊಳ್ಳ-ಲಾಗಿದೆ. ಲೇಖಕರ ಪರಿಚಯು ಸೊ. ಓ. ೬ನೆಯ ಪುಸ್ತಕದ ೯ನೆಯ ಪಾಠದಲ್ಲಿ ಬಂದಿದೆ. ಇಲ್ಲಿ ಮೈಸೂರ ಸೀಮೆಯ ಒಂದು ಹಳ್ಳಿಯ ವಿಚಾರವನ್ನು ಲೇಖಕರು ಬರೆದಿದ್ದಾರೆ. ಆ ಹಳ್ಳಿಯಲ್ಲಿಯ ಪ್ರಕೃತಿಯ ಬೆಡಗು, ಅಲ್ಲಿಯ ವೈಶಿಷ್ಟ್ಯ, ಕೆಲ ಜನ ವ್ಯಕ್ತಿಗಳು ಈ ವಿಷಯಗಳನ್ನು ಲೇಖಕರು ಮಾರ್ಮಿಕ-ವಾಗಿ ಚಿತ್ರಿಸಿದ್ದಾರೆ. ಸ್ವಾಭಾವಿಕ ವರ್ಣನೆಯೊಂದಿಗೆ ಹಾಸ್ಯ ಬೆರೆತಿದೆ. ಅನೇಕ ಜನರು ಕಾಣದ, ಕಂಡರೂ ವರ್ಣಿಸದ ಹಳ್ಳಿಯ ಸೊಗಸು ಈ ಲೇಖನದಲ್ಲಿದೆ. ]

ನಮ್ಮ ಊರು ಮಲೆನಾಡಿನ ಸೆರಗಿನಲ್ಲಿ ಇದೆ. ಮಧ್ಯಕ್ಕಿಂತಲೂ ಯಾವುದರಲ್ಲೂ ಯಾವಾಗಲೂ ಸೆರಗು ಹೆಚ್ಚು ಸೊಗಸು. ಮಲೆನಾಡಿನ ಸೂರ್ಯರಶ್ಮಿಯಿಲ್ಲದ ಮಿತಿಮೀರಿದ ಜಡಿಮಳೆಯೂ ಕೆಸರೂ ಮೈಯನ್ನು ಕಡಿಯುವ ಕುಳಿರ್ಗಾಳಿಯೂ ಅಲ್ಲಿಲ್ಲ. ಬಯಲುಸೀಮೆಯ ಉರಿಬಿಸಿಲು, ಕಾದ ಧೂಳೂ ಅಲ್ಲಿಲ್ಲ. ಮಲೆನಾಡಿನ ಮಳೆಯ ಕೊಂಚ ಭಾಗವು ಮಾತ್ರ ನಮ್ಮೂರಿಗೆ ಬೀಳುತ್ತದೆ. ಬೇಸಗೆಯ ಉರಿಬಿಸಿಲಿನ ತುದಿ ಮಾತ್ರ ಈ ಸೆರಗನ್ನು ಸೋಕುತ್ತದೆ. ಹಸುರಾದ ಚಿಗುರಿನಿಂದ ಕೂಡಿದ ಮರದ ಮಧ್ಯದಲ್ಲಿ ಎಲ್ಲೋ ಹಕ್ಕಿಯೊಂದು ಕೂಗುತ್ತಿದ್ದರೆ ಎಲೆಗಳ ಮರೆಯಲ್ಲಿ ಹೂ ಒಂದು ಅರಳಿ ಸುವಾಸನೆಯನ್ನು ಹೊರಕ್ಕೆ ಸೂಸುತ್ತಿ-ದ್ದರೆ ಹೇಗೋ ಹಾಗೆ ನಮ್ಮ ಊರು ಸುತ್ತಲೂ ಬೆಳೆದಿರುವ ಸುಮಾರಾಗಿ ಎತ್ತರವಾಗಿರುವ ಮರಗಳ ಮಧ್ಯದಲ್ಲಿ ಹೆಚ್ಚು ಬಾಹ್ಯಾಡಂಬರವಿಲ್ಲದೆ ನಿಂತಿದೆ. ಊರಿನಿಂದ ಅರ್ಧ ಮೈಲು ಹೊರಕ್ಕೆ ಹೋದರೆ ನಮ್ಮೂರು ಎಲ್ಲಿದೆ ಎಂಬುದು ನಮಗೆ ತಿಳಿಯುವುದಿಲ್ಲ. ಆಗ ಅದು ಮರಗಳ ಮಧ್ಯ-ದಲ್ಲಿ ಮುಚ್ಚಿಹೋಗುತ್ತದೆ. ಆದರೆ ಮನೆಗಳಿಂದ ಹೊರಡುವ ಹೊಗೆ ಇದೆಯಲ್ಲ, ಅದೇ ನಮ್ಮೂರಿನ ಕೈಮರ.

ನಮ್ಮ ಊರು ಚಿಕ್ಕದಾದರೂ ಅದರಲ್ಲಿ ಪ್ರಕೃತಿಯ ಬಗೆಬಗೆಯ ಬೆಡಗುಗಳು ಅಡಕವಾಗಿವೆ. ಊರಮುಂದೆ ಹರಿಯುವ ಹೇಮಾವತಿ ನದಿ, ಅದರ ತೀರದಲ್ಲಿ ಉದ್ದಕ್ಕೂ ಬೆಳೆದಿರುವ ಸಣ್ಣ ಸಣ್ಣ ತೋಪುಗಳು, ಬೇರೆ ಬೇರೆ ಕಡೆಗಳಲ್ಲಿ ತೋರುವ ಸೋಪಾನಗಳು, ಸೇತುವೆ, ನದಿಯಿಂದ ಒಂದು ಫರ್ಲಾಂಗ್ ಊರಿನ ಕಡೆಗೆ ಕೋಟೆಯ ಕಾಲಬುಡದಲ್ಲಿ ಹರಿಯುವ ತಿಳಿನೀರಿನ ಕಾಲುವೆ, ಕಾಲುವೆಗೂ ನದಿಗೂ ನಡುವೆ ಹಸಿರು ಬಟ್ಟೆಯನ್ನು ಹಾಸಿದಂತೆ ಪಚ್ಚೆಯಾದ ಪೈರಿನ ಬಯಲು, ಕಾಲುವೆಯ ಒಂದು ಕಡೆ ಪೇಟೆ, ಮತ್ತೊಂದು ಕಡೆ ಕೋಟೆ, ಊರೊಳಗಿನ ದೇವಸ್ಥಾನದ ಮುಂದಲ ತಿಳಿನೀರಿನ ಕೊಳ, ನಾನಾವಿಧವಾದ ಹೂವುಗಳಿಂದ ಕೂಡಿದ ಕೊಳದ ಮುಂದಲ 'ಶೃಂಗಾರ ತೋಟ' ಎಂಬ ಉದ್ಯಾನ, ಊರಿನಿಂದ ಪೂರ್ವಕ್ಕೂ ಪಶ್ಚಿಮಕ್ಕೂ ಎದ್ದು ತೋರುವ ತೋಟಗಳು, ಊರಿನ ಸುತ್ತ ಚಿಕ್ಕ ಚಿಕ್ಕ ಕಾಡುಗಳು, ಬೆಟ್ಟ ಗುಡ್ಡಗಳು ಇವುಗಳನ್ನೆಲ್ಲಾ ನೋಡಿ

ನಾವೂ ನಮ್ಮ ಮಿತ್ರರನೇಕರೂ ನಮ್ಮ ಊರಿಗೆ ಪ್ರಕೃತಿದೇವಿಯು ಹೆಚ್ಚಾದ ದಯವನ್ನು ತೋರಿಸಿದ್ದಾಳೆಂದು ತಿಳಿದುಕೊಂಡಿದ್ದೇವೆ.

ಬೆಳಗಾದ ಕೂಡಲೆ ನಮ್ಮ ಊರಿನಲ್ಲಿ ಎಲ್ಲರಿಗಿಂತ ಮುಂಚೆ ಏಳುವ ನರಸಿಂಹಾಚಾರ್ಯರನ್ನು ಕಾಣಬಹುದು. ಇವರು ಬಾಗಿಲಿನಲ್ಲಿ ಕುಳಿತು ನಶ್ಯವನ್ನು ತೀಡುತ್ತಿರುವಾಗ, ನಶ್ಯವನ್ನು ಮಾಡುವುದಕ್ಕೆ ಬೇಸರಿಕೆ-ಯಾದ ಮೂರು ನಾಲ್ಕು ಜನ ಸೋಮಾರಿಗಳು ತಲೆಗೆ ಮುಸುಕು ಹಾಕಿಕೊಂಡು ಕುಳಿತಿರುತ್ತಾರೆ. ನರಸಿಂಹಾಚಾರ್ರು ನಮ್ಮನ್ನೆಲ್ಲ "ಕುಂಭಕರ್ಣನ ಗೋತ್ರದವರು" ಎಂದು ಕರೆಯುತ್ತಾರೆ. ಹಾಸಿಗೆ-ಯಿಂದ ಎದ್ದು ಕುಳಿತಿರುವ ಅವರನ್ನು, "ಎದ್ದಿರಾ ಸ್ವಾಮಿ?" ಎಂದರೆ, "ದೆವ್ವದ ಹಾಗೆ ಕೂತಿರೋದು ಕಣ್ಣೀ ಕಾಣೋದಿಲ್ವೆ?" ಎಂಬುದಾಗಿ ಅವರು ಹೇಳಿದ ದಿನಗಳು ಎಷ್ಟೋ ಆಗಿವೆ.

ನಮ್ಮ ಊರಿನಲ್ಲಿ ಸಾಮಾನ್ಯವಾಗಿ ಯಾರೂ ಬೆಳಗ್ಗೆ ಬಹಳ ಹೊತ್ತಿನವರೆಗೆ ಮಲಗುವುದಿಲ್ಲ. ಇದು ನಮ್ಮ ಹೆಂಗಸರು ಮಾಡಿರುವ ಉಪಾಯ. ಅವರು ಐದು ಗಂಟೆಗೆ ಎದ್ದು, ಒಲೆ ಹೊತ್ತಿಸಿ, ಬಿಸಿ ನೀರು ಕಾಯಿಸಿ, ಕಾಫಿ ಕಾಯಿಸಿ, ದೋಸೆಯನ್ನು 'ಚೊಯ್' ಎನ್ನಿಸಿದ ಕೂಡಲೆ, ಇನ್ನೂ ಅರ್ಧ ಗಂಟೆ ಮಲಗಬೇಕೆಂದಿರುವ ನಾವೆಲ್ಲಾ ಎದ್ದು ಸ್ನಾನಮಾಡಿ ಕಾಫಿ ಕುಡಿಯುತ್ತೇವೆ. ಅನಂತರ ಹೆಂಗಸರು ಮುಸುರೆ ಪಾತ್ರಗಳನ್ನು ತುಂಬಿಕೊಂಡು ಒಬ್ಬರನ್ನೊಬ್ಬರು ಕರೆದು-ಕೊಂಡು ಹೊಳೆಗೆ ಹೋಗುತ್ತಾರೆ. ಅಲ್ಲಿ ಅವರದೇ ಪ್ರಪಂಚ. ಅಲ್ಲಿ ಅವರು ಎಷ್ಟು ಸ್ವತಂತ್ರರಾಗಿರುತ್ತಾರೆ! ನದಿಯ ಅಲೆಯು ಮತ್ತಷ್ಟು ಎದ್ದು ಕುಣಿಯುವಂತೆ ಹೇಗೆ ಕಿಲಕಿಲ ಧ್ವನಿಯಲ್ಲಿ ನಗುತ್ತಾರೆ! ತಮ್ಮ ದೇಹವನ್ನು ಹೇಮಾವತಿಯ ಶೀತಲವಾದ ಜಲದಲ್ಲಿ ಮುಳುಗಿಸಿ ಹೇಗೆ ಉಲ್ಲಾಸವನ್ನೂ ಆನಂದವನ್ನೂ ತೋರಿಸುತ್ತಾರೆ! ಅವುಗಳನ್ನೆಲ್ಲಾ ವರ್ಣಿಸುವುದಕ್ಕಾಗುವುದಿಲ್ಲ.

ಮಳೆ ಹೆಚ್ಚಾಗಿ 'ಜಡಿಹಿಡಿದ' ದಿವಸ ಕೆಲವರು ಸ್ನಾನಕ್ಕೆ ನದಿಗೆ ಹೋಗುವುದಿಲ್ಲ. ಆದರೆ ಐದು ಆರು ವಿಧವೆಯರು ಮಾತ್ರ ಎಂತಹ

ಮಳೆ ಬಂದರೂ ಹೊಳೆಗೆ ಹೋಗಿಯೇ ತೀರುತ್ತಾರೆ. ನನಗೇನೋ ಅವರು ಹುಟ್ಟಂದಿನಿಂದ ನದಿಯ ಸ್ನಾನವನ್ನು ಬಿಟ್ಟವರಲ್ಲವೆಂಬಂತೆ ತೋರುವುದು.

ನಮ್ಮ ಊರಿನಲ್ಲಿ ಬ್ರಾಹ್ಮಣರು ಶೂದ್ರರು ಸಾಹೇಬರು ಎಲ್ಲರೂ ಆರಂಬಗಾರರೆ. ಎಲ್ಲರೂ ಹೇಗೆ ಹೇಗೋ ಮಾಡಿ ವರುಷಕ್ಕೆ ಸಾಕಾಗುವಷ್ಟು, ನವರಾತ್ರಿ ಉಗಾದಿ ಹಬ್ಬಗಳಲ್ಲಿ ಆನಂದದಿಂದ ಕುಣಿದಾಡಲು ಬೇಕಾಗುವಷ್ಟು ಪೈರನ್ನು ಬೆಳೆಯುತ್ತಾರೆ. ಶಾಲು ಸಾಬಿ ಒಬ್ಬನ ಆರಂಬ ಮಾತ್ರ ದೇವರೇ ಗತಿ.

ಇವನಿಗೆ ಶಾಲು ಸಾಬಿ ಎಂದು ಹೆಸರು ಬರಲು ಒಂದು ಕಾರಣವಿದೆ. ಅವನು ಬೇಸಗೆಯ ಕಾಲದಲ್ಲೂ ಮಳೆಗಾಲದಲ್ಲೂ ಯಾವಾಗಲೂ ಒಂದು ಶಾಲು ಹೊದೆದೇ ಇರುತ್ತಾನೆ. ನಮಾಜು ಮಾಡುವಾಗ ಮತ್ತು ಕೋರ್ಟಿಗೆ ಹೋಗುವಾಗ—ಯಾವಾಗಲೂ ಇವನು ಶಾಲು ಹೊದೆಯುವುದನ್ನು ಮರೆತವನಲ್ಲ. ಆದುದರಿಂದ ಇವನನ್ನು ಹುಡುಗರು "ಶಾಲು ಸಾಬಿ" ಎಂದು ಹಾಸ್ಯಮಾಡುತ್ತಾರೆ. ನದಿಯ ದಾರಿಯಲ್ಲಿ ಪ್ರತಿದಿನವೂ ಶಾಲು ಸಾಬಿಯು ಮನೆಯ ಬಾಗಿಲಿನಲ್ಲಿ ಕುಳಿತು ಮಕ್ಕಳನ್ನೂ ಆಳುಗಳನ್ನೂ ಬಯ್ದುದ್ದೂ ಬಯ್ದದ್ದೆ. ಆದರೆ ಅವನೂ ಹೇಗೂ ವರುಷಕ್ಕಾಗುವಷ್ಟನ್ನು, ಮೊಹರಂ ಹಬ್ಬದಲ್ಲಿ ಜರಿಯ ಬಟ್ಟೆಗಳನ್ನು ಮೆರೆಯಿಸಲು ಒದಗುವಷ್ಟನ್ನು ಬೆಳೆದೇ ಬೆಳೆಯುತ್ತಾನೆ.

ಬೆಳಗಾಗುವ ವೇಳೆಗೆ ತಮ್ಮ ಗುಡಾಣದಂತಹ ಹೊಟ್ಟೆಗೆ ಸಡಿಲವಾಗಿ ಕೆಳಕ್ಕೆ ಜಾರುತ್ತಿರುವಂತೆ ಪಂಜೆಯನ್ನು ಸುತ್ತಿಕೊಂಡು, ಕಿವಿಗೆ ಮಾವಿನ ಎಲೆಯನ್ನೂ ಜನಿವಾರವನ್ನೂ ಸುತ್ತಿಕೊಂಡು, ನದಿಯ ಕಡೆಗೆ ಹೋಗುತ್ತಿರುವ ಶಾಸ್ತ್ರಿಗಳನ್ನು ಕಾಣಬಹುದು. ಊರ ಮುಂದಿನ ಚಾವಡಿಯ ಮೇಲೆ ಬೋರೇಗೌಡನು ಶ್ಯಾನುಭೋಗರೊಂದಿಗೆ ಟಿಪ್ಪುಸುಲ್ತಾನನ ಕಗ್ಗಗಳನ್ನು ಹೇಳುತ್ತಾ, ಮಧ್ಯೆ ಮಧ್ಯೆ ನಗುತ್ತಿರುತ್ತಾನೆ. ರೈತರು ಹೆಗಲಿನ ಮೇಲೆ ನೇಗಿಲನ್ನು ಹಾಕಿಕೊಂಡು, ಎತ್ತುಗಳ ಜತೆಯಲ್ಲಿ ಕಿರುದನಿಯಲ್ಲಿ ಹಾಡುತ್ತಾ ಹೊಲಗದ್ದೆಗಳಿಗೆ ಹೋಗುತ್ತಾರೆ. ನಮ್ಮ ಮನೆಯ ಹಿತ್ತಿಲ ಬಾವಿಯ ಕಟ್ಟೆಯ ಮೇಲೆ

ನಿಂತುಕೊಂಡು ಶೂದ್ರರ ಕೇರಿಯ ಕಡೆಗೆ ನೋಡಿದರೆ, ರಂಗೇಗೌಡನು ಆಗತಾನೆ ಮುಖವನ್ನು ತೊಳೆದು ಸೂರ್ಯನ ಕಡೆಗೆ ಕೈಮುಗಿಯುತ್ತಿರುತ್ತಾನೆ. ಒಳಗೆ ಅವನ ಹೆಂಡತಿಯು ರಾಟೆಯಲ್ಲಿ ಕುರಿಯ ತುಪ್ಪಳವನ್ನು ನೂಲಲು ಪ್ರಾರಂಭಿಸಿರುತ್ತಾಳೆ. ಅರ್ಚಕನು ವಾಸಿದ ಮಗುಟವನ್ನುಟ್ಟುಕೊಂಡು ದೇವಸ್ಥಾನದಲ್ಲಿ ಹೊಡೆಯುತ್ತಿರುವ ಗಂಟೆಯು ನಮಗೆ ಕೇಳಿಸುವುದು. ನಾವು ಎದ್ದು ಬಾಗಿಲಲ್ಲಿ ಕಣ್ಣು ಹೊಸಕುತ್ತಾ ನಿಂತುಕೊಳ್ಳುವ ವೇಳೆಗೆ ನಮ್ಮ ಭಾವನವರು ನದಿಯಲ್ಲಿ ಸ್ನಾನಮಾಡಿ "ಗೋವಿಂದೇತಿ ಸದಾ ಧ್ಯಾನಂ ಗೋವಿಂದೇತಿ ಸದಾ ಜಪಂ" ಹೇಳುತ್ತಾ ದಪ್ಪ ತಾಮ್ರದ ಚೆಂಬಿನಲ್ಲಿ ನೀರನ್ನು ತುಂಬಿಕೊಂಡು ಮನೆಗೆ ಬರುತ್ತಾರೆ. ಗಂಡನು ಆರು ಕಟ್ಟಿಕೊಂಡು ಹೋದ ಮೇಲೆ, ರೈತರ ಹೆಂಗಸರು ಕುಕ್ಕೆಗಳಲ್ಲಿ ಕಸವನ್ನು ಹೊತ್ತುಕೊಂಡು ಹೊಲದ ಗುಂಡಿಗಳಿಗೆ ಹಾಕಿ ಬರುತ್ತಾರೆ. ಉಳಿದವರು ನದಿಗೆ ಹೋಗಿ ಕೈಗಳ ಕಡಗಗಳ ಸದ್ದಿನೊಂದಿಗೆ ಗಡಿಗೆಗಳನ್ನು ತೊಳೆದು ನೀರನ್ನು ತುಂಬಿಕೊಂಡು ಮನೆಗೆ ಬರುತ್ತಾರೆ. ರೈತರ ಹುಡುಗರೂ ಹುಡುಗಿಯರೂ ದನಗಳನ್ನು ಮೇಯಿಸುವುದಕ್ಕೆ ಹೊಡೆದುಕೊಂಡು ಹೋಗುತ್ತಾ, ಅವುಗಳ ಕತ್ತಿನ ಗಂಟೆಯ ಧ್ವನಿಯಲ್ಲಿ ತಮ್ಮ ಧ್ವನಿಗಳನ್ನು ಸೇರಿಸಿ ಹಾಡುತ್ತಾರೆ. ನದಿಯ ಆಚೆ ಗುಡ್ಡದ ತಪ್ಪಲಿನಲ್ಲಿ ದನಗಳು ಮೇಯುತ್ತಾ ಇವೆ.

ತಿರುಮಲಮ್ಮ ಬೆಳಗ್ಗೆ ಆರು ಘಂಟೆ ಆಗುವುದರೊಳಗೆ ಊರು ಒಂದು ಸುತ್ತು ಸುತ್ತುತ್ತಾಳೆ. ಅವಳಿಗೆ ಊರಿನ ವರ್ತಮಾನ ತಿಳಿಯದ್ದೆ ಇಲ್ಲ. ಹುಡುಗರು ಅವಳನ್ನು ನಮ್ಮೂರಿನ "ರೂಟರ್ ಏಜನ್ಸಿ" ಎಂದು ಕರೆಯುತ್ತಾರೆ. ತಿರುಮಲಮ್ಮ ಎಲ್ಲರಿಗೂ ಬೇಕಾದವಳು. ಎಲ್ಲರ ಕಷ್ಟದಲ್ಲಿಯೂ "ಅಯ್ಯೋ ಪಾಪ" ಎನ್ನುವಳು. ತಿರುಮಲಮ್ಮ ರಾತ್ರಿ ಕೂಡ ಊರು ಒಂದು ಸುತ್ತು ಸುತ್ತುತ್ತಾಳೆ. ರಾತ್ರಿ ಬೆಳದಿಂಗಳಿರಲಿ ಕತ್ತಲೆಯಿರಲಿ, ಒಂದು ಸೀಮೆಯೆಣ್ಣೆಯ ಬುಡ್ಡಿಯನ್ನು ಹೊತ್ತಿಸಿಕೊಂಡು ಸೆರಗಿನಿಂದ ಅದನ್ನು ಮುಚ್ಚಿಕೊಂಡು ಊರ ಸುತ್ತ ತಿರುಗಿಬಿಡುತ್ತಾಳೆ. ಅವಳ ಕೈಯಲ್ಲಿ ಬುಡ್ಡಿಯಿದ್ದರೆ ಎಂತಹ ಗಾಳಿ ಬಂದರೂ ಅದು ಆರಿಹೋಗುವುದಿಲ್ಲ.

ಹೊಸಬಿಯ ಮನೆಯ ಬಾಗಿಲಿನಲ್ಲಿ ಸ್ವಲ್ಪ ಬೆಂಕಿಯನ್ನು ತೆಗೆದು-ಕೊಳ್ಳಲು ತಿಮ್ಮಿಯು ಬಂದು ಕುಳಿತಿರುತ್ತಾಳೆ. ತಿಮ್ಮಿಗೆ ಬೆಂಕಿಯ ಸಹಾಯವನ್ನಾದರೂ ಮಾಡುವ ಶಕ್ತಿ ತನಗೆ ಇದೆಯಲ್ಲಾ ಎಂದು ಹೊಸಬಿಗೆ ಸ್ವಲ್ಪ ಹೆಮ್ಮೆ. ಹೊಸಬಿಯ ಹುಡುಗಿ ಚೆನ್ನಿಗೆ ಮದುವೆಯ ವಯಸ್ಸು ಬಂದಿದೆ. ಅವಳು ಗಟ್ಟಿಗಡತವಾಗಿ ಚೆನ್ನಾಗಿದ್ದಾಳೆ. ಒಂದು ದಿವಸ ತಿಮ್ಮಿಯು ಬಂದಾಗ ಅವಳು ನೀರಿನ ಒಲೆಗೆ ಪುರಲೆಯನ್ನು ಹಾಕುತ್ತಿದ್ದಳು. ಚೆನ್ನಿಯನ್ನು ತನ್ನ ಮಗ ನಿಂಗನಿಗೆ ತಂದುಕೊಳ್ಳ-ಬೇಕೆಂದು ತಿಮ್ಮಿಗೆ ಬಹಳ ಆಸೆ. ಆದರೆ ಹೊಸಬಿಯು ಒಪ್ಪುವಳೋ ಇಲ್ಲವೋ ಎಂಬ ಸಂದೇಹ. ತಿಮ್ಮಿಯು ಪ್ರತಿದಿನವೂ ಬೆಂಕಿ ತೆಗೆದು-ಕೊಳ್ಳಲು ಬಂದಾಗ ಆ ಮಾತು ಈ ಮಾತು ಆಡಿ ಕೊನೆಗೆ ಚೆನ್ನಿಯ ಮದುವೆಯ ಮಾತನಾಡುತ್ತಾಳೆ. ಚೆನ್ನಿಯು ಕಸವನ್ನು ಹೊತ್ತು-ಕೊಂಡು ಹೊಲದ ಬಳಿಗೆ ಹೋಗುವಾಗ ಪ್ರತಿದಿನವೂ ನಿಂಗನು ತಾನೂ ಅವಳ ಜತೆಯಲ್ಲಿ ಹೋಗುತ್ತಾನೆ. ಅವಳ ಕೈಯಿಂದ ಎಲೆ ಅಡಕೆ, ಹೊಗೆಸೊಪ್ಪು, ಅವಳು ಇಲ್ಲವೆಂದರೂ ಬಿಡದೆ ಬಂಡಾಟ ಮಾಡಿ ಕಿತ್ತುಕೊಳ್ಳುತ್ತಾನೆ. ಅವಳ ಕಡೆಗೆ ನಾಯಿ ಛೂ ಬಿಡುತ್ತಾನೆ. ಅವಳು ಭಯದಿಂದ "ನಾಯನ್ನು ಹಿಂದಕ್ಕೆ ಕರೆ" ಎಂದು ಕೂಗಿದರೆ, ಆಗ "ನನ್ನ ಮದುವೆ ಆಗ್ತೀಯ ?" ಎಂದು ಕೇಳಿ ಅವಳ ಕೈಯಲ್ಲಿ "ಹೂ" ಅನ್ನಿಸಿ ನಾಯಿಯನ್ನು ಹಿಂದಕ್ಕೆ ಕರೆಯುತ್ತಾನೆ.

**—ಗೊರೂರು ರಾಮಸ್ವಾಮಿ ಅಯ್ಯಂಗಾರ್**

**೧. ಆ ಊರಿಗೆ ಪ್ರಕೃತಿದೇವಿಯು ಹೇಗೆ ಹೆಚ್ಚಿನ ದಯೆ ತೋರಿ-ಸಿದ್ದಳು ? ೨. ಆ ಊರಿನ ಜನರು ಒಟ್ಟಿನಲ್ಲಿ ಎಂತಹ ಸ್ವಭಾವದವರಿದ್ದರು ? ೩. ನರಸಿಂಹಾಚಾರ್ರು, ಶಾಲು ಸಾಬಿ, ತಿರುಮಲಮ್ಮ ಇವರ ಸ್ವಭಾವ-ಗಳನ್ನು ಮೂರು ನಾಲ್ಕು ವಾಕ್ಯಗಳಲ್ಲಿ ಹೇಳಿರಿ. ೪. ತೆರವಿದ್ದ ಸ್ಥಳಗಳನ್ನು ತುಂಬಿರಿ : (ಅ) ಹೂವು ಸುವಾಸನೆಯನ್ನು__________ (ಆ) ನಿಂಗನು ಚೆನ್ನಿಯ ಕೂಡ__________. (ಇ) ನರಸಿಂಹಾಚಾರ್ಯರು ಬೆಳಗ್ಗೆ ನಸ್ಯ-ವನ್ನು __________. (ಈ) ನದೀತೀರದಲ್ಲಿ ಹೆಂಗುಸರು ತಮ್ಮ ವೇಳೆ-**

ಯನ್ನು_________ ಕಳೆಯುತ್ತಾರೆ. (ಉ) ತಿರುಮಲವನ್ನು ಯಾವಾಗಲೂ ಊರು________ . ೫. ನಿಮ್ಮೂರಿನ ಎರಡು ಮೂರು ವ್ಯಕ್ತಿಗಳ ಸ್ವಭಾವಚಿತ್ರಗಳನ್ನು ಸಣ್ಣ ವಾಕ್ಯವೃಂದಗಳಲ್ಲಿ ಬರೆಯಿರಿ.

## ೧೩. ಸ್ವಾಮಿನಿಷ್ಠ ಕರ್ಣ

[ ವೀರಾಗ್ರಣಿಯಾದ ಕರ್ಣನನ್ನು ಪಾಂಡವ ಪಕ್ಷಕ್ಕೆ ಮನವೊಲಿಸಲು ಶ್ರೀಕೃಷ್ಣನು ಭೇದೋಪಾಯದಿಂದ ಪ್ರಯತ್ನಿಸುವನು. ಕರ್ಣನ ಜನ್ಮವೃತ್ತಾಂತವನ್ನು ತಿಳಿಸಿ, ಆತನೇ ಪಾಂಡವರಲ್ಲಿ ಹಿರಿಯನಾದದರಿಂದ ಸಕಲ ಸಂಪದಕ್ಕೂ ಅರಸೊತ್ತಿಗೆಗೂ ಆತನೇ ಒಡೆಯನೆಂದು ಬಣ್ಣಿಸಿ ಹೇಳುವನು. ಕೃಷ್ಣನ ಮೋಹಜಾಲದ ಮಾತುಗಳಿಗೆ ಸಿಲುಕಿದಂತಾದರೂ, ತನ್ನ ಸ್ವಾಮಿಯಾದ ದುರ್ಯೋಧನನಿಗೆ ಸಂಪೂರ್ಣವಾಗಿ ಮನಸೋತ ಕರ್ಣನು ಹೇಳುವ ಉದಾತ್ತ ಭಾವನೆಯ ಉತ್ತರವು ಈ ಪದ್ಯಗಳಲ್ಲಿದೆ. ]

ಕೊರಳ ಸೆರೆ ಹಿಗ್ಗಿದುವು ದೃಗುಜಲ-
ವುರವಣಿಸೆ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ ||
ಹರಿಯ ಹಗೆ ಹೊಗೆದೋರದುರುಹದೆ
ಬರಿದೆ ಹೋಹುದೆ ತನ್ನ ಜನನವ-
ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ || ೧ ||

ಕಾದಿ ಕೊಲುವೊಡೆ ಪಾಂಡುಸುತರು ಸ-
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯೊಳು ಹೊಗಲಿಲ್ಲ ||
ಭೇದದೊಳು ಹೊಕ್ಕಿರಿದನೋ ಮಧು-
ಸೂದನನು ತಾನಕಟೆನುತ ಚಿಂ-
ತೋದಧಿಯೊಳದ್ದಂತೆ ಮೌನದೊಳಿರ್ದನಾ ಕರ್ಣ || ೨ ||

ಏನು ಹೇಳ್ಳೈ ಕರ್ಣ, ಚಿತ್ತ-
ಗ್ಲಾನಿಯಾವುದು ನಿನಗೆ ಕುಂತೀ-
ಸೂನುಗಳ ಬೆಸಗೆಯ್ಸಿಕೊಳ್ಳುದು ಸೇರದೇ ಮನಕೆ ||
ಹಾನಿಯಿಲ್ಲೆನ್ನಾಣೆ ನುಡಿ ದು-
ಮ್ಮಾನವೇತಕೆ ಮರುಳುತನ ಬೇ-
ಡಾನು ನಿನ್ನುಪದೆಸೆಯ ಬಯಸುವನಲ್ಲ ಕೇಳೆಂದ || ೩ ||

ಮರುಳು ಮಾಧವ ಸಕಲ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ-
ಯರು ಸುಯೋಧನರೆನಗೆ ಬೆಸಗೈವಲ್ಲಿ ಮನವಿಲ್ಲ ||
ಹೊರೆದ ದಾತಾರಂಗೆ ರಿಪುಗಳ
ಶಿರವನರಿದೊಪ್ಪಿಸುವೆನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ || ೪ ||

ಒಡನೆ ಹುಟ್ಟಿದರೆಂಬ ಕಥನವ-
ನೆಡೆಗುಡದೆ ಬಣ್ಣಿಸಿದೆ ಪಾಂಡವ-
ರಡಗು ಬಾಣಕೆ ಬಲಿಯೆನಿಪ್ಪೀ ಛಲವ ಮಾಣಿಸಿದೆ ||
ನುಡಿದು ಫಲವೇನಿನ್ನು ಕೌರವ-
ರೊಡೆಯನಾದಂತಹೆನು ಬಾರೆನು
ಪೊಡವಿಯೊಳು ನೀಂ ಹರಹಿಕೊಳು ನಿನ್ನವರ ನಿಲಿಸೆಂದ || ೫ ||

ಹಲವು ಮಾತೇನಖಿಳ ಜನವೆ-
ನ್ನುಳಿವ ಸೊಗಸದು ಕೌರವೇಶ್ವರ-
ನೊಲವು ತಪ್ಪಿದ ಬಳಿಕ ಜಗದೊಳಗಾಪ್ತಜನವಿಲ್ಲ ||
ಸಲಹಿದನು ಮನ್ನಣೆಯೊಳೆನಗ-
ಗ್ಗಳಿಕೆಯಲ್ಲದೆ ಹೀನವೃತ್ತಿಯ
ಬಳಸಿ ನುಡಿಸನು ಕೌರವೇಂದ್ರನನೆಂತು ಮರೆದಿಹೆನು || ೬ ||

ನೋಡಿ ತಣಿಯನು ನಿಚ್ಚವುಚಿತವ
ಮಾಡಿ ತಣಿಯನು ಬಿರುದ ಹೊಗಳಿಸಿ
ಹಾಡಿ ತಣಿಯನು ಮಾನನಿಧಿಯನದೆಂತು ಮರೆದಪೆನು ||
ಕಾಡಲಾಗದು ಕೃಷ್ಣ ಖಾತಿಯ
ಮಾಡಲಾಗದು ಬಂದೆನಾದೊಡೆ
ರೂಢಿ ಮೆಚ್ಚದು ಕೌರವನ ಹಗೆ ಹರಿಬವೆನಗೆಂದ || ೭ ||

ವೀರ ಕೌರವ ರಾಯನೇ ದಾ-
ತಾರನಾತನ ಹಗೆಯೆ ಹಗೆ ಕೈ-
ವಾರವೇ ಕೈವಾರವಾದಂತಹೆನು ಕುರುನೃಪತಿ ||
ಶೌರಿ ಕೇಳ್ನೈ ನಾಳೆ ಸಮರದ
ಭಾರದೊಳು ತೋರುವೆನು ನಿಜಭುಜ
ಶೌರಿಯದ ಸಂಪನ್ನತೆಯನಾ ಪಾಂಡುತನಯರೊಳು || ೮ ||

ಮಾರಿಗೌತಣವಾಯ್ತು ನಾಳಿನ
ಭಾರತವು ಬಹುಜೀವಹರವೀ-
ಕೌರವನ ರುಣ ಹಿಂಗೆ ರಣದೊಳು ಸುಭಟಕೋಟಿಯನು ||
ತೀರಿಸಿಯೆ ಪತಿಯವಸರಕ್ಕೆ ಶ-
ರೀರವನು ನೂಕುವೆನು ನಿನ್ನಯ
ಧೀರರೈವರ ನೋಯಿಸೆನು ರಾಜೀವಸಖನಾಣೆ || ೯ ||

—ಕುಮಾರವ್ಯಾಸ

**೧. ಕೃಷ್ಣನ ಮಾತುಗಳು ಕರ್ಣನಿಗೆ ಚಿತ್ತಗ್ಲಾನಿಯನ್ನುಂಟು-ಮಾಡುವಂಥ ಯಾವ ವಿಚಾರಗಳನ್ನು ಆತನಲ್ಲಿ ಉಂಟುಮಾಡಿದವು? ೨. ಕೌರವ ಪಕ್ಷವನ್ನು ಬಿಡಲು ಶಕ್ಯವಿಲ್ಲೆಂದು ಕರ್ಣನು ಯಾವ ಕಾರಣ-ಗಳನ್ನು ತೋರಿಸುತ್ತಾನೆ? ೩. ಕರ್ಣನಲ್ಲಿದ್ದ ಗಾಢವಾದ ಸ್ವಾಮಿನಿಷ್ಠೆ ಕಾಣಬರುವ ಆತನ ಮಾತುಗಳನ್ನು ಹೇಳಿರಿ. ೪. ಕವಿತೆಯಲ್ಲಿ ಕಾಣಬರುವ ಕರ್ಣನ ಗುಣಸ್ವಭಾವಗಳನ್ನು ಹೇಳಿರಿ. ೫. ಸ್ಪಷ್ಟೀಕರಿಸಿರಿ: (ಅ) ಹರಿಯು ಹಗೆ ಹೊಗೆದೋರದುರುಹದೆ ಬರಿದೆ ಹೋಹುದೆ? ತನ್ನ ಜನನವನರುಹಿ ಕೊಂದನು (ಆ) ಮಾರಿಗೌತಣವಾಯ್ತು ನಾಳಿನ ಭಾರತವು.**

# ೧೪. ಕನ್ನಡ ಕುಲೋದ್ಧಾರಕ ಬಸವಣ್ಣ

[ ಒಳ್ಳೆಯ ಕವಿಗಳೂ ಲೇಖಕರೂ ಆಗಿ ಅನೇಕ ಗ್ರಂಥಗಳನ್ನು ಬರೆದಿರುವ ಸಿಂಪಿ ಲಿಂಗಣ್ಣನವರ 'ಕನ್ನಡ ಕುಲೋದ್ಧಾರಕ ಬಸವಣ್ಣ' ಎಂಬ ಚಿಕ್ಕ ಹೊತ್ತಗೆಯಿಂದ ಈ ಪಾಠವನ್ನು ತಯಾರಿಸಿಕೊಳ್ಳಲಾಗಿದೆ. ಬಸವಣ್ಣನವರ ಜೀವನದ ವಿವರಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಇಲ್ಲಿ ಲೇಖಕರು ಹರಿಹರಕವಿಯ 'ಬಸವರಾಜದೇವರಗಳೆ' ಎಂಬ ಕಾವ್ಯ-ವನ್ನು ಆಧಾರವಾಗಿಟ್ಟುಕೊಂಡು ಬಸವಣ್ಣನವರ ಚರಿತ್ರೆಯ ವಿವರಗಳನ್ನು ಬರೆದಿದ್ದಾರೆ. ಹರಿಹರನ ಕಾವ್ಯದಲ್ಲಿಯ ಕನ್ನಡ ಭಾಷೆಯ ಸೊಗಸನ್ನು ಈ ಲೇಖನದಲ್ಲಿ ಅಳವಡಿಸಲು ಲೇಖಕರು ಯತ್ನಿಸಿದ್ದಾರೆ. ಬಸವಣ್ಣನವರು ಉದಾತ್ತ ಗುಣಗಳಿಂದ ತನ್ನ ಆತ್ಮೋನ್ನತಿಯನ್ನು ಹೇಗೆ ಮಾಡಿಕೊಂಡ-ರೆಂಬ ವಿಷಯವನ್ನು ನಿರೂಪಿಸುವದೇ ಲೇಖಕರ ಗುರಿಯಾಗಿದೆ. ]

ಬಾಗೆವಾಡಿಯೊಂದು ಅಗ್ರಹಾರ; ಮಾದಿರಾಜ-ಮಾದಲಾಂಬಿ-ಕೆಯರು ಅಲ್ಲಿದ್ದ ಶೈವದಂಪತಿಗಳು. ನಾಡಿನ ಪುಣ್ಯವೇ ಗಂಡು-ರೂಪಾದಂತೆ ಅಲ್ಲಿ ಬಸವಣ್ಣನ ಜನ್ಮವಾಯಿತು. ಮುಟ್ಟುವವರ ಮುದ್ದಾಗಿ, ಎತ್ತುವವರ ಅಂಗೈ ಮಾಣಿಕವಾಗಿ, ಅಪ್ಪುವವರ ತೋಳ ತೋಳಬಂದಿಯಾಗಿ ಮೆರೆಯುವ ಈ ಹಸುಳೆ ಹರುಷದ ಕಡಲನ್ನೇ ಹರಿಸಿದುದು. ಪೆರೆನೊಸಲನೆ ನಾಯಕನಾದ ಈ ಶಿಶುವನ್ನು ಶಿವಶಿಶು-ವೆನ್ನಲಾಗದೆ? ಲೋಕನಾಯಕನಾಗುವ ಶಿಶುವಿಗೆ ಇನ್ನು ತಾಯ್ತಂದೆ-ಗಳ ಕಾರಣವಿಲ್ಲವೆನ್ನುವಂತೆ, ಮಾದಿರಾಜ-ಮಾದಲಾಂಬಿಕೆಯರು ಪರಂಧಾಮವನ್ನೈದಿದರು. ಪ್ರಾಣವು ಹೋದರೂ ಸತ್ಯವನ್ನೇ ಆಡು-ತ್ತಿರುವದು ಮಹಾಪುರುಷನಾಗುವ ಲಕ್ಷಣವನ್ನು ತೋರಿಸುವಂತೆ, ಬಾಲ್ಯದಲ್ಲಿ ಅನಾಥನಾಗುವದೂ ಒಮ್ಮೊಮ್ಮೆ ಹಿರಿಯಮನುಷ್ಯನಾಗು-ವದನ್ನು ತೋರಿಸುವದೆಂದು ಹೇಳಬಹುದು. ಬುದ್ಧನು ಬಾಣಂತಿ-ಯಾಗಿರುವ ತಾಯಿಯನ್ನು ಕಳೆದುಕೊಂಡನು; ಚಂದ್ರಹಾಸನು

ಹಸುಳನಾಗಿದ್ದಾಗಲೇ ಹಡೆದವರಿಂದ ಅಗಲಿ ಅನಾಥನಾದನು ; ದೇವ-ದೇವನ ಗುಪ್ತಹಸ್ತದಿಂದ ಪಾಲನಪೋಷಣ ಹೊಂದಿದ ಅನಾಥ-ಬಾಲಕರು ಸಾಮಾನ್ಯರಾಗಬಹುದೇ ? ಚಂದ್ರಹಾಸನು ನಚ್ಚಿದ ಸಾಲಿಗ್ರಾಮದಲ್ಲಿ ಗುಪ್ತನಾಗಿದ್ದ ದೇವರು ಕಾವಲಾಗಿ ಆತನನ್ನು ಬೆಳೆಸಿದಂತೆ ಬಸವಣ್ಣನು ನಚ್ಚಿದ ಶಿವಲಿಂಗದಲ್ಲಿ ಗುಪ್ತನಾದ ದೇವರು ಆತನನ್ನು ಬೆಳೆಸಿದನು. ಬಸವಣ್ಣನು ಹುಟ್ಟ ವೈರಾಗ್ಯಶಾಲಿ. ಅಂತೆಯೇ ಕರ್ಮಮಾರ್ಗಕ್ಕೆ ತೊಡಕಿಸುವದೆಂದು ಭಾವಿಸಿದ ಜನ್ನಿವಾರವೂ ಸಂಸಾರ-ಬಂಧನವನ್ನು ಸೂಚಿಸುವದೆಂದು ತಿಳಿದುಕೊಂಡ ಮೌಂಜಿಯೂ ಆತನಿಗೆ ಬೇಡಾದವು. ಮಹಾವೀರ, ಬುದ್ಧರು ಹರಯಕ್ಕೆ ಬಂದಾಗ ನಿಷ್ಕ್ರಮಣ ಮಾಡಿದರು, ಎಂದರೆ ಮನೆಯನ್ನು ತೊರೆದರು. ಬಸವಣ್ಣನು ಬಾಲ್ಯ-ದಲ್ಲಿಯೇ ಮನೆಯನ್ನು ತೊರೆದನು. ಶಿವಸಂಗಮವೇ ಎಂದರೆ ಶಿವನನ್ನು ಸೇರುವದೇ ಆತನ ಘನವಾದ ಆಸೆ. ಶಿವಸಂಗಮಕ್ಕೆ ಒಯ್ಯುವದು ಹರಭಕ್ತಪ್ರವಾಹವೇ ಸರಿ. ಆದದರಿಂದ ಬಸವಣ್ಣನು ಹರಭಕ್ತ-ಪ್ರವಾಹದೊಡನೆ ಶಿವಸಂಗಮಕ್ಕೆ ಹೊರಟನೋ ಎನ್ನುವಂತೆ ಶಿವನ ಕಪ್ಪಡಿಸಂಗಮಗ್ರಾಮಕ್ಕೆ ಪ್ರಯಾಣಮಾಡಿದನು.

ಬಾಗೇವಾಡಿಯಿಂದ ಹೊರಬಿದ್ದು ಮಲಾಪಹಾರೀ-ಕೃಷ್ಣೆಯರ ಸಂಗದ ಸೊಗಸಿನ ನೆಲೆಯಲ್ಲಿ ನೆಲೆಸಿದ ತನ್ನ ನಚ್ಚಿನ ದೇವನಾದ ಕೂಡಲಸಂಗನ ಕಪ್ಪಡಿಸಂಗಮಕ್ಕೆ ಬಂದನು. ಅಲ್ಲಿ ಕೇರಿಕೇರಿಗಳನ್ನು ಸುತ್ತಿ ನಡೆದಿರಲು ಎರಡನೆಯ ಕೈಲಾಸವೆನಿಸಿದ ಶಿವಾಲಯವು ಫಕ್ಕನೆ ಆತನ ಕಣ್ಣಿಗೆ ಬಿತ್ತು. ಅದೇನು ಮಹಾಗಳಿಗೆಯೋ, ಅದೇನು ಮಂಗಲ ಮುಹೂರ್ತವೋ ? ಬಸವಣ್ಣನಿಗೆ ಅಂತರಂಗದ ಆಕಾಶದಲ್ಲಿ ಪೂರ್ವಸ್ಮರಣೆ ವಿದ್ಯುತ್ತಿನಂತೆ ಥಳಥಳಿಸಿತು. ಆ ಥಳಕಿಗೆ ಆತನ ಅಜ್ಞಾನದ ಕುರುಡು ಅಳಿದು, ಜ್ಞಾನದ ಕಣ್ಣು ತೆರೆದವು. ಆತನ ಮಾನವ ಜೀವಕ್ಕೆ ದಿವ್ಯ ಜೀವಕಳೆ ಬಂದಿತು. ಒಡನೆ ದೇವಮಂದಿರವನ್ನು ಪ್ರವೇಶಿಸಿ, ರಂಗ-ಮಂಟಪದಲ್ಲಿ ಹೊಕ್ಕು, "ದೇವ ದೇವ ! ಅನಾಥನಾಥ ! ತಾಯ್ತಂದೆ ಬಂಧುವೇ ಬಳಗವೇ ! ಕಾವುದು ಕಾವುದು !" ಎಂದು ಮರೆಹೊಕ್ಕನು.

ಭಕ್ತನಿಗೆ ಕೇಡು ಇಲ್ಲ ( ನ ಮೇ ಭಕ್ತಃ ಪ್ರಣಶ್ಯತಿ ) " ಎಂಬ

ದೇವವಾಣಿಯಂತೆ ಆ ಮಹಾಭಕ್ತನ ಚಿತ್ತವನ್ನು ತೊಳೆದು ಬೆಳಗಿ, "ಅಂಜದಿರಂಜದಿರು ಮಗನೆ! ನಿನ್ನನು ಸಲಹುವೆನು," ಎಂಬ ದಿವ್ಯವಾಣಿ ಉಲಿಯಿತು. ಇಂತು ಶಿವನು ತನ್ನ ಈ ಶಿಶುವನ್ನು ಸ್ವೀಕರಿಸಿದನು. ಅವನ ದಯಾವೃಷ್ಟಿಗೆ ಬಸವನಲ್ಲಿ ಜ್ಞಾನಬೀಜವು ಅಂಕುರಿಸಿತು; ಪಲ್ಲವಿಸಿತು; ಫಲಿಸಿತು. ಬಾಲಕ ಬಸವಣ್ಣನು ಈಗ ಮಹಾಜ್ಞಾನಿಯು; ಮಹಾಭಕ್ತನು. ಆತನ ಬಯಕೆ ಈಡೇರಿತು; ಆತನು ಕೃತಕೃತ್ಯನಾದನು; ತನಗೆ ಭಕ್ತಿಜ್ಞಾನಗಳನ್ನು ದಯಪಾಲಿಸಿದ ದೇವದೇವನನ್ನು ಬಾಯ್ತುಂಬ ಹೊಗಳಿದನು: "ನೀನೊಲಿದರೆ ಕೊರಡು ಕೊನರುವದಯ್ಯ, ಬರಡು ಹಯನಾಗುವದಯ್ಯ," ಎಂದು ಹಿರಿಹಿಗ್ಗಿನಲ್ಲಿ ಹಾಡಿದನು. ಭಕ್ತಿಪರವಶನಾಗಿ ಸಂಗಮೇಶನಿದಿರಿಗೆ ಹಾಡಿ ನಲಿದಾಡುತ್ತ ಲೋಕವನ್ನೇ ಮರೆತಂತೆ ತೋರುವ ಬಸವಬಾಲಕನನ್ನು ನೋಡಿದ ದೇವಾಲಯದೊಳಗಿನ ಹಿರಿಯಭಕ್ತರ ಹೃದಯವು, ಈತನು ಮುಂದೆ ಕಾರಣಿಕನಾಗುವಂಥವನೆಂದು ಅವರಿಗೆ ಹೇಳಿತು. ಅವರು ಬಾಲಕ ಬಸವಣ್ಣನ ಬಳಿಗೆ ಹೋಗಿ ಸಂಗಮೇಶ್ವರನನ್ನು ಪೂಜಿಸುವ ವಿಧಾನಗಳನ್ನು ಹೇಳಿ "ಸಂಗನ ಬಸವ"ನಿಗೆ ಭಕ್ತಿಮಾರ್ಗದ ದರ್ಶಕರಾದರು.

ಈಗ ಸಂಗಮನಾಥನ ಪೂಜೆಯೇ ಬಸವಣ್ಣನ ನಿತ್ಯದ ಕೆಲಸ. ಉಷಃಕಾಲದಲ್ಲಿಯೆ ಎದ್ದು ಹಣೆಗೆ ವಿಭೂತಿ, ಹೃದಯಕ್ಕೆ ಭಯಭಕ್ತಿ ಧರಿಸಿ ಸಂಗಮೇಶನಿಗೆ ಅಡ್ಡಬಿದ್ದು, ಕಂಬಿಯನ್ನು ಹೆಗಲಿಗೇರಿಸಿ, ಕರಡಿಗೆಯನ್ನು ಕಂಬಿಗೆ ಸಿಕ್ಕಿಸಿಕೊಂಡು ಹೂದೋಟಕ್ಕೆ ಹೋಗುವನು. ಅಲ್ಲಿ 'ಅಳಿಯೆರಗದ, ಅನಿಲನು ಅಲುಗದ, ರವಿಕರಂ ಪುಗದ' ಹಾಗೂ 'ಸುಳಿಗೊಂಡು ದಳವೇರಿ, ಹಸುರಳಿದು ಬೆಳುಪುಳಿದ' ಇರವಂತಿ, ಸಂಪಿಗೆ, ಮಲ್ಲಿಗೆ, ಸುರಹೊನ್ನೆ, ಮರುಗದೆಲೆ, ಬಿಲ್ವ ಮುಂತಾದ ಪರಿಮಳದ ಹೂವುಪತ್ರಿಗಳನ್ನು ತಿರಿತಂದು, ಕೊಳದಲ್ಲಿ ಮಿಂದು, ತಿಳಿದ ಅಗ್ಗವಣಿಯನ್ನು ಹೊಂಗಳಸದಲ್ಲಿ ತುಂಬಿಕೊಂಡು ದೇವಾಲಯಕ್ಕೆ ಬಂದನೆಂದರೆ ಪೂಜೆಗೆ ಆರಂಭ. ಬಿಲ್ವಪತ್ರ ಪುಷ್ಪಾದಿಗಳಿಂದ ದೇವದೇವನನ್ನು ಅಲಂಕರಿಸಿ ಗುಗ್ಗುಳಧೂಪವನ್ನು ಹಾಕಿ ಕರ್ಪೂರದೀಪವನ್ನು

ಬೆಳಗಿ ರನ್ನದಡ್ಡಣಿಗೆಗಳ ಮೇಲೆ ಹೊನ್ನ ಹರಿವಾಣದಲ್ಲಿ ಬಡಿಸಿದ ಅಮೃತಾನ್ನವನ್ನು ಸಂಗಮನಾಥನ ಇದಿರಿಗಿರಿಸಿ ಮುಂದೆ ಜವನಿಕೆ ಹಿಡಿದು, "ಎನ್ನ ಪ್ರಭುವೆ, ಕೂಡಲಸಂಗ," ಎಂದು ಕೊಂಡಾಡಿ ಆರೋಗಿಸಲು ಬಿನ್ನಯಿಸುವನು. "ಎನ್ನ ಮನದಕ್ಕರೊಳು ಕೂಡು ಕೂಡಲಸಂಗ!" ಎಂದು ಮೈತುಂಬಿದಂತೆ ಹಾಡುವನು, ಕುಣಿಯು-ವನು, ನಲಿಯುವನು, ಶಿವಾನಂದ ರಸದಲ್ಲಿ ಮುಳುಗಾಡುವನು. "ನುಡಿವಲ್ಲಿ ನಡೆವಲ್ಲಿ ಸಂಗ ಶರಣು! ಉಡುವಲ್ಲಿ ಉಂಬಲ್ಲಿ ಸಂಗ ಶರಣು! ಕೊಡುವಲ್ಲಿ ಕೊಂಬಲ್ಲಿ ಸಂಗ ಶರಣು!" ಎಂಬ ಭಾವನೆ ಆತನಲ್ಲಿ ಬಿತ್ತರಿಸಿ ಬೆಳೆಯಿತು.

ಬಸವಣ್ಣನು ಈಗ ಭಕ್ತಿ ಮಾರ್ಗದ ಕೊನೆಯಂಚಿನಲ್ಲಿದ್ದಾನೆ. ಆತನು ಇನ್ನು ಸಾಗಬೇಕಾದ ದಾರಿಯಿಲ್ಲ; ಆತನು ಸಿದ್ಧಪುರುಷ. ಆತನು ಹದಿನಾರಾಣೆಯ ಪರಿಪಕ್ವ ಸ್ಥಿತಿಯಲ್ಲಿದ್ದಾನೆ. ಆತನಿಗೆ ಪರಮಾತ್ಮಜ್ಞಾನವಾಗಿದೆ. ದೇವರನ್ನು ಮೆಚ್ಚಿ ಪೂಜಿಸುವದು ಬಸವಣ್ಣನ ಒಂದು ಲೀಲೆ. ಪರಮೇಶ್ವರನು ಇಂಥ ಭಕ್ತರನ್ನು ಲೋಕಕಲ್ಯಾಣಕ್ಕೆ ಕಳುಹುವನು. ಅವರು ತಮ್ಮಷ್ಟಕ್ಕೆ ಆತ್ಮಾನಂದವನ್ನು ಹೊಂದಿದರೆ ತೀರದು. ದೇವರು ಈಗ ಆತನನ್ನು ಲೋಕೋದ್ಧಾರಕ್ಕೆ ತೊಡ-ಗಿಸುವನು.

## ೧೫. ಕನ್ನಡ ಕುಲೋದ್ಧಾರಕ ಬಸವಣ್ಣ

### ೨

ಮರಕ್ಕೆ ಕಾಯಿ ಭಾರವಲ್ಲವಾದರೂ ಹಣ್ಣಾದ ಮೇಲೆ ಅದರ ಕೆಲಸ ಅಲ್ಲೇನು? ಅದು ಸ್ಥಾನಾಂತರವಾಗಲೇಬೇಕು; ಅಗಲಿ ಭೂಮಿಗಿಳಿಯಲೇಬೇಕು. ಇನ್ನು ಸಂಗಮೇಶನು ಬಸವಣ್ಣನನ್ನು ತನ್ನಿಂದ ಅಗಲಿಸಿ ಕಳುಹುವನು. ಒಮ್ಮೆ ಭಕ್ತಿಸಮಾಧಿಯಲ್ಲಿರುವಾಗ

ಬಸವಣ್ಣನಿಗೆ "ಹೊರಡಿನ್ನು ಮಂಗಳವಾಡಕೆ," ಎಂಬುದಾಗಿ ಕೂಡಲ ಸಂಗನ ಆದೇಶವು ಬಂದಿತು. ಅದನ್ನು ಕೇಳಿ ಬಸವಣ್ಣನು ಅಗಲಿಕೆಯ ದುಃಖವನ್ನು ಮನದಂದು ಕಳವಳಿಸಿ ಬೇಗುದಿಗೊಂಡನು. "ಕರುಣಿ ಕರುಣಿ! ನಿನ್ನ ಕರುಣ ಲೇಸಾಯ್ತು! ನಾ ಮಾಡಿದ ಪೂಜೆಗೆ ತಕ್ಕ ಫಲವಾಯ್ತು!" ಎಂದು ಹಲುಬಿ ಹಂಬಲಿಸಿ ಗೋಳಿಟ್ಟನು; ಮೂರ್ಛೆ ಹೋದನು. ಕಪ್ಪಡಿ ಸಂಗಮ, ಅಲ್ಲಿಯ ಸಂಗಮನಾಥ ಇವರ ಮೇಲಿನ ಅನುರಾಗಾತಿಶಯವು ಆತನನ್ನು ಈ ತರದ ಮೋಹಕ್ಕೆ ಒಯ್ಯುತ್ತಿದೆ.

ಸಲುಗೆಯ ಮುನಿಸು ಮನವನ್ನು ತುಂಬಿಕೊಂಡಿದ್ದರೂ ಬಸವಣ್ಣನು ಎದ್ದು ನಿತ್ಯದ ಕ್ರಮವನ್ನು ತಪ್ಪಿಸದೆ ಹೂಹರಿದು ನೀರು ತಂದು ಪೂಜೆಗೆ ಅನುವಾದನು. ಅಂದಿನ ಇರುಳು ಸಂಗಮನಾಥನು ಬಸವಣ್ಣನ ಭಯುವ ಬಯಲುಗೊಳಿಸಿದನು. ಮುನಿಸನ್ನು ತಿದ್ದಿ ರಮಿಸಿದನು. ನಂಬುಗೆಗೆಡಿಸೆನೆಂದು ವಚನವಿತ್ತನು. ಇನ್ನೇನು? ಹೊರಡಲೇಬೇಕಾಯ್ತು. ಆದರೂ ವಿಯೋಗಚಿಂತೆ ಹಿಮ್ಮೆಟ್ಟಲಿಲ್ಲ; ಕಣ್ಣೀರು ಕಡಿಯಲಿಲ್ಲ; ಕೊರಳು ಬಿಗಿದು ಬಂದಿತು; ಉಸಿರು ಗದಗದಿಸಿತು. "ಸಂಗಾ, ಹೋಗಿಬರುವೆನಯ್ಯಾ; ತಂದೇ, ನಿನ್ನನ್ನು ನಂಬಿ ನಚ್ಚಿ ಹೊರಡುವೆನಯ್ಯ," ಎಂದು ಕಿತ್ತಲಾರದ ಹೆಜ್ಜೆಯ ಕಿತ್ತಿಡುತ್ತ ಮರಳಿ ಮರಳಿ ಹೊರಳಿ ನೋಡುತ್ತ ಮಂಗಳವಾಡದ ದಾರಿಯ ಹಿಡಿದನು. ಆಗ, "ನೆನೆದರೆ ಮುಂದೆ ನಿಲ್ಲುವೆ, ಕರೆದರೆ ಓ ಎನ್ನುವೆ, ನೀನು ನಿಂತಲ್ಲಿ ನಿಲ್ಲುವೆ, ನಡೆದಲ್ಲಿ ನಡೆಯುವೆ, ಬಿಟ್ಟುದನ್ನು ಬಿಡುವೆ, ಹಿಡಿದುದನ್ನು ಹಿಡಿಯುವೆ, ನಿನ್ನ ಕೈಯಲ್ಲಿ ನಾನಿರುವೆ," ಎಂದು ಸಂಗಮೇಶನು ಅಭಯವಿತ್ತಂತಾಯಿತು.

ಬಸವಣ್ಣನು ಮನೆಯಬಿಟ್ಟಾಗ ತನ್ನ ಒಂದು ಜನ್ಮವನ್ನು ನೀಗಿದ್ದನೆಂದು ಹೇಳಬಹುದು. ಇಲ್ಲಿ ಈಗ ಆತನಿಗೆ ಹೊಸ ಜನ್ಮವಾಯಿತು. ಬ್ರಾಹ್ಮಣಶ್ರೇಷ್ಠರ ಉದರದಲ್ಲಿ ಜನಿಸಿ ಬ್ರಾಹ್ಮಣನಾಗಿದ್ದನೆಂದು ಹರಿಹರ ಕವಿ ಹೇಳಿದುದು ನಿಜವಿದ್ದರೆ ಆತನು ಉಪನಯನದಿಂದ ಬ್ರಾಹ್ಮಣನಾಗಿದ್ದ. ಆದರೆ ಬಸವಣ್ಣನು ಬ್ರಾಹ್ಮಣೋತ್ತಮನಾದದ್ದು ಸಂಗಮ-

ನಾಥನ ಸನ್ನಿಧಿಯಲ್ಲಿಯೇ, ಲೋಕೋತ್ತಮನಾದದ್ದೂ ಸಂಗಮೇಶನ ಸನ್ನಿಧಿಯಲ್ಲಿಯೇ. ಕಪ್ಪಡಿಗೆ ಬರುವಾಗ ಸಂಗನು ಬಸವನ ಸಂಗನೆನಿಸಿದ್ದನು; ಅಲ್ಲಿಂದ ಹೊರಡುವಾಗ ಬಸವನು ಸಂಗನಬಸವನಾದನು. ಕೃಷ್ಣಾಮಲಾಪಹಾರಿಗಳ ಸಂಗಮದಂತೆ ಸಂಗನಬಸವಣ್ಣರ ಸಂಗಮವಾಯಿತು. ಈ ನದಿಗಳ ಸಂಗಮವು ಕನ್ನಡಿಗರ ಸ್ಥೂಲಶರೀರಗಳನ್ನು ಪಾವನಗೊಳಿಸಿದರೆ ಸಂಗನಬಸವಣ್ಣರ ಸಂಗಮವು ಕನ್ನಡಿಗರ ಅಂತ-



ರಂಗವನ್ನು ಪಾವನಗೊಳಿಸುವದು. ಅಂತಹ ಸಂಗಮವನ್ನು ಗಳಿಸಿದ ಬಸವಣ್ಣನು ಕನ್ನಡಿಗರ ಸೊತ್ತಾದರೂ ಸಂಗಮೇಶನ ತೊತ್ತು. ಹೀಗೆ ಬಸವಣ್ಣನು ಸಂಗನಬಸವನಾದನು.

ಬಸವಣ್ಣನು ಮಂಗಳವಾಡದಿಂದ ಕಲ್ಯಾಣ ಪಟ್ಟಣಕ್ಕೆ ಬಂದನು. ಆತನು ತನ್ನ ಅವತಾರಕಾರ್ಯವನ್ನು ಮುಖ್ಯವಾಗಿ ಮಾಡಿದುದು ಕಲ್ಯಾಣ ಪಟ್ಟಣದಲ್ಲಿ. ಬಸವಣ್ಣನ ಜೀವನಗ್ರಂಥದಲ್ಲಿ ಸಂಗಮಜೀವನದಂತೆ ಕಲ್ಯಾಣಜೀವನವೂ ಅತಿಮಹತ್ವದ ಪ್ರಕರಣವಾಗಿದೆ. ಸಂಗಮ-

ಜೀವನದಲ್ಲಿ ಗಳಿಕೆ, ಕಲ್ಯಾಣ ಜೀವನದಲ್ಲಿ ಬಳಕೆ. ಸಂಗಮದಲ್ಲಿ ಸಂಜೀವನವನ್ನು ಗಳಿಸಿದ ಬಸವಣ್ಣನು ಕಲ್ಯಾಣದಲ್ಲಿ ಮಹಾಜೀವನ-ವನ್ನು ಬಳಸಿದನು. ಅಂತರ್ಯಾಣಿಯ ಪ್ರೇರಣೆಯಿಂದ ಕಲ್ಯಾಣಕ್ಕೆ ಬಂದ ಬಸವಣ್ಣನನ್ನು ಬಿಜ್ಜಳ ಭೂಪಾಲನೊಡನೆ ಬೆಸಗೆಗೊಳಿಸಿದ್ದು ಆತನ ಲೆಕ್ಕಿಗತನ. ಬಿಜ್ಜಳನ ಓಲಗದಲ್ಲಿ ಲೆಕ್ಕ ಕೂಡಿಸಿಕೊಟ್ಟು ಓಲಗ-ದವರ ಚಿತ್ತವನ್ನು ಸೆಳೆದುಕೊಂಡನೆಂದೂ ಯಾರಿಗೂ ಓದಲಿಕ್ಕಾಗದ ಲಿಪಿಯೊಂದನ್ನು ಓದಲು ರಾಯನಿಗೆ ಅತುಲ ನಿಕ್ಷೇಪವು ಸಿಕ್ಕಿದ್ದರಿಂದ ಆತನು ಬಸವಣ್ಣನನ್ನು ಓಲಗದ ಮಹಾಕರಣಿಕನನ್ನಾಗಿ ಮಾಡಿ-ಕೊಂಡನೆಂದೂ ಹೇಳುತ್ತಾರೆ. ಬಸವಣ್ಣನು ಅಂಥ ದುರ್ವಾಚ್ಯ ಲಿಪಿಯನ್ನು ಓದಿದುದಾಗಲಿ, ಹೊಂದಿಕೆಯಿಲ್ಲದ ಲೆಕ್ಕವನ್ನು ಹೊಂದಿಸಿಕೊಟ್ಟುದಾಗಲಿ ಅಸಾಮಾನ್ಯ ಘಟನೆಯೇ ಸರಿ. ಅದು ಆತನ ಆತ್ಮಿಕ ದೃಷ್ಟಿಯಿಂದ ಸಾಧ್ಯವಾಯಿತೆನ್ನಬೇಕು. ಪ್ರಗಾಢವಾದ ಏಕಾಗ್ರತೆಯೇ ಆತ್ಮದೃಷ್ಟಿ-ಯೆಂದು ಹೇಳುತ್ತಾರೆ. ಆ ಪ್ರಗಾಢ ಏಕಾಗ್ರತೆಗೂ ಲೆಕ್ಕಿಗತನಕ್ಕೂ ಬಹಳ ಸಂಬಂಧವಿದ್ದ ನಿದರ್ಶನಗಳು ಚರಿತ್ರೆಯಲ್ಲಿ ಸಿಕ್ಕುತ್ತವೆ. ಆತ್ಮಿಕ-ದೃಷ್ಟಿಯ ರಾಮತೀರ್ಥಸ್ವಾಮಿಗಳು ಗಣಿತವಿಶಾರದರಾಗಿದ್ದರು. ಇಡೀ ಹಗಲು ಯುದ್ಧದಲ್ಲಿ ತೊಡಗಿ ಬಳಲಿಕೆ ಪಡೆದ ನೆಪೋಲಿಯನ್ನನು ವಿಶ್ರಾಂತಿಗಾಗಿ ಗಣಿತಗಳನ್ನು ಬಿಡಿಸುತ್ತಿದ್ದನಂತೆ. ಇಹಪರಗಳ ಲೆಕ್ಕಿಗನಾದ ಬಸವದೇವನಿಗೂ ಅದೇ ಮಾತು ಅನ್ವಯಿಸುತ್ತದೆ. ಓಲಗ-ದವರು ಹರಯದ, ಜ್ಞಾನದ ಕಳೆಯ ಬಸವಣ್ಣನನ್ನು ನೋಡಿ ಕೌತುಕ-ಬಟ್ಟು, "ಎಂತಹ ಹರಯವಿದು! ಇದೇನು ಲೆಕ್ಕಿಗತನ! ಇದೆಂತಹ ಹರನ ಕಾರುಣ್ಯ!" ಎಂದು ಸೈವಟ್ಟರು. ಪ್ರಾಯದ ಕಳೆ, ಲೆಕ್ಕಿಗತನದ ತೇಜಸ್ಸು, ಹರನ ಕಾರುಣ್ಯದ ಓಜಸ್ಸು ಇವುಗಳಿಂದ ಹೊಳೆಹೊಳೆಯುವ ಬಸವಣ್ಣನನ್ನು ಭೂಪತಿಯ ಕಾಣಿಸಿ ನೂರೊಂದು ಹೊನ್ನು ಸಂಬಳ ಗೊತ್ತುಪಡಿಸಿ ಬಿಜ್ಜಳನ ಓಲಗದವರೊಳಗೆ ಸೇರಿಸಿದರು. ಮಾನವ ಲೀಲೆಯ ಬಸವಣ್ಣನು ಮನುಜಸೇವೆಯೆಂದು ಮನದಲ್ಲಿ ನೋಯಲಿಲ್ಲ. ಒದಗಿದುದೇ ಸಂಗನ ಆದೇಶವೆಂದು ಆನಂದದಲ್ಲಿದ್ದನು. ಬಿಜ್ಜಳ-ಭೂಪನ ದಂಡನಾಯಕನಾದ ಸಿದ್ದಣ್ಣನ ಮಗಳು ಮದುವೆಗಾಗಿದ್ದಳು.

ಬಸವಣ್ಣನಿಗೂ ತನಗೂ ಕುಲಗೋತ್ರಗಳು ಕೂಡಿಬರಲು ಆತನು ಹೊರೆಯೇರಿ ಕುಣಿದಾಡಿದನು ; ತನ್ನ ಮನೆಗೆ ಕರೆದೊಯ್ದನು ; ಮಗಳನ್ನಿತ್ತನು ; ತನ್ನದನ್ನೆಲ್ಲ ಆತನಿಗಿತ್ತನು.

ದಂಡಾಧಿಪತಿ ಸಿದ್ದಣ್ಣನು ಪರಂಧಾಮವನ್ನೈದಲು ಆತನ ತರುವಾಯ ಬಸವಣ್ಣನೇ ಮಂತ್ರಿಪದಕ್ಕೆ ಅರ್ಹನೆಂದು ಬಿಜ್ಜಳರಾಯನು ಆತನಿಗೆ ಆ ಅಧಿಕಾರವನ್ನು ಕೊಟ್ಟು ತಾನು ಧನ್ಯನೆಂದು ಬಗೆದನು. ಬಸವಣ್ಣ ದಂಡಾಧಿಪನು ಓಲಗಕ್ಕೆ ಬರಲು ಆತನ ತೇಜಸ್ಸು ರೂಪಗಳನ್ನು ನೋಡಿ ಬಿಜ್ಜಳನು ' ಮನದೊಳೆರಗುತ್ತ ' ಸಮುಗದ್ದುಗೆಯನ್ನು ಕೊಡುವನು.

" ಭೃತ್ಯಂ ತನ್ನನದೆಂತು ಕಾಣ್ಬನೋ ಅವನಂತೆ........ ನಿಮ್ಮ ನಂಬಿರ್ದೊಡಾತಂಗೆ ತತ್ ಪ್ರತ್ಯರ್ಥಿಕ್ಷಿತಿಪಾಲರೇನೆರಗರೇ ? " ಎಂದು ರತ್ನಾಕರನು ಹೇಳಿದುದೂ " ನಿಮ್ಮಡಿಗರ ಕೆರ್ಪಂ ಪಿಡಿದವನ ಚರಣವಾರ ಮುಕುಟದೊಳು ಬೀಳದು ? ದೇವ ! ನಿಮಗೆ ತೊತ್ತಾದಂಗೆ ತೊತ್ತಾಗದ ಲಕ್ಷ್ಮಿಯಾವಳು ? " ಎಂದು ಬಸವಣ್ಣನ ಬಾಯಲ್ಲಿ ಹರಿಹರಕವಿ ನುಡಿಸಿದುದೂ ಯಥಾರ್ಥವೇ ಆಗಿದೆ.

ಹೀಗೆ ಬಸವಣ್ಣನ ಬಾಹ್ಯ ಜೀವನವು ಮಂತ್ರಿಪದಕ್ಕೇರಿಯೂ ಆಂತರಿಕ ಜೀವನವು ಸಂಗನಪದಕ್ಕೇರಿಯೂ ಮಹಾಜೀವನವಾಯ್ತು.

—ಸಿಂಪಿ ಲಿಂಗಣ್ಣ.

**೧. ಕಪ್ಪಡಿ ಸಂಗಮವಾಸಿಯಾದ ಬಾಲಕ ಬಸವಣ್ಣನ ದಿನಚರ್ಯೆಯನ್ನು ಬಣ್ಣಿಸಿರಿ. ೨. ಬಸವಣ್ಣನವರ ಜೀವನದ ಅಲೌಕಿಕತೆಯ ಗುಟ್ಟು ಏತರಲ್ಲಿದೆ ? ೩. ಬಸವಣ್ಣನವರಿಗೆ ' ಭಕ್ತಿಭಾಂಡಾರಿ ' ಎಂಬ ಬಿರುದು ಸಾರ್ಥವಾಗಿ ಹೇಗೆ ಒಪ್ಪುವದೆಂಬದನ್ನು ಪಾಠದಲ್ಲಿ ಬಣ್ಣಿಸಿದ ಅಂಶಗಳಿಂದ ತಿಳಿಸಿ ಹೇಳಿರಿ. ೪. ಬಸವಣ್ಣನವರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಸ್ವಂತ ಭಾಷೆಯಲ್ಲಿ ಬರೆಯಿರಿ.**

# ೧೬. ಜನಿಪುದನೆ ಸಾಕುಮಾಡಭವ

[ 'ಸಪ್ಪಣ್ಣ ಕವಿ' ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಸರ್ಪ-ಭೂಷಣ ಶಿವಯೋಗಿಯ 'ಕೈವಲ್ಯಕಲ್ಪವಲ್ಲರಿ' ಎಂಬ ಗ್ರಂಥದೊಳಗಿನ ಅಧ್ಯಾತ್ಮದ ಹಾಡುಗಳಲ್ಲಿ ಒಂದನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಈ ಕವಿ ಸುಮಾರು ೧೭೦೦ರಲ್ಲಿ ಇದ್ದಂತೆ ತಿಳಿಯುತ್ತದೆ. ಸಪ್ಪಣ್ಣ ಕವಿಯು ಹಾಡುಗಳಲ್ಲಿ ಅಧ್ಯಾತ್ಮಿಕ ಜ್ಞಾನ, ಕವಿತೆಯ ಮನೋಹರತೆ, ಹಾಡಿನ ಸೊಗಸು ಇವೆಲ್ಲ ಬೆರೆತುಕೊಂಡಿರುವದರಿಂದ ಈತನು ಒಳ್ಳೆಯ ಜನಪ್ರಿಯ-ನಾಗಿದ್ದಾನೆ. ]

ರಾಗ: ಮುಖಾರಿ; ಝಂಪೆತಾಳ

ಎಂತು ಸೈರಿಸಲಹುದು ಈ ಭವದ ಬಾಧೆಯನು।
ಕಂತುಹರ! ಜನಿಪುದನೆ ಸಾಕುಮಾಡಭವ ॥ ಪಲ್ಲ ॥

ವಾಯು ಕರಣೇಂದ್ರಿಯಂಗಳು ವಿಷಯದಾಶೆಗಳು।
ದಾಯಾದರಂತೆನ್ನ ತಿಕ್ಕಿ ಮುಕ್ಕುವುವು ॥
ಕಾಯಗುಣವೆನಿಪ ಹಸು-ತೃಷೆ-ನೋವು-ನಿದ್ರೆಗಳು।
ನಾಯಿಯಂತಡಿಗಡಿಗೆ ಮುತ್ತಿ ಮುಸುಕುವುವು ॥ ೧ ॥

ಒಡಲ ಬಿಡದಾಪತ್ತು ಕೆಡಹಿ ಧರೆಯೊಳು ಕಾಡ।
ಹೊಡೆಗಿಚ್ಚಿನಂತೆನ್ನ ಸುಟ್ಟು ಸುರುಳಿಪುದು ॥
ಮಡದಿಮಕ್ಕಳ ಮೇಗಣತಿ ಮಮತೆಯದು ಕಾಲ್ಗೆ।
ತೊಡರ್ದ ಬಳ್ಳಿಯ ತೆರದಿ ಕಟ್ಟಿ ಕೆಡಹುವುದು ॥ ೨ ॥

ಜನರು ಕಪಿಯನು ಕುಣಿಪುದದು ಸಹಜ ಧರೆಯೊಳಗೆ।
ಮನವೆಂಬ ಕಪಿಯೆನ್ನ ಕುಣಿಸಿ ಕೊನರುವುದು ॥
ತನುವಿದುಳಿದಳಿದುದಿಸಿ ರಾಜಾಜ್ಞೆಯಂತೆನ್ನ-।
ನನುದಿನದೊಳಿಹಪರಕೆ ಸುತ್ತಿ ಸುಳಿಸುವುದು ॥ ೩ ॥

ಅರಿವರ್ಗವೆಂಬುದೆಡೆಬಿಡದೆನ್ನ ಮುರಿದೊತ್ತಿ
ಹರವರಿಸಿ ಹಗೆಯಂತೆ ಕೊಂದು ಕೂಗುವುದು ||
ಮೆರೆವ ತಾಪತ್ರಯವದವಗಡಿಸಿ ಬೇಸಗೆಯೊ-
ಳುರಿವ ಬಿಸಿಲಂತೆನ್ನ ಕರಗಿ ಕೊರಗಿಪುದು || ೪ ||

ಏಳು ವ್ಯಸನಂಗಳೆನ್ನನು ಕೋಳುವಿಡಿದೊಡನೆ |
ಕಾಳಸರ್ಪಗಳಂತೆ ಕಚ್ಚಿ ಕೀಳುವುವು ||
ಹೇಳಲೇನಕಟ ಶಿವ ಭೋ! ಕಾಮಯಮರೆನ್ನ |
ಆಲಿಯಾ ಕಣಿಯಂತೆ ಹಿಂಡಿ ಹಿಸುಕುವರು || ೫ ||

ಜರೆಮರಣವೆರಡೆನ್ನನೊಡನೊಡನೆ ಮೇಲ್ವಾಯ್ದು |
ಹಿರಿಯ ಹುಲಿಯಂತಡರಿ ತಿಂದು ತೇಗುವುವು ||
ಮರೆವೆಂಬುದೆನ್ನ ಸುಜ್ಞಾನ-ದೃಷ್ಟಿಯ ಮುಗಿಸಿ |
ಪರಿದು ಗಾಢಾಂಧದೊಳು ಮುಚ್ಚಿ ಮುಸುಗುವುದು || ೬ ||

ಉಳಿದ ಬಾಧೆಗಳನಂತಂಗಳುಂಟವನೆಲ್ಲ |
ಅಳಿದು ಗುರುಸಿದ್ಧನೊಡನೈಕ್ಯ ಪದವಿತ್ತು ||
"ಅಳಬೇಡ ಮಗನೆ ನಾನಿಹೆನು ನಿನ್ನೀ ಭವವ |
ಕಳೆವೆ" ನೆಂದಭಯವನು ಕೊಡು ಮಹಾದೇವ || ೭ ||

**—ಸರ್ಪಭೂಷಣ ಶಿವಯೋಗಿ.**

**೧. ಕವಿ ತನಗೆ ಈ ಜನ್ಮದಲ್ಲಿ ಯಾವ ಯಾವ ಎಡರುಗಳಿವೆಯೆಂದು ಹೇಳುತ್ತಾನೆ? ಅವು ಅವನನ್ನು ಹೇಗೆ ಕಾಡುತ್ತವೆ? ೨. ಸ್ಪಷ್ಟೀಕರಿಸಿರಿ: (ಅ) ಮನವೆಂಬ ಕಪಿಯೆನ್ನ ಕುಣಿಸಿ ಕೊನರುವದು. (ಆ) ಏಳು ವ್ಯಸನಂಗಳೆನ್ನನು ಕೋಳುವಿಡಿದೊಡನೆ ಕಾಳಸರ್ಪಗಳಂತೆ ಕಚ್ಚಿ ಕೀಳುವುವು. . ಭಕ್ತನಿಗೆ ಈ ಜಗತ್ತಿನಲ್ಲಿ ಯಾವ ಯಾವ ಸಂಕಟಗಳಿಂದ ಪಾರಾಗ-ಬೇಕಾಗುತ್ತದೆಂಬದನ್ನು ಒಂದು ವಾಕ್ಯವೃಂದದಲ್ಲಿ ಹೇಳಿರಿ.**

# ೧೭. ಎಚ್ಚಮನಾಯಕ

[ ಕೈ. ಗಳಗನಾಥರವರ 'ಕುಮುದಿನಿ' ಎಂಬ ಕಾದಂಬರಿಯಿಂದ ಈ ಭಾಗವನ್ನು ಆರಿಸಲಾಗಿದೆ. ಲೇಖಕರ ಪರಿಚಯವು ೬ ನೆಯ ಪುಸ್ತಕದ ೧೨ ನೆಯ ಪಾಠದಲ್ಲಿ ಬಂದಿದೆ. ವಿಜಯನಗರ ರಾಜ್ಯವು ರಕ್ಕಸತಂಗಡಿ (ತಾಳಿಕೋಟೆ)ಯ ಯುದ್ಧದ ಮೂಲಕ ಹಾಳಾದ ಬಳಿಕ ಆ ರಾಜ್ಯದ ಒಂದು ಚಿಕ್ಕ ಅರಸುಮನೆತನವು ಉಳಿದಿತ್ತು. ಆ ಅರಸು ಮನೆತನದ ಗಾದಿಯ ಬಾಧ್ಯತೆಗಾಗಿ ಒಳಜಗಳ ನಡೆದಿರುವಾಗ ಎಚ್ಚಮನಾಯಕನೆಂಬ ಏಕನಿಷ್ಠ ಸ್ವಾಮಿಸೇವಕನು ನಿಜವಾದ ಅರಸುಮಗನ ಪಕ್ಷವನ್ನು ಕಟ್ಟಿ, ಸ್ವಾರ್ಥತ್ಯಾಗವನ್ನೂ ಸಾಹಸವನ್ನೂ ತೋರಿಸಿದನು. ಆ ಎಚ್ಚಮನಾಯಕನ ಪರಿಚಯವನ್ನೂ ಆತನ ದೃಢನಿಶ್ಚಯವನ್ನೂ ಈ ಭಾಗದಲ್ಲಿ ಕಾಣಬಹುದು.]

ಶ್ರೀ ಪಂಪಾಕ್ಷೇತ್ರವು. ಅಮೃತಪ್ರವಾಹದಂತೆ ಮಂದಗಮನ-ದಿಂದ ಸಾಗಿರುವ ತುಂಗಭದ್ರೆಯ ನಿರ್ಮಲೋದಕದ ಕಾಲುವೆಗಳು ಅಲ್ಲಲ್ಲಿ ಸಳಸಳ ಹರಿಯುತ್ತಲಿವೆ. ನೋಡಿದತ್ತೆಲ್ಲ ಶಿಲಾಮಂಟಪಗಳು ಕರಿಯ ಬಂಡೆಗಳೊಡನೆ ಒಪ್ಪುತ್ತಲಿವೆ. ಮತಂಗ ಋಷ್ಯಮೂಕ ಮೊದಲಾದ ಪರ್ವತಗಳ ಶ್ರೇಣಿಗಳು ತಮ್ಮೊಳಗಿನ ದೊಡ್ಡ ದೊಡ್ಡ ಬಂಡೆಗಳ ರಾಶಿಗಳಿಂದ ರುಕ್ಷತೆಯನ್ನು ಪ್ರಕಟಿಸುತ್ತಲಿವೆ. ಜನರ ಸುಳಿದಾಟ-ವಿಲ್ಲದ್ದರಿಂದ ಭಣಗುಟ್ಟುವ ಭವ್ಯವಾದ ಹಾಳು ದೇಗುಲಗಳು ಮಾರ್ಗದ ಎಡಬಲಗಳಲ್ಲಿ ನಿಂತು ವೇದಧರ್ಮಿಗಳ ಹೃದಯಕ್ಕೆ ಬರೆ ಕೊಡುತ್ತಲಿವೆ. ವಿಜಯನಗರದ ಸಾರ್ವಭೌಮರಾಜರಿಂದ ಸ್ಥಾಪಿಸಲ್ಪಟ್ಟ ಉಗ್ರನರಸಿಂಹ, ಸಾಸುವೆಯ ಗಣಪತಿ, ಕಡಲೆಯ ಗಣಪತಿ ಮೊದಲಾದ ದೇವರ ಪ್ರಚಂಡ ಮೂರ್ತಿಗಳು ತಮ್ಮ ವೈಭವಗಳನ್ನು ಅದೇ ಕಳಕೊಂಡು ಅನಾಥ-ವಾದ್ದರಿಂದ ಶೋಕಗ್ರಸ್ತವಾಗಿರುವಂತೆ ತೋರುತ್ತಲಿವೆ. "ಇಷ್ಟಾರ್ಥಪ್ರದನಾದ ಶ್ರೀ ವಿರೂಪಾಕ್ಷನು ಇಲ್ಲಿ ಇದ್ದಾನೆ" ಎಂದು ತಲೆಯೆತ್ತಿ ಭಾವುಕರನ್ನು ಕರೆಯುವದೋ ಅನ್ನುವಂತೆ ದೇವಾಲಯದ ಮುಂದಿನ ಉನ್ನತವಾದ ಗೋಪುರವು ಮುಗಿಲಿಗೆ ಮುಟ್ಟುತ್ತಲಿದೆ. ತಮ್ಮ ತಪಃ-

ಸಾಮರ್ಥ್ಯ-ಬುದ್ಧಿವೈಭವ-ಅದ್ವಿತೀಯಪಾಂಡಿತ್ಯಗಳ ಯೋಗದಿಂದ ವಿಜಯನಗರ ಸಾಮ್ರಾಜ್ಯದ ಪ್ರಾಣಪ್ರತಿಷ್ಠಾಪನೆಯ ಆಚಾರ್ಯತ್ವವನ್ನು ಪಡೆದು, ಶೃಂಗೇರಿಯ ಜಗದ್ಗುರು ಪೀಠಕ್ಕೆ "ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ" ಎಂಬ ಬಿರುದನ್ನು ಜೋಡಿಸಿ, ವಿಚಿತ್ರಗೌರವ-ವನ್ನುಂಟುಮಾಡಿದ ಜಗದ್ವಿಖ್ಯಾತರಾದ ಶ್ರೀವಿದ್ಯಾರಣ್ಯರ ಅದೃಶ್ಯವಾದ ಕೀರ್ತಿಧ್ವಜವು ಆಕಾಶಮಂಡಲದಲ್ಲಿ ಸದ್ಯಕ್ಕೆ ನರ್ತಿಸುತ್ತಿರುವಂತೆ ಭಾಸವಾಗುತ್ತಲಿದೆ. ತನ್ನ ಚಂಡಕಿರಣಗಳಿಂದಲೂ ಪ್ರಕಾಶಿತವಾಗದೆ ಅನಾಥತ್ವದಿಂದ ಕಾಂತಿಹೀನವಾಗಿಯೇ ತೋರುವ ಪಂಪಾಕ್ಷೇತ್ರವನ್ನು ನೋಡಲಾರದೆ ಖಿನ್ನನಾದಂತೆ ಸೂರ್ಯನು ಅಸ್ತಾಚಲಕ್ಕೆ ಇಳಿಯತೊಡ-ಗಿದ್ದರಿಂದ ಬಿಸಿಲ ತಾಪವು ಕಡಿಮೆಯಾಗಹತ್ತಿದೆ. ವಿಜಯನಗರದ ವೈಭವಶಾಲಿನಿಯರಾದ ಸುಂದರಿಯರ ಮೈಗಂಧವನ್ನು ಸೆಳೆಯುವ ತನ್ನ ಅಧಿಕಾರವು ಹೋದದ್ದರಿಂದ ದುಃಖಪಟ್ಟು ಕರಿಯ ಬಂಡೆಬಂಡೆಗಳನ್ನು ಹಾಯ್ದು ಕಸುವುಗೆಟ್ಟಿರುವದೋ ಅನ್ನುವಂತೆ ಗಾಳಿಯು ಮೆಲ್ಲಮೆಲ್ಲನೆ ಸುಳಿಯಹತ್ತಿದೆ. ಬರಬರುತ್ತ ಹೊಬಿಸಿಲು ಅಳಿಯುತ್ತಹೋಗಿ ಪ್ರದೋಷಕಾಲವು ಪ್ರಾಪ್ತವಾಗಲು, ಶ್ರೀ ವಿರೂಪಾಕ್ಷನ ದೇವಾಲಯ-ದಲ್ಲಿ ಪ್ರದೋಷಪೂಜೆಯ ವಾದ್ಯಗಳು ಗಂಭೀರವಾಗಿ ಮೊಳಗತೊಡಗಿವೆ. ಇಂಥ ಮುಚ್ಚಂಜೆಯ ಹೊತ್ತಿನಲ್ಲಿ ಅಶ್ವಾರೂಢನಾದ ನಮ್ಮ ಎಚ್ಚಮ-ನಾಯಕನು ತನ್ನ ಟೊಂಕದಲ್ಲಿ ಅಲೆದಾಡುತ್ತಿರುವ ಖಡ್ಗವನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಂಡು ಉಸುರ್ಗರೆಯುತ್ತಿರುವಾಗ, ಆತನ ಬೆಟ್ಟದಂಥ ಕುದುರೆಯು ಖುರಪುಟಧ್ವನಿಯಿಂದ ಜನರ ದೃಷ್ಟಿಗಳನ್ನು ತನ್ನತ್ತ ಎಳೆದುಕೊಳ್ಳುತ್ತ, ಶ್ರೀ ವಿರೂಪಾಕ್ಷನ ಗೋಪುರದ ಬಾಗಿಲಿಗೆ ಬಂದು ನಿಂತಿತು.

ಎಚ್ಚಮನಾಯಕನು ವಿಜಯನಗರದ ಅರಸುಮನೆತನದ ಏಕನಿಷ್ಠಭಕ್ತನು. ಆತನು ಇಪ್ಪತ್ತೈದು ವರ್ಷದ ಪ್ರಾಯಸ್ಥನಾಗಿದ್ದನು. ಆತನ ನಿಲುವಿಕೆ ಎತ್ತರ, ಮೈಕಟ್ಟು ತೆಳುವಾದದ್ದು, ನೇತ್ರಗಳು ತೇಜಃಪುಂಜ, ಮುಖಮುದ್ರೆ ಪ್ರತಾಪಯುಕ್ತವಾದದ್ದು. ತಿದ್ದಿಮಾಡಿ-ದಂತೆ ಇದ್ದ ಆತನು ಸೌಂದರ್ಯಶಾಲಿಯಾಗಿ ಮನುಷ್ಯಾಕಾರವನ್ನು ಧರಿಸಿದ

ಮನ್ಮಥನಂತೆ ಒಪ್ಪುತ್ತಿದ್ದನು. ಉದಾತ್ತಭಾವದ ಆ ಪ್ರತಾಪಿಗೆ ಭಯಶೋಕಗಳ ಗುರುತು ಎಳ್ಳಷ್ಟೂ ಇಲ್ಲದ್ದರಿಂದ ಅವನು ಯಾವಾಗಲೂ ನಗೆಮೊಗದಿಂದ ಒಪ್ಪುತ್ತಿದ್ದನು. ಆದರೆ ಇಂಥ ಉಲ್ಲಾಸವೃತ್ತಿಯ ಆ ವೀರನ ಮುಖವೂ ಈದಿನ ಕಳೆಗುಂದಿ-ರುವದನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗಬಹುದು. ಆತನ ಕಳೆಗುಂದಿದ ಮುಖದಲ್ಲಿಯ ಕಳೆಗಳನ್ನು ಹೆಚ್ಚಿಸಲಿಕ್ಕೆ ಆತನ ಕಿರಮಂಜಿಯ ಬಣ್ಣದ ಶಿರೋಭೂಷಣದಲ್ಲಿ ಲಕಲಕನೆ ಹೊಳೆ-ಯುತ್ತಿದ್ದ ನವರತ್ನಗಳ ವಿಚಿತ್ರಕಾಂತಿಗಳು ಸಮರ್ಥವಾಗಲಿಲ್ಲ. ಜರದ ಸುಂದರ ನಿಲುವಂಗಿಯು ಆತನ ಸೌಂದರ್ಯವನ್ನು ಮಾತ್ರ ಹೆಚ್ಚಿಸುತ್ತಿ-ತ್ತಲ್ಲದೆ ಆತನ ಮುಖದಲ್ಲಿಯ ಔದಾಸೀನ್ಯದ ಕಳೆಯನ್ನು ದೂರಮಾಡು-ತ್ತಿದ್ದಿಲ್ಲ. ಆತನು ಬಹು ಬೆಲೆಯುಳ್ಳ ಕೆಂಪುಮಖಮಲಿನ ಜರದ ಚಣ್ಣ-ವನ್ನು ತೊಟ್ಟಿದ್ದನು. ಕಾಲಲ್ಲಿ ಸುಂದರವಾದ ಮುಚ್ಚಿಗಳನ್ನು ಮೆಟ್ಟಿದ್ದನು. ಸೊಂಟಕ್ಕೆ ಸುತ್ತಿದ ಹಳದಿಯ ಬಣ್ಣದ ಬೆಲೆಯುಳ್ಳ ಜರದ ಶಾಲಿನ ಕೆಳಗಡೆಯಲ್ಲಿ ಆತನ ವಜ್ರದ ಹಿಡಿಕೆಯ ಖಡ್ಗವು ಸುಂದರವಾದ ಒರೆಯಲ್ಲಿ ಅಡಗಿಕೊಂಡು ಒಪ್ಪುತ್ತಿತ್ತು. ಆತನ ಕೊರಳೊಳಗಿನ ಮುತ್ತಿನ ಕಂಠಿಯೂ ಖಡ್ಗದ ಹಿಡಿಕೆಯ ಕಾಂತಿಯೊಡನೆ ಮತ್ಸರಿಸುವ ತೇಜಃಪುಂಜ ರತ್ನಗಳಿಂದ ಅಲಂಕೃತವಾದ ಬಲಗೈಯೊಳಗಿನ ಮುಂಗೈ-ಸರವೂ ಬೆರಳುಗಳಲ್ಲಿ ಒಪ್ಪುವ ದುರ್ಮಿಲಗಳಾದ ರತ್ನಗಳ ಉಂಗುರಗಳೂ ಆ ವೀರಾಗ್ರೇಸರನ ಐಶ್ವರ್ಯವನ್ನು ವ್ಯಕ್ತಗೊಳಿಸುತ್ತಿದ್ದವು. ಆದರೆ ಏನಿದು? ಏನು ಮಾಡಬೇಕು? ಮನಸ್ಸೊಂದು ಸ್ವಸ್ಥವಿಲ್ಲದ್ದರಿಂದ ಖಿನ್ನವದನನಾಗಿದ್ದ ಆ ತರುಣನಾಯಕನು ಎಡಬಲಗಳನ್ನು ನೋಡದೆ, ಜನರ ಮುಜರೆಗಳನ್ನು ಕೂಡ ಸರಿಯಾಗಿ ತಕ್ಕೊಳ್ಳದೆ, ಉಸುರ್ಗರೆಯುತ್ತ ಕುದುರೆಯನ್ನು ಇಳಿದು, ಕಡಿವಾಣವನ್ನು ಸೇವಕನ ಕೈಯಲ್ಲಿ ಕೊಟ್ಟು, ಮುಚ್ಚೆಗಳನ್ನು ಅಲ್ಲಿಯೇ ಬಿಟ್ಟು ಸುಮ್ಮನೆ ವಿರೂಪಾಕ್ಷನ ಮಂದಿರದ ಕಡೆಗೆ ಸಾಗಿದನು.

ಪ್ರಿಯವಾಚಕರೇ, ನಮ್ಮ ಈ ಏರಿಕೆಯ ರಕ್ತದ ಕನ್ನಡವೀರನ ಪರಿಚಯವನ್ನು ಇನ್ನಿಷ್ಟು ಮಾಡಿಕೊಳ್ಳುವದು ನೆಟ್ಟಗೆ. ಈಗ

ಸುಮಾರು ಮುನ್ನೂರಾ ಐವತ್ತು ವರ್ಷಗಳ ಹಿಂದೆ ನಾಲ್ಕು ಜನ ಮುಸಲ್ಮಾನ ಬಾದಶಹರು ಹೊಟ್ಟೆಯ ಕಿಚ್ಚಿನಿಂದ ಒಟ್ಟುಗೂಡಿ ವಿಜಯನಗರದ ರಾಯರ ರಾಜ್ಯವನ್ನು ಮಣ್ಣುಗೂಡಿಸಿದ್ದನ್ನು ನೀವು ಬಲ್ಲಿರಷ್ಟೆ ? ಆ ಮುರಿದುಹೋದ ರಾಜ್ಯವನ್ನು ತಿರುಗಿ ಸ್ಥಾಪಿಸುವ-ದಕ್ಕಾಗಿ ರಾಯರ ಅಭಿಮಾನಿಗಳಾದ ಎಷ್ಟೋ ಜನ ಸರದಾರರು ವಂಶ-ಪರಂಪರೆಯಾಗಿ ಮನಮುಟ್ಟಿ ಯತ್ನಿಸುತ್ತ ಬಂದರು. ಅವರ ಯತ್ನವು ತತ್ಕಾಲಕ್ಕೆ ಫಲದ್ರೂಪವಾಗದಿದ್ದರೂ ಅದು ಕ್ರಮವಾಗಿ ಮುಸಲ್ಮಾನರ ರಾಜ್ಯದಾಡಳಿತದ ಕೀಲಗಳನ್ನು ಸಡಿಲಿಸುತ್ತ ದೊಡ್ಡ ದೊಡ್ಡ ಹಿಂದು ಸರದಾರರನ್ನು ಬೆಳಕಿಗೆ ತರುತ್ತ ಹೋಯಿತು. ಮುಂದೆ ನೂರು ವರ್ಷಗಳ ಮೇಲೆ ಈ ದೀರ್ಘಪ್ರಯತ್ನವೇ ಶಿವಾಜಿಯಿಂದ ಮಹಾರಾಷ್ಟ್ರ-ರಾಜ್ಯದ ಸಸಿಯನ್ನು ಊರಿಸಿ ಕಸುವಿನಿಂದ ಬೆಳಿಸಲಿಕ್ಕೆ ಬಹ್ವಂಶದಿಂದ ಕಾರಣವಾಯಿತೆಂದು ಕೆಲವರು ಹೇಳುವರು. ಇಂಥ ದೀರ್ಘಪ್ರಯತ್ನದ ಸರದಾರರ ಮಾಲಿಕೆಯಲ್ಲಿ ನಮ್ಮ ಎಚ್ಚಮನಾಯಕನ ತಂದೆಯು ಅಗ್ರೇಸರನಾಗಿದ್ದನು. ಆತನು ಸಾಯುವಾಗ ತನ್ನ ವ್ರತವನ್ನು ಮುಂದಕ್ಕೆ ಸಾಗಿಸುವಂತೆ ತನ್ನ ಮಗನಿಂದ ವಚನವನ್ನು ತಕ್ಕೊಂಡಿದ್ದನು. ಎಚ್ಚಮನಾಯಕನು ತಂದೆಯ ವಚನವನ್ನು ಪಾಲಿಸಲಿಕ್ಕೆ ತಕ್ಕವ-ನಾಗಿದ್ದನಲ್ಲದೆ, ಆತನು ಕೇವಲ ಪಿತೃಭಕ್ತನಾದದ್ದರಿಂದ ತಂದೆಯ ವಿಯೋಗದುಃಖವನ್ನು ದೂರಮಾಡಿಕೊಳ್ಳಲಿಕ್ಕೆ ಆತನ ವ್ರತವನ್ನು ತಡಮಾಡದೆ ಪಾಲಿಸುವದೇ ತಕ್ಕ ಉಪಾಯವೆಂದು ತಿಳಿದಿದ್ದನು. ಇದಕ್ಕಾಗಿಯೇ ಆತನು ವಿಜಯನಗರವನ್ನು ಕಣ್ಣುಮುಟ್ಟ ನೋಡಿ ವಿರೂಪಾಕ್ಷನ ದರ್ಶನವನ್ನು ತಕ್ಕೊಂಡು ತನ್ನ ಆ ವ್ರತವನ್ನು ಕೈಕೊಳ್ಳ-ಬೇಕೆಂದು ನಿಯಮಿತ ಪರಿವಾರದೊಡನೆ ತನ್ನ ಪ್ರತಾಪದುರ್ಗ ರಾಜ-ಧಾನಿಯಿಂದ ಹೊರಟು ಪಂಪಾಕ್ಷೇತ್ರಕ್ಕೆ ಬಂದಿದ್ದನು.

—ಗಳಗನಾಥ.

**೧. ಎಚ್ಚಮನಾಯಕನು ಯಾರು ? ಅವನು ಹಂಪೆಗೇಕೆ ಬಂದಿದ್ದನು ? ೨. ಅವನು ಶೂರನೂ ವೈಭವಶಾಲಿಯೂ ಎಂದು ಯಾವ**

**ಲಕ್ಷಣಗಳಿಂದ ಕಂಡುಹಿಡಿಯುಬಹುದಾಗಿತ್ತು ? ೩. ಎಚ್ಚಮನಾಯಕನು ಹೋದಾಗ ಹಂಪೆಯಲ್ಲಿ ವೈಭವವಿದ್ದಿಲ್ಲವೆಂದು ಯಾವ ಮಾತುಗಳಿಂದ ಸೂಚಿಸಲಾಗಿದೆ ? ೪. ಭಣಗುಟ್ಟು, ಇಷ್ಟಾರ್ಥಪ್ರದ, ಅಗ್ರೇಸರ, ಚಂಡಕಿರಣ, ಮುಚ್ಚಂಜೆ ಈ ಶಬ್ದಗಳ ಅರ್ಥವನ್ನೂ ಕೊನೆಯ ಎರಡು ಶಬ್ದಗಳ ಸಮಾಸಗಳನ್ನೂ ವಿಗ್ರಹವನ್ನೂ ಹೇಳಿರಿ.**

## ೧೮. ವಿಮಾನ

ಹಕ್ಕಿಗಳು ಆಕಾಶದಲ್ಲಿ ರೆಕ್ಕೆಬಡಿಯುತ್ತ ಉಲ್ಲಾಸದಿಂದ ಹಾರಾಡುವದನ್ನು ನೋಡಿದಂದಿನಿಂದಲೇ ಮನುಷ್ಯನ ಮನಸ್ಸಿನಲ್ಲಿ 'ನನಗೂ ರೆಕ್ಕೆಗಳಿದ್ದರೆ' ಎಂಬ ಕುತೂಹಲವು ಉಂಟಾಗಿರಬೇಕು. ಆದರೆ ವಿಜ್ಞಾನಶಾಸ್ತ್ರಗಳಲ್ಲಿ ಪ್ರಗತಿ ಉಂಟಾಗುವ ವರೆಗೆ ಆ ಕುತೂಹಲವು ಬರಿಯ ಕನಸಿನಂತೆ ಮಾತ್ರ ಆಗಿತ್ತು. ಈ ಇಪ್ಪತ್ತನೆಯ ಶತಮಾನದಲ್ಲಿ ಮನುಷ್ಯನು ವಿಮಾನಗಳನ್ನು ರಚಿಸಿ ಹಕ್ಕಿಯು ಕೂಡ ಬೆರಗುಬಡುವಂತೆ ಆಕಾಶದಲ್ಲಿ ಹಾರಾಡತೊಡಗಿದನು.

ಮನುಷ್ಯನು ತನ್ನ ಕುತೂಹಲವನ್ನು ಪೂರ್ಣಮಾಡಿಕೊಳ್ಳುವಲ್ಲಿ ಶ್ರಮ ಹಣ ಬುದ್ಧಿಗಳು ಎಷ್ಟೇ ವೆಚ್ಚವಾಗಲಿ, ಎಷ್ಟೇ ಪ್ರಾಣಹಾನಿಯಾಗಲಿ ಅದನ್ನು ಲೆಕ್ಕಿಸನು. ಪಟ್ಟಣಗಳಲ್ಲಿ ಸಾಯ್ಕಲ್ಲುಗಳು, ಮೋಟರ್ ಸಾಯ್ಕಲುಗಳು, ಕಾರುಗಳು, ಬಸ್ಸುಗಳು, ಲಾರಿಗಳು ಇವುಗಳಿಂದ ಕ್ಷಣಕ್ಷಣಕ್ಕೆ ಎಷ್ಟು ಅಪಘಾತಗಳಾಗುವವೆಂಬದನ್ನು ಮನುಷ್ಯನು ಬಲ್ಲನು. ಆದರೂ ಈ ಶೀಘ್ರಗಾಮಿ ವಾಹನಗಳ ಮೇಲಿನ ಆತನ ಮೋಹವು ಎಳ್ಳಷ್ಟೂ ಕಡಿಮೆಯಾಗಿಲ್ಲ. ವಿಮಾನಗಳನ್ನು ಪೂರ್ಣಾವಸ್ಥೆಗೆ ಮುಟ್ಟಿಸುವಲ್ಲಿ ಮನುಷ್ಯನು ತನ್ನ ಧನ ಶ್ರಮ ಬುದ್ಧಿ ಪ್ರಾಣಗಳನ್ನು ಕವಡೆಗಿಂತ ಕೀಳಾಗಿ ಬಗೆಯುತ್ತ ಬಂದಿರುವನು.

ಅಂತೆಯೇ ನಾವು ಬೇಕಾದಷ್ಟು ವೇಗಶಾಲಿ ಉಗಿಹಡಗಗಳಿಗೆ ಹಿಡಿಯುವ ವೇಳೆಗಿಂತ ತೀರ ಸ್ವಲ್ಪ ವೇಳೆಯಲ್ಲಿ ವಿಮಾನವನ್ನೇರಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಲು ಸಮರ್ಥರಾದೆವು.

ವಿಮಾನಗಳ ಪ್ರಗತಿಯ ಇತಿಹಾಸವನ್ನು ನೋಡಿದರೆ ಮನುಷ್ಯನಲ್ಲಿ ಎಷ್ಟೊಂದು ಅದ್ಭುತ ಶಕ್ತಿ ಗೂಢವಾಗಿ ಇರುವದೆಂಬದನ್ನು ನಾವು ಮನಗಾಣಬಹುದು. ಎಲ್ಲಕ್ಕೂ ಮೊದಲು ಜರ್ಮನಿಯ ಅಟೋ ಲಿಲಿಯೆಂಥಲ್ ಎಂಬ ಶಾಸ್ತ್ರಜ್ಞನು ಪಕ್ಷಿಗಳ ರೆಕ್ಕೆಗಳಂಥ ಎರಡು ರೆಕ್ಕೆಗಳನ್ನು ರಚಿಸಿ ಅವುಗಳನ್ನು ತೋಳುಗಳಿಗೆ ಕಟ್ಟಿಕೊಂಡು ಗುಡ್ಡದ ತುದಿಯಿಂದ ಆಕಾಶವಲ್ಲಿ ಹಾರುವ ಪ್ರಯತ್ನವನ್ನು ಮಾಡಿದನು. ಆತನು ರೆಕ್ಕೆಗಳನ್ನು ರಚಿಸುವಲ್ಲಿ ಹಲವು ಪ್ರಯೋಗಗಳನ್ನು ಮಾಡಿದನು. ಆಕಾಶದಲ್ಲಿ ಮೇಲಕ್ಕೆ ಹಾರುವಂತೆ ಮೆಲ್ಲನೆ ಕೆಳಗಿಳಿಯುವದೂ ಸಾಧಿಸಬೇಕು, ಇಲ್ಲವಾದರೆ ಸಾವು ನಿಶ್ಚಿತವೆಂಬದನ್ನು ಆತನು ಗಮನಿಸಿದನು. ತನ್ನ ಪ್ರಯೋಗಗಳನ್ನು ಎಡೆಬಿಡದೆ ನಡೆಸಿ ಕೊನೆಗೆ ಸಫಲತೆಯನ್ನು ಪಡೆದನು. ಆತನು ತನ್ನ ರೆಕ್ಕೆಗಳ ಸಹಾಯದಿಂದ ಆಕಾಶದಲ್ಲಿ ಎಷ್ಟೋ ದೂರ ಹಾರಿದನು, ಮತ್ತು ಕೆಳಕ್ಕೆ ಇಳಿದನು. ಬಳಿಕ ಆತನು ಎರಡಕ್ಕಿಂತ ಹೆಚ್ಚಿಗೆ ರೆಕ್ಕೆಗಳಿದ್ದರೆ ಹೆಚ್ಚಿಗೆ ಅನುಕೂಲವಾಗುವದೆಂದು ಪ್ರಯೋಗಗಳಿಂದ ಮನಗಂಡನು. ಈ ಶಾಸ್ತ್ರಜ್ಞನು ಮೂವತ್ತು ವರ್ಷ ಸತತವಾಗಿ ಪ್ರಯೋಗಗಳನ್ನು ನಡೆಸಿದ ಬಳಿಕ ಹಲವು ರೆಕ್ಕೆಗಳ ಒಂದು ಯಂತ್ರವನ್ನು ರಚಿಸಿದನು. ಆಗ ಆತನಿಗೆ ಇಳಿತರ ವಯಸ್ಸು. ಆದರೂ ತನ್ನ ಯಂತ್ರವನ್ನು ಕಟ್ಟಿಕೊಂಡು ಹಾರಬೇಕೆಂಬ ಲವಲವಿಕೆ ಆತನಿಗೆ ಹೆಚ್ಚಾಯಿತು. ಯಂತ್ರವು ಇನ್ನೂ ಅಷ್ಟೊಂದು ಪೂರ್ಣವಾಗಿರಲಿಲ್ಲ. ಆತನು ಆ ಯಂತ್ರದ ಸಹಾಯದಿಂದ ಹಾರಿದನು ; ಆದರೆ ದುರ್ದೈವದಿಂದ ಬಿರುಗಾಳಿಯ ಹೊಡೆತಕ್ಕೆ ಸಿಲುಕಿದನು. ಒಂದು ರೆಕ್ಕೆ ಮುರಿಯಿತು. ಈ ಅಪಘಾತದಲ್ಲಿ ಆತನು ಪ್ರಾಣಕ್ಕೆ ಎರವಾದನು. ಆದರೆ ಆತನು ಪ್ರಯೋಗಗಳಿಂದ ಕಂಡುಹಿಡಿದ ಹೊಸ ಶೋಧಗಳು ಜಗತ್ತಿನ ಸಂಪತ್ತಿಯಾಗಿ ಉಳಿದವು. ಆ ಶೋಧಗಳು ವಾತನಾವೆ ( ಏರೋಪ್ಲೇನ್ ) ಗಳು ಉಂಟಾಗುವದಕ್ಕೆ ಸಹಾಯವಾದವು.

ಸುಮಾರು ನೂರೈವತ್ತು ವರ್ಷಗಳ ಹಿಂದೆ ಫ್ರಾನ್ಸ್ ದೇಶದ ಮಂಗಲ್ ಫಿಯೆ ಎಂಬ ಇಬ್ಬರು ಕಾಗದ ವ್ಯಾಪಾರಿಗಳು ಇನ್ನೊಂದು ರೀತಿಯಿಂದ ಪ್ರಯೋಗಗಳನ್ನು ಮಾಡಿದರು. ಹೊಗೆ ಆಕಾಶದಲ್ಲಿ ಮೇಲಕ್ಕೆ ಹೋಗುವದು ; ಪಾತ್ರೆಯಲ್ಲಿ ನೀರನ್ನು ಕಾಯಿಸುವಾಗ ಉಗಿಯಿಂದ ಆ ಪಾತ್ರೆಯ ಮುಚ್ಚಳವು ಮೇಲಕ್ಕೇಳಲು ಪ್ರಯತ್ನಿ-ಸುವದು ; ಇವುಗಳನ್ನು ನೋಡಿ ಹಗುರಾದ ಕಾಗದದ ಚೀಲವನ್ನು ಮಾಡಿ ಅದರಲ್ಲಿ ಹೊಗೆಯನ್ನು ತುಂಬಿ ಅದನ್ನು ಬಿಟ್ಟರೆ ಅದು ಮೇಲಕ್ಕೆ ಹಾರಲೇಬೇಕೆಂದು ಅವರು ನಿಶ್ಚಯಿಸಿದರು. ಆ ಮೇರೆಗೆ ಅವರು ಕಾಗದದ ದೊಡ್ಡ ಚೀಲಗಳನ್ನು ಮಾಡಿ ಅವುಗಳಲ್ಲಿ ಹೊಗೆಯನ್ನು ತುಂಬಿ ಅವನ್ನು ಹಾರಿಸುತ್ತಿದ್ದರು. ಇದನ್ನು ನೋಡಿ ಬಹುಜನ ಫ್ರೆಂಚ್ ಶಾಸ್ತ್ರಜ್ಞರು ಈ ಆಕಾಶಬುಟ್ಟಿಗಳ ಸಂಗಡ ಮನುಷ್ಯನೂ ಹೋಗಬಲ್ಲನೇ ಎಂಬದನ್ನು ನೋಡುವ ಶೋಧದಲ್ಲಿ ತೊಡಗಿದರು ; ಅವರು ಹೊಗೆ ತುಂಬುವದನ್ನು ಬಿಟ್ಟು ಹವೆಗಿಂತ ಹಗುರಾದ ಯಾವದೊಂದು ವಾಯುವನ್ನು ತುಂಬಿದರೆ ಆಕಾಶಬುಟ್ಟಿ ಆಕಾಶದಲ್ಲಿ ಬಹಳ ಹೊತ್ತು ತೇಲಬಹುದೆಂದು ಊಹಿಸಿದರು ; ಮತ್ತು ಆ ಮೇರೆಗೆ ಪ್ರಯೋಗ-ಗಳನ್ನು ಮಾಡಿ ಸಿದ್ಧಿಯನ್ನು ಪಡೆದರು. ಕೆಲಕಾಲದ ತರುವಾಯ ವಾಯುಗಳಲ್ಲಿ ಹೆಚ್ಚಿಗೆ ಹಗುರಾದ ಹೈಡ್ರೋಜನ್ ಎಂಬ ವಾಯು-ವನ್ನು ಆಕಾಶಬುಟ್ಟಿಗಳಲ್ಲಿ ತುಂಬಿದರೆ ಬಹಳ ಅನುಕೂಲತೆಯಾಗುವ-ದೆಂದು ಕಂಡುಬಂದಿತು. ಆದರೆ ಈ ಆಕಾಶಬುಟ್ಟಿಗಳಲ್ಲಿ ಅವುಗಳ ಗತಿಯ ನಿಯಂತ್ರಣ ಮಾಡುವ ವ್ಯವಸ್ಥೆಯಿರಲಿಲ್ಲ. ಗಾಳಿಬಿಟ್ಟ ಕಡೆಗೆ ಅವು ಹೋಗುತ್ತಿದ್ದವು. ಈ ತೊಂದರೆಯಿದ್ದರೂ ಪ್ರಯೋಗಗಳಲ್ಲಿ ತೊಡಗಿದವರು ಅವುಗಳಲ್ಲಿ ಕುಳಿತು ಹೋಗತೊಡಗಿದರು. ಸುಮಾರು ಅರುವತ್ತು ವರ್ಷಗಳ ಹಿಂದೆ ಒಬ್ಬ ಫ್ರೆಂಚ್ ಗೃಹಸ್ಥನು ವಾತನಾವೆ-ಯಲ್ಲಿ ಕುಳಿತು ಫ್ರಾನ್ಸಿನಿಂದ ರಶಿಯಕ್ಕೆ ಹೋದನು.

ಕೆಲವು ಕಾಲದ ತರುವಾಯ ಜರ್ಮನಿಯ ಕೌಂಟ್ ಜಪೆಲಿನ್ ಎಂಬವನು ಎಷ್ಟೋ ಸುಧಾರಣೆಗಳನ್ನು ಮಾಡಿ ದೊಡ್ಡ ವಾತನಾವೆ-ಗಳನ್ನು ನಿರ್ಮಿಸಿದನು. ಗಾಳಿಯಿಲ್ಲದಾಗ ಈ ವಾತನಾವೆಗಳನ್ನು

ಬೇಕಾದ ದಿಕ್ಕಿಗೆ ತಿರುಗಿಸಲು ಇವುಗಳಲ್ಲಿ ಯಂತ್ರಗಳಿದ್ದವು. ಹಿಂದಿನ ಮಹಾಯುದ್ಧದಲ್ಲಿ ಜರ್ಮನರು ತಮ್ಮ ಶತ್ರುಗಳ ಮೇಲೆ ಈ ಜಪೆಲಿನು-ಗಳಿಂದ ಬಾಂಬುಗಳನ್ನು ಒಗೆಯುವದು ಮೊದಲಾದ ಉಪದ್ರವಗಳನು ಮಾಡಿದರು.



ಜಪೆಲಿನುಗಳಲ್ಲಿ ಇನ್ನೂ ಅಡಚಣಿಗಳು ಇದ್ದೇ ಇದ್ದವು. ಬಿರುಗಾಳಿ ಬಿಟ್ಟಾಗ ಇವುಗಳ ಆಟವು ನಿಂತುಬಿಡುತ್ತಿತ್ತು. ಆದದರಿಂದ ಇವು ಮನುಷ್ಯನ ಇಚ್ಛೆಯಂತೆ ನಡೆಸಬಹುದಾದ ವಿಮಾನಗಳೆಂದು ಹೇಳುವಂತಿರಲಿಲ್ಲ. ಆದರೂ ಇವುಗಳ ರಚನೆಯ ತತ್ವಗಳಿಂದ ಬೇರೆ ಬೇರೆ ದೇಶಗಳ ಶಾಸ್ತ್ರಜ್ಞರು ಸರ್ವಾಂಗಸುಂದರವಾದ ವಿಮಾನಗಳನ್ನು ರಚಿಸುವದಕ್ಕೆ ಉತ್ಸಾಹಗೊಂಡರು.

ಅಮೇರಿಕದ ಸಂಯುಕ್ತರಾಜ್ಯದ ಓಹಾಇಓ ಸಂಸ್ಥಾನದಲ್ಲಿ ಕಾಲಗಾಡಿಗಳ ರಿಪೇರಿ ಮಾಡುವ ಇಬ್ಬರು ಅಣ್ಣತಮ್ಮಂದಿರು ಇದ್ದರು. ಅವರು ಮೋಟರ ಕಾಲಗಾಡಿಗಳ ಯಂತ್ರಗಳ ಕೆಲಸವನ್ನೂ ಬಲ್ಲವ-ರಾಗಿದ್ದರು. ಅವರು ವಿಮಾನಗಳ ರೆಕ್ಕೆಗಳು ಎಂಥವಿದ್ದರೆ ಒಳ್ಳೆಯ-ದೆಂಬ ವಿಷಯದಲ್ಲಿ ಹಲವು ಪ್ರಯೋಗಗಳನ್ನು ಮಾಡಿ ಕೊನೆಗೆ ಒಂದು ಒಳ್ಳೆಯ ವಿಮಾನವನ್ನು ರಚಿಸಿದರು. ಇದೇ ಮನುಷ್ಯನ ಇಚ್ಛೆಯಂತೆ ನಡೆಸಲನುಕೂಲವಾದ ಮೊದಲನೆಯ ವಿಮಾನವು.

ಈಚೆಗೆ ವಿಮಾನಗಳಲ್ಲಿ ಬಹಳ ಸುಧಾರಣೆಗಳಾಗಿವೆ. ಇಳಿಯು-ವಾಗ ಕೆಳಗೆ ಸಮುದ್ರವು ಬಂದರೆ, ಇಲ್ಲವೆ ಸಮುದ್ರದ ಮೇಲಿಂದ ಮೇಲಕ್ಕೆ ಹಾರಿಸುವದಾದರೆ ಈಗಿನ ವಿಮಾನಗಳಲ್ಲಿ ಅನುಕೂಲತೆ-ಯುಂಟು. ಈಗಿನ ವಿಮಾನಗಳು ಬೇಕಾದಂಥ ಮಳೆಗಾಳಿ ಬೀಸುತ್ತಿ-ದ್ದರೂ ಇಚ್ಛಿತ ಸ್ಥಳಕ್ಕೆ ಇಳಿಯಬಲ್ಲವು.

ವಿಮಾನಗಳಲ್ಲಿ ಮೇಲೆ ಹೇಳಿದ ಎಲ್ಲ ಅನುಕೂಲತೆಗಳಿಗಾಗಿ ಹಲವು ಯಂತ್ರಗಳು ಇರುವವು. ಅವು ಕೆಟ್ಟರೆ ಅಪಘಾತವಾಗುವ-ದುಂಟು. ಅಂಥ ಪ್ರಸಂಗದಲ್ಲಿ ಒಳಗಿನವರು ಸುರಕ್ಷಿತವಾಗಿ ಇಳಿಯು-ವದಕ್ಕೂ ಅನುಕೂಲ ಸಾಧನಗಳನ್ನು ಮಾಡಿರುವರು. ಪೆರಚೂಟ್ ಎಂಬ ಕೊಡೆಗಳ ಸಹಾಯದಿಂದ ಬೇಕಾದಷ್ಟು ಎತ್ತರದಲ್ಲಿದ್ದ ವಿಮಾನ-ದಿಂದ ಮನುಷ್ಯನು ಮೆಲ್ಲನೆ ಕೆಳಕ್ಕೆ ಇಳಿಯಬಹುದು.

ಹಿಂದುಸ್ತಾನದಲ್ಲಿ ಸನ್ ೧೯೧೧ ರಲ್ಲಿ ಒಬ್ಬ ಫ್ರೆಂಚ್ ವೈಮಾನಿ-ಕನು ಅಯ್ದು ಸಾವಿರ ಪತ್ರಗಳ ಟಪಾಲನ್ನು ಹಾಕಿಕೊಂಡು ಅಲಹಾ-ಬಾದದಿಂದ ಯಮುನಾ ನದಿಯ ಮೇಲ್ಗಡೆಯಲ್ಲಿರುವ ನಾಇನಿಗೆ ಹೋದನು. ಇದೇ ನಮ್ಮ ದೇಶದಲ್ಲಿ ಹಾರಿಸಲ್ಪಟ್ಟ ಮೊದಲನೆಯ ವಿಮಾನವು. ಮುಂದೆ ಸ್ವಲ್ಪ ದಿವಸಗಳಲ್ಲಿ ಮಹಾಯುದ್ಧವು ಆರಂಭ-ವಾದದರಿಂದ ಈ ದೇಶದಲ್ಲಿ ವಿಮಾನಗಳ ಚಲನೆ ನಿಂತುಹೋಯಿತು.

ಉದ್ಯೋಗ ವ್ಯವಸಾಯುಗಳಿಗೂ ಟಪಾಲು ಕಳುಹುವದಕ್ಕೂ ಯುದ್ಧಗಳಿಗೂ ಪ್ರವಾಸಿಗಳಿಗೂ ವಿಮಾನಗಳಿಂದ ವೇಳೆಯ ಉಳಿತಾ-ಯವು ಬಹಳವಾಗುವದು. ಟಾಟಾ ಸನ್ಸ್ ಲಿಮಿಟೆಡ್ ಮತ್ತು ಇಂಡಿಯನ್ ನ್ಯಾಶನಲ್ ಏಯರ್‌ವೇಜ್ ಲಿಮಿಟೆಡ್ ಎಂಬ ಎರಡು ಕಂಪನಿಗಳು ಈಗ ಕರಾಚಿ, ದಿಲ್ಲಿ, ಅಲಹಾಬಾದ, ಕಲಕತ್ತೆ, ರಂಗೂನ, ಡಾಕಾ, ಮುಂಬಯಿ, ಮದ್ರಾಸ ಮೊದಲಾದ ಪಟ್ಟಣಗಳ ನಡುವೆ ವಿಮಾನಗಳನ್ನು ನಡೆಸುವ ಕೆಲಸವನ್ನು ಕೈಕೊಂಡಿರುವವು.

ಈತ್ತೀಚೆಗೆ ಯುದ್ಧಕಾಲದಲ್ಲಿ ಶತ್ರುಗಳ ಆಯಕಟ್ಟಿನ ಸ್ಥಳಗಳ ಮೇಲೆ ಬಾಂಬುಗಳನ್ನು ಒಗೆಯುವದು, ಅವರ ಚಲನವಲನೆಯನ್ನು

ನಿರೀಕ್ಷಿಸುವದು, ಯುದ್ಧ ಸಾಮುಗ್ರಿಗಳನ್ನೊಯ್ಯುವದು ಮುಂತಾದ ಕೆಲಸಗಳನ್ನು ಮಾಡುವದಕ್ಕೆ ವಿಮಾನಗಳು ಬಹಳ ಸಹಾಯಕಗಳಾ-ಗಿರುವವು. ವಿಮಾನಗಳ ವೇಗವು ತಾಸಿಗೆ ೨೦೦-೩೦೦ ಮೈಲು ಇರು-ವದು ; ಆಕಾಶದಲ್ಲಿ ಸಂಚರಿಸುವ ಅವಕ್ಕೆ ಅಡ್ಡಿಗಳು ಇರುವದಿಲ್ಲ.

ವಿಮಾನಗಳಿಗಾಗಿ ಈವರೆಗೆ ಎಷ್ಟು ಜನರ ಪ್ರಾಣಗಳ ಆಹುತಿ-ಯಾಗಿರುವದೆಂಬದನ್ನು ನೆನೆಸಿದರೆ ನಮಗೆ ಭಯವೆನಿಸುವದು. ಆದರೆ ಅವುಗಳ ಪ್ರಯೋಜನಗಳನ್ನು ಎದುರಿಗೆ ಇಟ್ಟುಕೊಂಡಾಗ ಮನುಷ್ಯನ ಪ್ರಾಣವು ತುಚ್ಛವೆನಿಸುವದು. ಈಗ ನಡೆದಿರುವ ವಿಮಾನಗಳ ಸುಧಾ-ರಣೆಗಳನ್ನು ನೆನೆದರೆ, ಬೆಳಗ್ಗೆ ಹಿಂದುಸ್ತಾನದಿಂದ ಹೊರಟು ಸಾಯಂ-ಕಾಲದೊಳಗಾಗಿ ಇಂಗ್ಲಂಡಿಗೆ ಹೋಗುವ ದಿನಗಳು ಬೇಗನೆ ಬರುವವೆಂದು ಎನಿಸುವದು. ಸನ್ ೧೯೩೫ ರಲ್ಲಿ ಇಂಗ್ಲಂಡಿನಲ್ಲಿ ನಡೆದ ವಿಮಾನಗಳ ಪಂದ್ಯಾಟದಲ್ಲಿ ಒಬ್ಬ ವೈಮಾನಿಕನು ಇಂಗ್ಲಂಡಿನಿಂದ ಹೊರಟು ಇಪ್ಪತ್ತೆರಡು ಗಂಟೆಗಳಲ್ಲಿ ಕರಾಚಿಗೆ ಬಂದನು. ಭಾರತೀಯರು ವಿಮಾನಗಳ ರಚನೆಯಲ್ಲಿ ಹೆಚ್ಚಾಗಿ ತೊಡಗಿರದಿದ್ದರೂ ಅವುಗಳನ್ನು ನಡೆಸುವದರಲ್ಲಿ ಎಷ್ಟೋ ಜನರು ಪ್ರವೀಣರಾಗಿರುವರೆಂಬದು ನಮಗೆ ಹೆಮ್ಮೆಯ ವಿಷಯವು.

**೧. ವಿಮಾನಗಳನ್ನು ರಚಿಸುವದರಲ್ಲಿ ಯಾರು ಯಾರು ಪ್ರಯತ್ನ-ಮಾಡಿದರು ? ೨. ವಿಮಾನಗಳ ಸುಧಾರಣೆಯ ಇತಿಹಾಸವನ್ನು ಸಂಕ್ಷೇಪ-ವಾಗಿ ಹೇಳಿರಿ. ೩. ವಿಮಾನದಿಂದ ಯಾವ ಯಾವ ಉಪಯೋಗಗಳಾಗು-ತ್ತಿವೆ ? ೪. ವಾಹನಗಳನ್ನು ವೇಗಕ್ರಮದಲ್ಲಿ ಹೇಳಿರಿ. ೫. ವೇಗಶಾಲಿ ವಾಹನಗಳಿಂದ ಸ್ವಲ್ಪ ವರ್ಷಗಳಲ್ಲಿ ಯಾವ ಪರಿಸ್ಥಿತಿ ಉಂಟಾಗಬಹುದು ?**

## ೧೯. ಕಚ–ದೇವಯಾನಿ

[ ಮುದವೀಡು ಕೃಷ್ಣರಾಯರು ಒಳ್ಳೆಯ ವಾಗ್ಮಿಗಳೆಂದು ಇಡಿಯ ಕರ್ನಾಟಕದಲ್ಲಿ ಸುಪ್ರಸಿದ್ಧರಾಗಿರುವರು. ಇವರು 'ಕರ್ನಾಟಕವೃತ್ತ' ಎಂಬ ವಾರಪತ್ರಿಕೆಯ ಸಂಪಾದಕರಾಗಿ ಸ್ಫೂರ್ತಿದಾಯಕವಾದ ಹಲವು ಲೇಖನಗಳನ್ನು ಬರೆದು, 'ಪ್ರೇಮಭಂಗ' ಮೊದಲಾದ ನಾಟಕಗಳನ್ನು ರಚಿಸಿ ಒಳ್ಳೆಯ ಸಾಹಿತ್ಯಕಾರರೂ ಎನಿಸಿದ್ದಾರೆ. ೧೯೩೧ನೆಯ ಇಸವಿಯ ಸಾಹಿತ್ಯ ಸಮ್ಮೇಲನಕ್ಕೆ ಇವರು ಅಧ್ಯಕ್ಷರಾದದ್ದು ಇವರು ಕನ್ನಡಿಗರಿಗೆಲ್ಲ ಮಾನ್ಯರಾದದ್ದಕ್ಕೆ ಸಾಕ್ಷಿ. ಇವರ 'ಪ್ರೇಮಭಂಗ' ನಾಟಕದಿಂದ ಈ ಲೇಖನವನ್ನು ಆಯ್ದುಕೊಳ್ಳಲಾಗಿದೆ. ದೈತ್ಯಕುಲಗುರುಗಳಾದ ಶುಕ್ರಾಚಾರ್ಯರಿಂದ ಸಂಜೀವನೀ ವಿದ್ಯೆಯನ್ನು ದೇವತೆಗಳಿಗಾಗಿ ತರಲು ಕಚನು ಹೋಗಿದ್ದನು. ಶುಕ್ರಾಚಾರ್ಯರ ಮಗಳು ದೇವಯಾನಿ ಕಚನನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಕಚನಿಗೆ ಸಂಜೀವನೀವಿದ್ಯೆ ದೊರೆಯು-ವಲ್ಲಿ ಉಂಟಾದ ಗಂಡಾಂತರವನ್ನು ಆತನ ಮೇಲಿನ ಅನುರಾಗಾತಿಶಯ-ದಿಂದ ದೇವಯಾನಿ ಹೋಗಲಾಡಿಸಿ, ಆತನಿಗೆ ಆ ವಿದ್ಯೆ ದೊರೆಯುವ ಯೋಗವನ್ನು ತಂದುಕೊಟ್ಟ ಮನೋಹರವಾದ ಸನ್ನಿವೇಶವು ಈ ಆಯ್ಕೆಯಲ್ಲಿದೆ. ]

**ದೇವಯಾನಿ :—** ಏನಾದರೂ ಕಚದೇವನು ಮರಳಿ ಬರಲಿಕ್ಕೆ ಬೇಕು.

**ಶುಕ್ರಾಚಾರ್ಯ :—** ಹಾಗಾದರೆ ನೀನು ನಮ್ಮ ಜೀವಿತಾಶೆಯನ್ನು ಬಿಟ್ಟುಬಿಡತಕ್ಕದ್ದು.

**ದೇವಯಾನಿ :—** ಅಂದರೆ?

**ಶುಕ್ರಾಚಾರ್ಯ :—** ಅಂದರೆ! ಕಚನು ನಮ್ಮ ಜಠರಸ್ಥ-ನಾಗಿದ್ದಾನೆ.

**ದೇವಯಾನಿ :—** ಕಚದೇವನನ್ನು ಸಂಹರಿಸಿ ಅವನ ಮಾಂಸ-ದಿಂದಲೇ ಶರ್ಮಿಷ್ಠೆಯು ನಿಮಗೆ ಇಂದು ಭೋಜನ ಮಾಡಿಸಿದಳೇ?

**ಶುಕ್ರಾಚಾರ್ಯ :—** ಅಲ್ಲ, ಹಾಗಲ್ಲ. ಕಚನ ಶರೀರವನ್ನು ಭಸ್ಮಮಾಡಿ ಆ ರಕ್ಷಾಮಿಶ್ರಿತ ಮದ್ಯವನ್ನು ನಮಗೆ ಪಾನ ಮಾಡಿಸಿದ್ದಾಳೆ.

**ದೇವಯಾನಿ :—** ಅಯ್ಯೋ ರಾಕ್ಷಸಿಯೇ, ಕೇವಲ ಪಿಶಾಚ-ಸ್ವರೂಪಿಣಿಯಾದ ನಿನ್ನ ಈ ಭೀಕರ ಕೃತ್ಯವು ಇಡೀ ಸ್ತ್ರೀಜಾತಿಗೆ ಮರ್ಧರವಾದ ಕಲಂಕವನ್ನು ತರುವದಲ್ಲ! ಪಲ್ಲವಿಕೆ, ನನ್ನ ಅಂತಃಕರಣದ ಸಾಶಂಕವೃತ್ತಿಯ ಪರಿಸ್ಫೋಟವು ಈಗ ಆದಂತಾಯಿತಲ್ಲ.

**ಪಲ್ಲವಿಕೆ :—** ಇದರಲ್ಲೇನು ಸಂದೇಹ? ಅಂತೂ ಶರ್ಮಿಷ್ಠೆಯ ದುರ್ಬುದ್ಧಿಯು ಇಷ್ಟು ಪ್ರದೀಪ್ತವಾಗಿರುವದಾಗಿ ತಿಳಿದಿರಲಿಲ್ಲ.

**ಕುಶಾ :—** ಇದು ನೀಚತನದ ಕಳಸವಾಯಿತು! ಪ್ರತ್ಯಕ್ಷ ಗುರುಗಳನ್ನೂ ಮೋಸಗೊಳಿಸಿ ವ್ರತಾಚರಣೆಯ ಮಿಷದಿಂದ ಅವರಿಗೆ ಕಚಭಸ್ಮ ಮಿಶ್ರಿತ ಮದ್ಯವನ್ನು ಪಾನಮಾಡಿಸಿದಳು! ಬಹುಪರಿಯ ವಿನಯದಿಂದ ಪ್ರಾರ್ಥಿಸಿದ್ದು ಮೋಹಜಾಲವನ್ನು ಬೀಸುವದಕ್ಕೆ ಮಾಡಿದ ಹಾಗಾಯಿತು.

**ದೇವಯಾನಿ :—** ನಮಗೆಲ್ಲರಿಗೂ ಮೋಹ ಬಿತ್ತು. ಪ್ರತ್ಯಕ್ಷ ಕಚದೇವನೂ ಮೋಹಕ್ಕೊಳಗಾದನು. ಮುಂದೇನು ಮಾಡತಕ್ಕದ್ದು? ತಾತಾ, ಇದಕ್ಕೇನಾದರೂ ಉಪಾಯ?

**ಶುಕ್ರಾಚಾರ್ಯ :—** ಒಂದೇ ಉಪಾಯ. ನಿನಗೆ ನಾನು ಇಲ್ಲವೆ ಕಚನು ಈ ಇಬ್ಬರೊಳಗೊಬ್ಬರು ಎರವಾಗುವದು.

**ದೇವಯಾನಿ :—** ನನಗೆ ಎರಡೂ ಪ್ರಾಣಾಪತ್ತುಗಳೇ! ಕಚ-ದೇವನನ್ನಗಲಿ ಇರಲಾರೆನು; ನಿಮ್ಮನ್ನಗಲಿ ನನ್ನ ಪ್ರಾಣ ನಿಲ್ಲದು. ನನಗೆ ಇಬ್ಬರೂ ಸಮನಾಗಿಯೇ ಪ್ರಿಯರಿರುತ್ತೀರಿ. ನಾನು ಇಬ್ಬರೊಳಗೆ ಯಾರನ್ನೂ ಕಳೆದುಕೊಳ್ಳಲಾರೆನು. ಆದುದರಿಂದ

**ಶುಕ್ರಾಚಾರ್ಯ :—** ಏನು ಹೇಳಬೇಕೆನ್ನುವಿಯೋ ಅದನ್ನು ಸ್ಪಷ್ಟಮಾಡಿ ಹೇಳು; ಸಂಶಯವೇಕೆ?

**ದೇವಯಾನಿ :—** (ತನ್ನಷ್ಟಕ್ಕೆ) ಏನು ನನ್ನ ಕರ್ಮ, ಹೇಳಲಿ? ಜಠರಸ್ಥನಾದ ಕಚದೇವನಿಗೆ ಸಂಜೀವನಿಯ ಉಪದೇಶಮಾಡಿದರೆ

ಅವನು ಹೊರಗೆ ಬಂದು ಪುನಃ ತಾತನವರನ್ನು ಸಜೀವಪಡಿಸುವನೆಂದು ಹೇಳಲೇ? ಮಂತ್ರೋಪದೇಶ ಮಾತ್ರದಿಂದ ಸಂಪ್ರಾಪ್ತವಾಗುವ ಗುರು-ಬಂಧು-ಭಗಿನೀ ಸಂಬಂಧದ ಮೂಲಕ ನಾನು ಕಚದೇವನಿಗೆ ಎರ-ವಾಗುವ ಹೊತ್ತು ಬಂತು; ಅನೇಕ ಜನ ಶಿಷ್ಯರಲ್ಲಿ ಬೇರೆ ಯಾರಿ-ಗಾದರೂ ಉಪದೇಶ ಮಾಡಿರೆಂದು ಹೇಳಲೇ? ಮುಂದೆ ಮಂತ್ರವು ಷಟ್ಕರ್ಣಿಯಾಗುವದರಿಂದ ಕಚದೇವನಿಗೆ ಅದು ದೊರೆಯುವಂತಾಗುವ-ದಿಲ್ಲ. ಸಂಜೀವನಿಯು ದೊರಕದೆ ಅವನು ನನ್ನನ್ನು ಪರಿಗ್ರಹಿಸು-ವಂತಿಲ್ಲ. ಅಂತೂ ಶರ್ಮಿಷ್ಠೇ, ಪೂರಾ ನನ್ನ ಘಾತಮಾಡಿದೆ. ಇನ್ನೇನು ಮಾಡಲಿ? ಏನೇ ಆಗಲಿ, ಜಠರಸ್ಥ ಕಚದೇವನಿಗೆ ಸಂಜೀವನಿಯನ್ನು ಉಪದೇಶಿಸುವದಕ್ಕೆ ಹೇಳಬೇಕು. ಅಂದರೆ ಕಚದೇವನಿಗೆ ಸಂಜೀವನೀ ಲಾಭವಾಗಬಾರದೆಂದು ಇಷ್ಟೆಲ್ಲ ಘೋರ ಕೃತ್ಯವನ್ನು ಮಾಡಿದ ಶರ್ಮಿಷ್ಠೆಯ ಹಲ್ಲು ಮುರಿದಂತಾಗಿ ಅವಳ ದುಷ್ಕೃತಿಯ ಪರಿಣಾಮವೇ ಕಚದೇವನಿಗೂ ದೇವತೆಗಳಿಗೂ ಹಿತಕರವಾಯಿತೆಂಬದು ಅವಳಿಗೆ ತಿಳಿದುಬರುವದು. ಮುಂದೆ ನನ್ನ ಗತಿ? ಗತಿಯೇನು? ನನ್ನ ಮೂಲಕವಾಗಿಯೇ ಸಂಜೀವನೀ ಲಾಭವಾಯಿತೆಂದು ಕಚದೇವನು ನನ್ನನ್ನು ಅಂಗೀಕರಿಸಬಹುದು. ನಾನೇ ದೇವಕಾರ್ಯವನ್ನು ಮಾಡಿ-ಕೊಟ್ಟೆನೆಂಬ ಕೃತಜ್ಞತಾಬುದ್ಧಿಯಿಂದಲಾದರೂ ಕಚದೇವನು ನನ್ನನ್ನು ಪರಿಗ್ರಹಿಸಬಹುದು. ಸರಿ, ಹೀಗೆಯೇ ಮಾಡಬೇಕು.

**ಶುಕ್ರಾಚಾರ್ಯ :—** ವತ್ಸೇ, ಏನು? ಬಲು ದೀರ್ಘ ವಿಚಾರ ನಡೆ-ದಿರುವದು?

**ದೇವಯಾನಿ :—** ತಾತಾ, ಎರಡೂ ಸಂಕಟಗಳಿಂದ ಪಾರಾಗ-ಬೇಕೆಂಬದಾಗಿ ವಿಚಾರಮಾಡಿದೆನು.

**ಶುಕ್ರಾಚಾರ್ಯ :—** ಕೊನೆಗೆ ನೀನು ಹೇಳುವದೇನು?

**ದೇವಯಾನಿ :—** ನನ್ನ ವಿಜ್ಞಾಪನೆಯಂತೆ ಮಾಡುವಿರಷ್ಟೇ?

**ಶುಕ್ರಾಚಾರ್ಯ :—** ಇಂದಿನ ವರೆಗೆ ನಿನ್ನ ಯಾವ ಮಾತನ್ನು ನಾನು ನಡೆಸಲಿಲ್ಲ?

**ದೇವಯಾನಿ :—** ಹಾಗಾದರೆ ನಿಮ್ಮ ಉದರಸ್ಥನಾದ ಕಚದೇವ-ನಿಗೆ ಸಂಜೀವನೀ ವಿದ್ಯೆಯನ್ನು ಉಪದೇಶಿಸಬೇಕು. ಅವನು ಹೊರಗೆ ಬಂದು ನಿಮ್ಮನ್ನು ಸಜೀವಪಡಿಸುವನು. ಹೀಗೆ ನನಗೆ ಉಭಯತರ ಲಾಭವೂ ತಪ್ಪದು.

**ಶುಕ್ರಾಚಾರ್ಯ :—** ವತ್ಸೇ, ನೀನು ಹೀಗೆಯೇ ಹೇಳುವೆಯೆಂದು ನಾವು ತರ್ಕಿಸಿದ್ದೆವು. ವತ್ಸಾ, ಕಚಾ, ದೇವಯಾನಿಯ ಪ್ರಸಾದದಿಂದ ನೀನು ಈ ಹೊತ್ತು ಅಂಗೀಕೃತ ಕಾರ್ಯದಲ್ಲಿ ಯಶಸ್ವಿಯಾದೆ. ನೀನು ಕಚರೂಪಧಾರಿಯಾದ ಪ್ರತ್ಯಕ್ಷ ಸುರೇಂದ್ರನಿರುವೆಯೋ ತಿಳಿಯದು. ನೀನು ಯಾರು ಇದ್ದರೂ ಬ್ರಾಹ್ಮಣನು ವಧ್ಯನಲ್ಲವೆಂಬ ವಿಚಾರ-ದಿಂದಲೂ ದೇವಯಾನಿಯ ದಾಕ್ಷಿಣ್ಯದಿಂದಲೂ ಪ್ರೇರಿತರಾದ ನಾವು ಇಂದು ನಿನಗೆ ಸಂಜೀವನೀ ಮಂತ್ರೋಪದೇಶವನ್ನು ಮಾಡುತ್ತೇವೆ; ಅದನ್ನು ಗ್ರಹಿಸು, ಮತ್ತು ನಮ್ಮ ಶರೀರದ ಹೊರಗೆ ಬಂದು ನಿನಗೆ ಸಂಪ್ರಾಪ್ತವಾಗಿರುವ ಅದೇ ವಿದ್ಯಾಪ್ರಭಾವದಿಂದ ನಮ್ಮನ್ನು ಪುನಃ ಸಜೀವ ಮಾಡುವ ಕೃತಜ್ಞತಾಬುದ್ಧಿಯನ್ನು ವ್ಯಕ್ತಪಡಿಸು. ದಶಸಹಸ್ರ ಸಂವತ್ಸರ ಪರಿಮಿತ ಕಾಲದ ವರೆಗೆ ಪ್ರಖರ ತಪೋನುಷ್ಠಾನದಿಂದ ಭಗವನ್ ಧನ್ವಂತರೀ ಮೂರ್ತಿಯನ್ನು ಪ್ರಸನ್ನೀಕರಿಸಿಕೊಂಡು ನಾವು ಸಂಪಾದಿಸಿದ ಸಂಜೀವನೀ ವಿದ್ಯಾಮೂಲತತ್ವ ಬೀಜಮಂತ್ರಾಕ್ಷರಗಳನ್ನು ಅದೇ ದಯಾಮಯ ಮೂರ್ತಿಯ ಸ್ಮರಣಪೂರ್ವಕವಾಗಿ ನಿನಗೆ ಪ್ರಕಾಶ-ಪಡಿಸುತ್ತೇವೆ. ಭಗವಂತನ ಅನುಗ್ರಹದಿಂದ ಅವು ನಿನ್ನಲ್ಲಿ ನೆಲೆ-ಗೊಳ್ಳಲಿ. ವತ್ಸಾ, ಕಚಾ, ಇನ್ನೇನು ? ನೀನು ಯಾರ ಯಾರ ಜಠರ-ಗಳೊಳಗೆ ಅಧಿಷ್ಠಿತನಾಗಿರುವೆಯೋ ಆ ಎಲ್ಲರ ಉದರಗಳನ್ನು ವಿದಾರಿಸಿ ಸದೇಹ ಸಜೀವ ಸಚೇತನ ಹೊರಗೆ ಬಾ.

( ಕಚನು ಬರುತ್ತಾನೆ. ಶುಕ್ರಾಚಾರ್ಯರು ಬೀಳುತ್ತಾರೆ. )

**ಕಚ :—** ಶ್ರೀಗುರು ಪ್ರಸಾದದ ಮಹಿಮೆಯು ಅಗಾಧವಾದದ್ದು. ಸಾಕ್ಷಾತ್ ಶುಕ್ರಾಚಾರ್ಯರಂಥ ತಪೋಬಲಿಗಳಾದ ಗುರುಗಳ ಸಮ್ಮುಖ-ದಲ್ಲಿ ಯಾವ ದಾನವರ ದುಷ್ಕೃತ್ಯಗಳು ಜಯಶೀಲವಾಗುವವು ?

( ಶುಕ್ರಾಚಾರ್ಯರ ದೇಹವನ್ನು ಕಂಡು ) ಅಹಹಾ ! ಶರತ್‌ಪೌರ್ಣಿಮಾ ಚಂದ್ರ-ಮನ ಸುಧವಲ ಕಿರಣಗಳ ಸಂಕಲಿತ ಸಮೂಹವೋ, ಸದ್ವಿದ್ಯಾಧನದ ಅಪಾರ ರಾಶಿಯೋ, ಚಿರಂತನ ಸಾತ್ವಿಕಾಚರಣೆಯ ಪ್ರಚಂಡ ಸಮು-ದಾಯವೋ, ಪ್ರಬಲ ತಪೋನುಷ್ಠಾನದ ಪ್ರಶಾಂತ ಗಡಣವೋ ಎಂಬಂತೆ ಪರಮಗುರುಗಳ ಮನೋಹರವಾದ ಪೂಜ್ಯ ಶರೀರವು ಇಲ್ಲಿರುವದು. ಇದೇ ಮಹಾತ್ಮರಿಂದ ಅನುಗ್ರಹೀತವಾದ ಭಗವತೀಸಂಜೀವನೀ ವಿದ್ಯಾ-ದೇವತಾ ಪ್ರಭಾವದಿಂದ ಇವರನ್ನು ಸಜೀವಪಡಿಸುತ್ತೇನೆ. ( ಧ್ಯಾನ-ಮಾಡುತ್ತಾನೆ. ಶುಕ್ರಾಚಾರ್ಯರು ಸಜೀವರಾಗಿ ಏಳುತ್ತಾರೆ. )

**ಶುಕ್ರಾಚಾರ್ಯ:—** ವತ್ಸಾ, ಕಚಾ, ನೀನು ಇಂದು ಕೃತ-ಕಾರ್ಯನಾದೆ.

**ಕಚ:—** ಭಗವನ್ ಪರಮಗುರೋ, ಅಜ್ಞಾನಾಂಧಕಾರದಲ್ಲಿ ಮುಳುಗಿ ಗರ್ಭವಾಸದುಃಖಕ್ಕೆ ಪುನಃ ಈಡಾದ ಈ ಪಾಮರ ಶಿಷ್ಯನನ್ನು ದಿವ್ಯಜ್ಞಾನಾಮೃತಪಾನದಿಂದ ಉದ್ಧರಿಸಿದ ಈ ಗುರುಚರಣಗಳು ಸಾಕ್ಷಾತ್ ಜನ್ಮದಾತೃಗಳಾದ ಜನನೀಜನಕರಿಗಿಂತಲೂ ನನಗೆ ಅತ್ಯಂತ ಪೂಜ್ಯವಾಗಿವೆ. ಇಂಥ ಸದ್ಗುರು ಪ್ರಸಾದದಿಂದ ಸಂಪಾದಿತವಾಗಿರುವ ಸಮ್ಯಕ್‌ಜ್ಞಾನವನ್ನು ಪಡೆದ ಯಾವ ಪಾತಕಿಯು ಆ ಗುರುಚರಣಗಳಿಗೆ ದ್ರೋಹವನ್ನು ಬಗೆದಾನು ? ಸದೈವ ಪೂಜ್ಯರಾದ ಗುರುಗಳಿಂದ ಜ್ಞಾನಾರ್ಜನೆ ಮಾಡಿಕೊಂಡು ಅದಕ್ಕೆ ಪ್ರತಿಯಾಗಿ ತ್ರೈಲೋಕ್ಯಪೂಜ್ಯ-ರಾದ ಸಕಲದೇವತೆಗಳಿಗಿಂತಲೂ ಅಧಿಕಪೂಜ್ಯವಾದ ಗುರುಚರಣಸೇವೆ-ಯನ್ನು ಮಾಡುವದಕ್ಕೆ ಬದಲು, ಆ ಗುರುಚರಣಗಳಿಗೆ ದ್ರೋಹವನ್ನು ಬಗೆಯುವ ಮಹಾ ಚಂಡಾಲ ಪಾತಕಿಗಳು ಇಹದಲ್ಲಿ ಸರ್ವರೀತಿ-ಯಿಂದಲೂ ನಿಂದ್ಯರೂ ತ್ಯಾಜ್ಯರೂ ಆಗುವರಲ್ಲದೆ ಪರದಲ್ಲಿ ಘೋರವಾದ ನರಕವಾಸವನ್ನು ಅನುಭವಿಸುವರು. ಸದ್ಗುರೋ, ನಾನು ಎರಡು ಸಾರೆ ಸಂಹೃತನಾದರೂ ಭವತ್‌ಪ್ರಸಾದದಿಂದ ಪುನಃ ಸಜೀವನಾದೆನು. ಅಜ್ಞಾತವೂ ಅನನುಭೂತವೂ ಆದ ಮೃತಾವಸ್ಥೆಯಲ್ಲಿ ಅನ್ಯಪ್ರಾಣಿಗಳ ಜಠರಸ್ಥಾನದಲ್ಲಿ, ವಿಕಲೀಕೃತಾವಸ್ಥೆಯಲ್ಲಿ ನನ್ನ ದೇಹವಿದ್ದರೂ ಭವ-

ದೀಯ ಅನುಗ್ರಹದಿಂದ ನನ್ನ ಆತ್ಮಕ್ಕೆ ಸಂಭೂತಸಂಗತಿಗಳ ಸಮ್ಯಕ್-ಜ್ಞಾನವು ತಪ್ಪಲಿಲ್ಲ. ನನ್ನ ಶರೀರವು ಭಸ್ಮೀಭೂತವಾಗಿ, ಅದರ ಬೇರೆ ಬೇರೆ ರಜಗಳು ಬೇರೆ ಬೇರೆ ಜಠರಾಗ್ನಿಗೆ ಆಹುತಿಯಾಗಿದ್ದರೂ ಸದ್ಗುರು ಪ್ರಸಾದದಿಂದ ನಾನು ಅನೇಕ ಉದರಗಳನ್ನು ವಿದಾರಿಸಿ, ಇಂದು ಪುನಃ ಸದೇಹ ಸಚೇತನನಾಗಿ ಬಂದಿರುತ್ತೇನೆ. ಲಕ್ಷಾವಧಿ ವರ್ಷಗಳ ಪ್ರಚಂಡ ತಪೋನುಷ್ಠಾನದಿಂದಲೂ ಮಹಾನ್ ಮಹಾನ್ ಋಷಿಗಳಿಗೂ ಅಗಮ್ಯವೂ ಅಗೋಚರವೂ ಆಗಿರುವ ದಿವ್ಯಸಂಜೀವನೀ ವಿದ್ಯೆಯನ್ನು ಇದೇ ಗುರುಮಾತೆಯ ಪರಮಾನುಗ್ರಹದಿಂದ ನಾನು ಇಂದು ಪಡೆದಿದ್ದೇನೆ. ಹೀಗೆ ಸರ್ವರೀತಿಯಿಂದಲೂ ಕಲ್ಯಾಣಕಾರಿಯಾದ ಈ ಸದ್ಗುರುಚರಣಗಳಿಗೆ ಕೇವಲ ಪಿತೃವಾತ್ಸಲ್ಯದಿಂದ ನಾನು ಸಾಷ್ಟಾಂಗ ಪ್ರಣಾಮ ಮಾಡುತ್ತೇನೆ. ಗುರುಗಳೂ ಪುತ್ರವಾತ್ಸಲ್ಯದಿಂದ ನನ್ನನ್ನು ಅನುಗ್ರಹಿಸಬೇಕು.

**ಶುಕ್ರಾಚಾರ್ಯ :—** ವತ್ಸಾ ಕಚಾ, ನಿನ್ನ ಸದ್ಭಾವವನ್ನು ಕಂಡು ನಾವು ಪರಮಸಂತೋಷಭರಿತರಾಗಿರುತ್ತೇವೆ. ಸಂಜೀವನೀದಾನಕ್ಕೆ ನೀನು ಸರ್ವತಃ ಅರ್ಹನಾಗಿರುವೆಯೆಂಬದಕ್ಕೆ ಸಂದೇಹವಿಲ್ಲ. ನಿನ್ನಂಥ ಸುಜ್ಞನಾದ ಶಿಷ್ಯನಿಗೇ ವಿದ್ಯಾಧ್ಯಯನ ಮಾಡಿಸಿರುವದರಿಂದ ನಮ್ಮ ಲೌಕಿಕವು ಅಭಿವೃದ್ಧಿಯನ್ನು ಹೊಂದುವದೆಂಬದು ನಿರ್ವಿವಾದವಾಗಿದೆ. ಆದರೆ ಈ ಪ್ರಸಂಗದಲ್ಲಿ ಇನ್ನೊಂದು ಸಂಗತಿಯ ನಿರ್ದೇಶವನ್ನು ನಾವು ಮಾಡದಿರಲಾರೆವು. ನೀನು ಒಮ್ಮೆ ಸಂಹೃತನಾದವನು, ನಮ್ಮಿಂದ ಪುನಃ ಸಜೀವನಾಗಿ ಮಾಡಲ್ಪಟ್ಟದ್ದನ್ನು ಕಂಡು ತಾಮಸವ್ಯವಹಾರಿ-ಗಳಾದ ಈ ದೈತ್ಯರು ಪುನಃ ನಿನ್ನನ್ನು ಸಂಹರಿಸುವ ಆಲೋಚನೆಯನ್ನು ಮಾಡಿದ್ದು ಕಠೋರವೂ ನಿರ್ಘೃಣವೂ ಕೃತಘ್ನವೂ ಆದ ಅವರ ಸ್ವಭಾವದ ಸ್ಪಷ್ಟದ್ಯೋತಕವಾಗಿರುತ್ತದೆ. ಇಂಥ ಮಹಾಪಾತಕಿಗಳ ಬೆನ್ನುಕಟ್ಟಿ ಅವರನ್ನು ಅಮರಪುರಿಯ ಅಧಿಪತಿಗಳನ್ನಾಗಿ ಮಾಡುವ ಕುತೂಹಲ-ವನ್ನು ನಾವು ಧಾರಣಮಾಡಿದ್ದು ಸರ್ವಥೈವ ತ್ಯಾಜ್ಯವಾಗಿದೆ. ದೇವೇಂದ್ರನ ದೇವಲೋಕದ ಸಾಮ್ರಾಜ್ಯಕ್ಕೂ ಸಿಂಹಾಸನಕ್ಕೂ ಇವರು ಪೂರಾ ಅನರ್ಹರಾಗಿರುವದರಿಂದ ಅದು ಅವರಿಗೆ ಎಂದೂ ಲಭಿಸದು ;

ವತ್ಸಾ ಕಚಾ, ಈ ಮೂಢದಾನವರ ಮೂರ್ಖತನದಿಂದಲೇ ನೀನು ಕೃತ-ಕೃತ್ಯನಾದೆ. ಸಂಜೀವನೀವಿದ್ಯಾಪ್ರಭಾವದಿಂದ ನೀನು ಸಾಕ್ಷಾತ್ ಪರಮೇಷ್ಠಿಗೂ ಸರಿಯಾದ ಪರಾಕ್ರಮಿಯಾದೆ. ನಿನ್ನನ್ನು ಪಡೆದ ಅಂಗೀರಸರು ಧನ್ಯರು, ಪರಮಧನ್ಯರು !

—ಮುದವೀಡು ಕೃಷ್ಣರಾಯ.

೧. ಕಚನಿಗೆ ಮರಳಿ ಬರುವದು ಹೇಗೆ ಕಠಿನವಾಗಿತ್ತು ? ೨. ದೇವಯಾನಿ ಕೊನೆಗೆ ಅದಕ್ಕೆ ಯಾವ ಉಪಾಯವನ್ನು ಸೂಚಿಸುತ್ತಾಳೆ ? ೩. ಕಚನು ಸಂಜೀವನೀ ವಿದ್ಯೆಯನ್ನು ಕಲಿತದ್ದರಿಂದ ದೈತ್ಯರ ಆಕಾಂಕ್ಷೆ ಈಡೇರಲು ಅಡ್ಡಿಯಾದದ್ದು ಹೇಗೆ ? ೪. ( ನೀಚತನದ ) ಕೆಳಸ, ಹಲ್ಲು-ಮುರಿದಂತಾಗು, ನೆಲೆಗೊಳ್ಳು, ಬೆನ್ನುಕಟ್ಟು ಇವನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆ. ೫. ಈ ಪಾಠದ ಕಥೆಯನ್ನು ಬರೆ.

## ೨೦. ಬೋಸಿಗ-ಮಲ್ಲಿಗ

[ ಅನೇಕ ಕವಿತೆ, ಕಥೆ, ಲೇಖಗಳ ಮೂಲಕ ಕನ್ನಡ ವಾಚಕರಿಗೆ ಪರಿಚಿತರಾಗಿರುವ ಮೇವುಂಡಿ ಮಲ್ಲಾರಿಯವರ ‘ ಬೋಸಿಗಮಲ್ಲಿಗ ’ ಎಂಬ ಚಿಕ್ಕ ಪದ್ಯಪುಸ್ತಕದಿಂದ ಈ ಕವಿತೆಯನ್ನು ಆಯ್ದುಕೊಂಡಿದೆ. ಇವರ ‘ ಬೆಳಕಿನ ಕತ್ತಲೆ ’ ಮುಂತಾದ ಕಥಾಸಂಗ್ರಹಗಳು ಪ್ರಕಟವಾಗಿವೆ. ಹಗೆಗಳು ತಮ್ಮ ತುರುಗಳನ್ನು ಹಿಡಿದಾಗ ದನಕಾಯುವ ಹುಡುಗರಿಬ್ಬರು ಅವರೊಡನೆ ಹೋರಾಡಿ ಸತ್ತರು. ಈ ಸಂಗತಿಯನ್ನು ತಿಳಿಸುವ ಎರಡೇ ಕಂದ ಪದ್ಯಗಳ ಒಂದು ಶಿಲಾಲೇಖನವನ್ನೋದಿ ಬರೆದ ಕವನವಿದು. ಇದರಲ್ಲಿ ಆ ಹುಡುಗರ ಗೆಳೆತನದ ಮಾದರಿ, ಅವರ ಎದೆಗಾರಿಕೆ, ಅವರ ಬಂಟತನ ಇವುಗಳನ್ನು ಸುಂದರವಾಗಿಯೂ ಸ್ಫೂರ್ತಿಯುಕ್ತವಾಗಿಯೂ ಚಿತ್ರಿಸಿರುವದನ್ನು ಕಾಣಬಹುದು. ]

೧

ಇಬ್ಬರು ಹೂಲಿಯೊಳಿದ್ದರು ಕೂರ್ಪಿನ ಜತ್ತಿನ ಗೆಳೆಯರು ಗೋವಳರು ;
ಕೊಬ್ಬಿದ ಮೆಯ್ಯವರಗಲಾದೆದೆಯವರುಬ್ಬಿದ ತೋಳಿನ ಗಟ್ಟಿಗರು.
ಕಾಡೊಳು ದಿನವೂ ಕೂಡಿಯೆ ಕೆಲೆಕೆಲೆದಾಡುತೆ ಹಸುಗಳನೋವುವರು,
ಆಡುವರುಂಬರು ಬುತ್ತಿಯನಿಂಪಿನ ಹಾಡನು ಕೊಳಲೊಳು ನುಡಿಸುವರು;
ಎಳಗರುಕೆಯನೊಲವಿಂದೀಯುತೆ ಕರುಗಳನೊಯ್ಯನೆ ಮೆಯ್ದಡಹುವರು;
ಗಿಳಿಗಳನೊಸೆದಾದರಿಪರು ಕಪಿಗಳನಣಕಿಸಿ ಕಲ್ಲೀಡಾಡುವರು ;
ಅಗಲಿವ ಬೆದರಿದ ತುರುಗಳನೆಲ್ಲವನೊಂದೆಡೆ ತರುವರು ಕೂಗಿನೊಳೆ ;
ತೆಗೆದಿನಿವಣ್ಣಳನೊಬ್ಬನಿಗೊಬ್ಬನು ಕೊಡುವನು, ತಿಂಬರು ಕೊಂಬೆಯೊಳೆ;
ಬಾರನು ಕೋಲನು ಕವಣೆಯನಾರ್ಪನು ನಂಬಿಯೆ
ಸ್ವೇಚ್ಛೆಯೊಳಿರುತಿಹರು;
ಧೀರರೆರಡುರೂಪಿನೊಳಿರುವೊಂದೆಯೆ ಜೀವದ ಬೋಸಿಗ-ಮಲ್ಲಿಗರು.

೨

ಅತ್ತ ಕೊಳದೊಳು ಮಿಾಯುತ್ತಿದ್ದನು ಮುಳುಗುತೀಸುತೆ ಮಲ್ಲಿಗ ;
ಇತ್ತ ಕಾಯುತೆ ತಳಿರ ಜೊಂಪದ ಗಿಡದೊಳಿದ್ದನು ಬೋಸಿಗ.
ಇಂತಿರುವ ಸಮಯದಲಿ ಕಳ್ಳನೆಯಲ್ಲಿ ಹಗೆಗಳ ಜಂಗುಳಿ
ಬಂತು ಕೊಡಲಿಯ ಬಾಳ ಬರ್ಚಿಯ ಬಡಿಗೆಯೆತ್ತಿದ ಕೆಯ್ಯಲಿ.

ಬೋಸಿಗ ಸುಂಯನೆ ಅಂಬೆರಡನು ತೆಗೆ-
ದೆಚ್ಚನು ಕೆಡಹಿದನಿಬ್ಬರನು,
ಬೀಸಿದನೊಡನೆಯೆ ಕವಣೆಯ ಕಲ್ಗಳ-
ನುರುಳಿಸಿದನು ಧರೆಗಿಬ್ಬರನು.

ಕಾದುತಿಹ ಬಂಟನಿಗೆ ಮರೆಯಲ್ಲಿ ನಿಂದು ಹದ-
ನಾದ ಬರ್ಚಿಯನೊಬ್ಬ ಪಕ್ಕದೊಳು ಚುಚ್ಚಿದನು ;
ಯೋಧ ರಣದೇವತೆಯ ಪದವನಪ್ಪಿದನೊಲವಿನಿಂದೆ ಸಾಷ್ಟಾಂಗವೆರಗಿ ;
ಹೋದನಯ್ ಬೀರಬರ್ದಿಲಕೆ 'ದನದ ಕುತ್ತಕೊದಗುವನೆ ಸಖ' ನೆಂದು
ಮರುಗಿ !

೩

ಗೆದ್ದೆವೆಂದುಬ್ಬಿನಲಿ ನಡೆದಿತ್ತು ಪಡೆ ದನದ ಹಿಂಡ ಮುಂಮಾಡಿಕೊಂಡು.
ಒದ್ದನೊಬ್ಬನನಿಬ್ಬರನು ಗುದ್ದಿದನು ಮೂವರೊರಗಿದರು ಬವಳಿಗೊಂಡು ;
ಒಬ್ಬನನು ತಕ್ಕೆಮುಕ್ಕೆಯೊಳವುಕಿ ಮಲ್ಲನಿಕ್ಕಿದನು ನಿಟ್ಟೆಲುವ ಮುರಿದು;
ಒಬ್ಬೊಬ್ಬನಾಗಿ ಬರಲೆಲ್ಲರನು ಬೀಳಿಸಿದನರಿಗಳೊಗ್ಗಾಗಿ ಬಂದು,

ತೂಗಿದರು ಕೊಡಲಿಯನು
ತಾಗಿದರು ಜಟ್ಟಿಯನು
ದುಂಡಾಗಿ ನಿಂತವರು
ರುಂಡವನು ಕಳಚಿದರು
ಅಳಿದನಾಗಳಿಗಾಗಿ ಬೋಸಿಗಣ್ಣ ;
ಕೆಳೆಯ ಕರ್ತವ್ಯಕ್ಕೆ ಮಲ್ಲಿಗಣ್ಣ !

—ಮಲ್ಲಾರಿ.

೧. ಬೋಸಿಗ ಮಲ್ಲಿಗರು ವನದಲ್ಲಿ ಸ್ವೇಚ್ಛೆಯಿಂದ ಇರುತ್ತಿದ್ದ ಬಗೆಯನ್ನೂ ಅವರ ಗೆಳೆತನದ ಬಗೆಯನ್ನೂ ವರ್ಣಿಸಿರಿ. ೨. 'ಅಳಿದನು ಕೆಳೆಯ ಕರ್ತವ್ಯಕ್ಕೆ ಮಲ್ಲಿಗಣ್ಣ !' ಎಂಬ ಮಾತನ್ನು ಸ್ಪಷ್ಟಗೊಳಿಸಿರಿ. ೩. ಈ ಪದ್ಯವನ್ನು ಓದಿದ ಬಳಿಕ ನಿಮ್ಮ ಮನಸ್ಸಿನಲ್ಲಿ ಬರುವ ವಿಚಾರ-ಗಳನ್ನು ಬರೆಯಿರಿ.

# ೨೧. ವಿಂಧ್ಯಾಟವಿಯಲ್ಲಿ

[ ಕೈ. ವಾ. ಗಂ. ಮ. ತುರಮರಿಯವರ ಶೈಲಿ ಒಳ್ಳೆಯ ಹೊಸಗನ್ನಡ ಶೈಲಿಯೆಂದು ಉತ್ತರ ಕರ್ನಾಟಕದಲ್ಲಿ ಹೆಸರಾಗಿದೆ. ಸಂಸ್ಕೃತದ ಬಾಣ-ಕಾದಂಬರಿಯನ್ನು ಸಂಕ್ಷೇಪಿಸಿ ಕನ್ನಡದಲ್ಲಿ ಬರೆದ 'ಬಾಣ ಕಾದಂಬರಿ' ಎಂಬ ಅವರ ಗ್ರಂಥದಿಂದ ವಿಂಧ್ಯಾಟವಿಯ ಬೇಟೆಯ ವರ್ಣನೆಯನ್ನು ಇಲ್ಲಿ ಆರಿಸಿಕೊಟ್ಟದೆ. ]

ಮೂಡಣ ಕಡಲ ಮೊದಲ್ಗೊಂಡು ಪಡುವಣ ಕಡಲ ಪರ್ಯಂತರ ಹಬ್ಬಿದಂಥ ವಿಂಧ್ಯಾಟವಿಯೆಂಬದೊಂದು ದೊಡ್ಡ ಅರಣ್ಯವದೆ. ಅದರೊಳಗೆ ಹಿಂಡುಗಟ್ಟಿ ತಿರುಗುತ್ತಿರುವ ಸಾವಿರಾರು ಕಾಡಾನೆಗಳ ಮದೋದಕ ಬಿದ್ದು ಯಾವಾಗಲೂ ನೆಲವು ನೆನೆಯುವದರಿಂದ ಅಲ್ಲಿಯ ಮರಗಳು ಬಹು ಎತ್ತರವಾಗಿ ಬೆಳೆದು ಮುಗಿಲಿಗೆ ಮುದ್ದುಕೊಡುತ್ತವೆ. ಅವುಗಳ ತುದಿಯ ಮೇಲಿನ ಹೂವುಗಳು ಆಕಾಶದೊಳಗಿನ ತಾರೆಗಳಂತೆ ಒಪ್ಪುವವು. ಆ ಕಾನನದೊಳಗೆ ಹುಲಿ, ಕರಡಿ, ಸಿಂಹ ಮುಂತಾದ ಕ್ರೂರ ಮೃಗಗಳ ಧ್ವನಿಗಳು ಯಾವಾಗಲೂ ಕಿವಿಗೆ ಬೀಳುತ್ತವೆ; ಅದರೊಳಗಿನ ಮರಿಆನೆಗಳು ಸೊಂಡಿಲು ಹಾಕಿ ಎಳೆದೆಳೆದು ಉದುರಿಸಿದ ತಮಾಲ ತಳಿರುಗಳ ತನಿಗಂಪು, ಕಡಿವಡೆದ ಚಂದನವೃಕ್ಷಗಳ ಇನಿಗಂಪು, ಓಡಾಡುವ ಕಸ್ತೂರೀಮೃಗ, ಪುನಗಿನ ಬೆಕ್ಕುಗಳ ಮೈಗಂಪು ಒಟ್ಟುಗೂಡಿ ವನವೆಲ್ಲ ಘಮುಘಮಿಸುತ್ತದೆ. ಅಲ್ಲಲ್ಲಿಗೆ ತೆಂಗು, ಅಡಿಕೆ, ಮಾವು ಮುಂತಾದ ಮರಗಳೂ ಕೇದಗಿ ಬಾಳೆಗಳ ಬನಗಳೂ ಎಲೆಯಾಲಕ್ಕಿಗಳ ತೋಟಗಳೂ ಬಿದುರು ಬೆತ್ತಗಳೂ ಒಪ್ಪುವವು. ದಣಿದುಬಂದ ದಾರಿಕಾರರಿಗೆ ಕುಳಿತುಕೊಳ್ಳುವದಕ್ಕೆ ಅಲ್ಲಲ್ಲಿಗೆ ಹಾಸಿದ ಲವಂಗಲತೆಗಳ ಎಳೆದಳಿರುಗಳ ಮಲ್ಲಿಗೆಯ ಮಂಟಪಗಳೂ ಶೋಭಿಸುತ್ತವೆ. ಕೆಲವೆಡೆಯಲ್ಲಿ ಕೋಗಿಲೆಗಳ ಪಂಚಮಸ್ವರವೂ ಕೆಲವೆಡೆಯಲ್ಲಿ ತಾಳವೃಕ್ಷಗಳ ಫಲಗಳ ತೂತಿನೊಳಗೆ ಗಾಳಿಹೋಗುವದರಿಂದ ಉಂಟಾಗುವ ಮಂಜುಳ ಧ್ವನಿಗಳೂ ಕೇಳಬರುತ್ತವೆ. ಅಲ್ಲಲ್ಲಿಗೆ ನೀರಿನ ಝರಿಗಳು ಹರಿಯುತ್ತವೆ. ಮಂಗಗಳು ಮರಗಳ ಟೊಂಗೆಗಳನ್ನು ಮುರಿಮುರಿದು ಚೆಲ್ಲಿ, ಇತ್ತಿಂದತ್ತ ಅತ್ತಿಂದಿತ್ತ ಹಾರಾಡುತ್ತವೆ.

ಈ ಮೇರೆಗೆ ಮನಸ್ಸಿಗೆ ಸೊಗಸಾದ ವಿಂಧ್ಯಾಟವಿಯೊಳಗೆ ದಂಡಕಾರಣ್ಯವೆಂಬದೊಂದು ಪ್ರದೇಶವದೆ. ಅದರ ಮೇರೆಯ ಮೇಲೆ ಸಕಲ ಲೋಕ ಪ್ರಖ್ಯಾತನಾದ ಅಗಸ್ತ್ಯಋಷಿಯ ಆಶ್ರಮವುಂಟು. ಈ ಅಗಸ್ತ್ಯಾಶ್ರಮದ ಹತ್ತಿರವೇ ಪಂಪಾಸರೋವರವುಂಟು. ಆ ಸರೋವರದ ಪಡುವಣ ಪ್ರದೇಶದಲ್ಲಿ, ರಘುವರನ ಕೂರಂಬುಗಳ ಹೊಡತಕ್ಕೆ ಕಡಿವಡೆದ ಸಪ್ತತಾಳವೃಕ್ಷಗಳ ನೆರೆಯಲ್ಲಿಯೇ ಒಂದು ಬಹುಕಾಲದ

ದೊಡ್ಡ ಶಾಲ್ಮಲೀವೃಕ್ಷ ( ಬೂರಲ ಮರ ) ವದೆ. ಆ ಗಿಡದ ಬುಡಕ್ಕೆ ಒಂದು ದೊಡ್ಡ ಮುದಿಹೆಬ್ಬಾವು ಸುತ್ತುಹಾಕಿಕೊಂಡಿರುವದರಿಂದ ಕಟ್ಟೆಯು ಕಟ್ಟಿದಂತೆ ಕಾಣುತ್ತಿರುವದು. ಆ ಮರದ ಟೊಂಗೆಗಳು ಬಹು ವಿಸ್ತಾರವಾಗಿ ಗಗನಮಂಡಲದಲ್ಲೆಲ್ಲ ಪಸರಿಸಿರುವದರಿಂದ ಅದು ತನ್ನ ಮಾರುಹಾಕಿ ದಿಕ್ಕುಗಳನ್ನು ಅಳೆಯುತ್ತಿರುವದ್ದೋ ಏನೋ ಅನ್ನುವಂತೆ ತೋರುತ್ತಿರುವದು. ಅದರ ಟೊಂಗೆಗಳ ಮೇಲೆ ಲೆಕ್ಕ-ವಿಲ್ಲದಷ್ಟು ಹಾವಿನ ಪರೆಗಳು ಜೋತಾಡುತ್ತಿರುವದರಿಂದ ಅದು ಸೂಕ್ಷ್ಮವಾದ ಬಿಳಿಯ ಶೆಲ್ಲೆಯನ್ನು ಮೈಮೇಲೆ ಹೊತ್ತುಕೊಂಡಂತೆ ಒಪ್ಪುತ್ತಿರುವದು. ಆ ಗಿಡದ ಬುಡದಿಂದ ತುದಿತನಕ ಸಾವಿರಾರು ಬಳ್ಳಿಗಳು ಹಬ್ಬಿರುವದರಿಂದ ಮುಪ್ಪಿನಕಾಲಕ್ಕೆ ಅದರ ಮೈಮೇಲಿನ ನರಗಳು ಎದ್ದಂತೆ ಕಾಣುತ್ತಿರುವವು. ಅದರ ಮುಳ್ಳುಗಳು ಮೈತುಂಬ ಎದ್ದ ನರವುಲಿಗಳಂತೆ ತೋರುತ್ತಿರುವವು. ಅದರ ತುದಿಯ ನೇಲಿನ ಅರಳೆಯು ನರೆಗೂದಲುಗಳಂತೆ ಒಪ್ಪುವದು.

ಒಂದುದಿನ ಮುಂಜಾವಿನಲ್ಲಿ ಎಂಟೂ ದಿಕ್ಕುಗಳು ಸ್ವಚ್ಛವಾಗಿಯೂ ವಿಸ್ತೀರ್ಣವಾಗಿಯೂ ತೋರಹತ್ತಿದವು. ಎಳೆಬಿಸಿಲು ಬಿದ್ದದರಿಂದ ಕಾನನದೊಳಗಿನ ಗಿಡಗಳ ಮೇಲಿನ ಹೂವುಗಳು ಚೆಂದವಾಗಿ ಕಾಣು-ತ್ತಿದ್ದವು. ಆ ಹೂವುಗಳ ಮೇಲೆಯೂ ಕೊಳದೊಳಗಿನ ತಾವರೆಗಳ ಮೇಲೆಯೂ ತುಂಬಿಗಳೆರಗಿ ಝೇಂಕಾರಸ್ವರ ಮಾಡಹತ್ತಿದವು. ನವಿಲು-ಗಳೆದ್ದು ಆಡಲನುವಾದವು. ಸಿಂಹಗಳು ಆಕಳಿಸಹತ್ತಿದವು. ಮಲಗಿದ ಘದೋನ್ಮತ್ತವಾದ ಆನೆಗಳನ್ನು ಹೆಣ್ಣಾನೆಗಳು ಎಬ್ಬಿಸಹತ್ತಿದವು. ಇರುಳು ಅರಳಿದ ಹೂವುಗಳು ಮುಂಜಾವಿನ ಮಂಜಿನ ಹನಿಗಳ ಭಾರ-ದಿಂದ ನೆಲಕ್ಕುರುಳಿದವು. ಋಷಿಗಳ ತಪೋವನದೊಳಗಿನ ಹೋಮ-ಧೂಮವು ಮೇಲಕ್ಕೆದ್ದಿತು. ಮಂಜಿನ ಹನಿಗೂಡಿ ತಂಪಾದಂಥ, ತಾವರೆಗೊಳದ ಮೇಲೆ ಹಾದು ಕಂಪಾದಂಥ ಮುಂಜಾವಿನ ಮಂದ-ಮಾರುತವು ಸುಳಿಯಹತ್ತಿತು. ಪಕ್ಷಿಗಳು ಆನಂದದಿಂದ ಆಕಾಶ-ದೊಳಗೆ ಹಾರಾಡತೊಡಗಿದವು. ಎರಳೆಯ ಹಿಂಡುಗಳು ಸ್ವೇಚ್ಛೆಯಿಂದ ತಿರುಗಹತ್ತಿದವು. ಪಂಪಾಸರೋವರದ ದಂಡೆಯ ಮೇಲಿದ ಚಕೋರ,

ಚಕ್ರವಾಕ, ಮರಾಳ ಪಕ್ಷಿಗಳು ಕಿಲಿಕಿಲಿಸಹತ್ತಿದವು. ಅಷ್ಟರೊಳಗೆ ಒಂದು ತಾಸು ಹೊತ್ತು ಏರಿತು. ಆಗ ಒಮ್ಮಿಂದೊಮ್ಮೆಲೆ ಆ ಕಾನನದೊಳಗೆ ಬೇಟೆಯಾಡಬಂದ ಭಿಲ್ಲರ ಕೋಲಾಹಲಧ್ವನಿಯು ನನ್ನ ಕಿವಿಗೆ ಬಿತ್ತು.

ಅದನ್ನು ಕೇಳಿದ ಕೂಡಲೆ ಯಾವತ್ತು ಕಾಡುಮೃಗಗಳು ಹೌಹಾರಿ ಕಾಲ್ದೆಗೆಯಲಾರಂಭಿಸಿದವು. ಆನೆಯ ಮರಿಗಳು ಅಂಜಿ ಘೀಳಿಡುತ್ತ ಓಡಿದವು. ಕಾಡಹಂದಿಗಳು ಮುಸುಗುಟ್ಟುತ್ತ ಮುಂದೆಮರಿದವು. ಕಾಡಕೋಣಗಳು ಕೊಂಯಿಕಿಡುತ್ತ ಓಡಿದವು. ಗವಿಯೊಳಗಿನ ಮಲಗಿದ ಸಿಂಹಗಳು ಗರ್ಜಿಸಿದವು. ಅಂಥ ಆರ್ಭಟವನ್ನು ನಾನು ಎಂದೂ ಕೇಳಿದ್ದಿಲ್ಲ. ನನ್ನ ಕಿವಿಗಳು ಗಡಿದುಹಾಕಿದವು. ನನ್ನ ಎದೆ ಒಡೆದು ಮೈಯೊಳಗೆ ನಡುಗು ಹುಟ್ಟಿ, ಅಂಜಿ ತಂದೆಯ ಮಗ್ಗಲೊಳಗೆ ಹೊಕ್ಕು ಅಡಗಿಕೊಂಡೆನು.

ನಾನು ಕಿವಿಗೊಟ್ಟು ಕೇಳುವಾಗ ಆ ಬೇಟೆಗಾರರು ತಮ್ಮತಮ್ಮೊಳಗೆ, "ಎಲೆಲೆ ಇಲ್ಲಿ ನೋಡು ! ಕಾಡಾನೆಗಳು ಮುರಿದ ಹಾಲುಮಡ್ಡಿಯ ಧೂಪದ ಗಿಡಗಳು ಎಷ್ಟು ನಾರುತ್ತವೆ ! ಇಲ್ಲಿ ನೋಡು ! ಮರಿಯಾನೆಗಳು ತುಳಿತುಳಿದು ಚೆಲ್ಲಿದ ತಂಗೊಳದೊಳಗಿನ ತಾವರೆಗಳ ಸುವಾಸನೆ ಎಷ್ಟು ಘಮಘಮಿಸುತ್ತದೆ ! ಅತ್ತ ನೋಡು ! ಕಾಡಕೋಣಗಳು ಕೋಡುಗಳಿಂದ ಚಿಮ್ಮಿ ಚಿಮ್ಮಿ ಹಾರಿಸಿದ ಹುತ್ತಿನ ಕೆಂಧೂಳವೇಳುತ್ತದೆ! ಇಲ್ಲಿ ನೋಡು ! ಮೆಲಕಾಡಿಸುವಾಗ ಎರಳೆಗಳ ಬಾಯೊಳಗಿನ ಬುರುಗೆಷ್ಟು ಬಿದ್ದದೆ ! ಅಲ್ಲಿ ಕಾಡುಮಿಕಗಳು ಕೋರೆಗಳಿಂದ ಅಗಿದು ತಿಂದು ತಿಂದು ಚೆಲ್ಲಿದ ಜೇಕಿನ ಗಡ್ಡೆಗಳೂ ಬಾಳದ ಬೇರುಗಳೂ ಎಷ್ಟು ಬಿದ್ದಿವೆ ! ನೋಡಿರಿ ! ಅಲ್ಲಿ ಕಾಡೆಮ್ಮೆಗಳು ತಿಕ್ಕಿದ ರಾಯನೆಲ್ಲಿಯ ಗಿಡದ ತೊಗಟೆಯ ಬಾಸ ಬರುತ್ತದೆ. ಅದೇ ಅಲ್ಲಿ ಚಿಗುರೆಗಳು ಓಡುತ್ತವೆ. ಅತ್ತ ಕಡೆ ಕಾಡಹಂದಿಗಳು ಕೆಸರೊಳಗಿಂದ ಹೊರಬಿದ್ದವು. ಆಚೆಯ ಕಡೆ ನವಿಲುಗಳು ಇದ್ದ ಹಾಗೆ ತೋರುತ್ತದೆ. ಸುಮ್ಮನೆ ಯಾಕೆ ನೋಡುತ್ತೀರಿ ? ಹೊರಗಿಂದ ಹೋಗಿ ಕಣಿವೆಯ ಬಾಯಿಗೆ ದಾರಿ ಕಟ್ಟಿಕೊಂಡು ನಿಲ್ಲಿರಿ. ಗುಡ್ಡದ ಓರೆಯ ಹಿಡಿದು ಅಡ್ಡಾಡಿರಿ. ಮರವೇರಿ

ನೋಡಿರಿ. ಕೊರಳ ಕುಣಿಕೆಯ ಉಚ್ಚಿ ನಾಯಿಗಳನ್ನು ಬಿಡು. ಕವಣಿಯ ಹೊಡೆ. ಕಲ್ಲು ಒಗೆ. ಬಿಲ್ಲೇರಿಸು. ಬಾಣವ ಹೂಡು. ಕೋಲು ತಿವಿ. ಬಲೆ ಹಾಕು. ನೊಲ ಹೊಡೆ. ಕೊಲ್ಲಿಲೆ ಕೊಲ್ಲು. ಕಡಿಯಲೆ ಕಡಿ. ಕಾಲಗ್ಯಾರೀ ಹಿಡಿದು ಎಳೆ," ಎಂದು ಒದರಾಡುವ ಬೇಟೆಗಾರರ ಅಬ್ಬರವು ಅರಣ್ಯವನ್ನೆಲ್ಲ ತುಂಬಿತು. ಎತ್ತ ನೋಡಿದರೂ ಗೊಂದಲವೇ ಮುಸುಕಿತು. ಬೇಟೆಗಾರರಿಗೆ ಅಂಜಿ ಸಿಂಹಗಳು ಗರ್ಜಿಸುತ್ತ ಹಿಂದಕ್ಕೆ ಓಡಿದವು, ಎಳೆಗರುಗಳು ಅಂಜಿ ಎತ್ತ ತಪ್ಪಿಸಿಕೊಂಡು ಹೋದವೋ ಎಂದು ಕಾಡಾಕಳುಗಳು ಅಂಬಾ ಎಂದು ಒದರುತ್ತ ಅವುಗಳನ್ನು ಹುಡುಕಹತ್ತಿದವು. ಸಾವಿಗಂಜಿ ಸಾವಿರಾರು ಪಕ್ಷಿಗಳು ಆ ಮರದಿಂದ ಈ ಮರಕ್ಕೆ ಈ ಮರದಿಂದ ಆ ಮರಕ್ಕೆ ಹಾರಾಡುತ್ತ ಕಿಲಿಕಿಲಿಸಹತ್ತಿ-ದವು. ಅಷ್ಟರೊಳಗೆ, ಬಿಲ್ಲಾಳುಗಳು ಹೆದೆಯನ್ನು ಕಿವಿವರೆಗೆ ಜಗ್ಗಿ ಜಗ್ಗಿ ಅಂಬುಗಳನ್ನು ಎಸೆಯುವಾಗ ಬಿಲ್ಲುಗಳಿಂದುಂಟಾದ ಟಣತ್ಕಾರವೂ ಕಡುಗಲಿಗಳು ಎಡೆಬಿಡದೆ ಎದೆಮಾಡಿ ಕಡಿಯುವಾಗ ಕಾಡಕೋಣಗಳ ಕೋಡುಗಳಿಗೆ ತಾಕಿದ ಖಡ್ಗಗಳ ಖಣಖಣಾಟವೂ ಬೆದರಿ ಕಂಡಕಡೆಗೆ ಓಡುವ ಗಂಡೆರಳೆಗಳ ಬೆನ್ನ ಹತ್ತಿದ ಬೇಟೆಯ ನಾಯಿಗಳ ಬೊಗಳಾಟವೂ ಹಿಡಿ ಹಿಡೀರಿ, ಹೊಡಿ ಹೊಡೀರಿ ಎಂಬ ಕುಲ್ಲ ಭಿಲ್ಲರ ಗುಲ್ಲುಗಳೂ ಒಬ್ಬುಳಿಗೂಡಿ ತುಂಬಿದ್ದದರಿಂದಂತೂ ಬಿರುಗಾಳಿ ಬಿಟ್ಟಾಗ ಕಡಲು ಭೋರ್ಗರೆಯುವಂತೆ ಕಾನನವೆಲ್ಲ ಪ್ರಧ್ವನಿಗೊಂಡಿರುವದು.

—ಗಂ. ಮ. ಶುರವುಠಿ.

**೧. ವಿಂಧ್ಯಾಟವಿಯಲ್ಲಿ ಯಾವ ಯಾವ ಗಿಡಮರಗಳಿದ್ದವು? ೨. ದಾರಿಕಾರರಿಗೆ ಸೊಗಸನ್ನುಂಟುಮಾಡುವ ಯಾವ ಯಾವ ಸಾಧನಗಳು ಅಲ್ಲಿದ್ದವು? ೩. ಅಲ್ಲಿ ಯಾವ ಮೃಗಗಳು ಮನೆಮಾಡಿಕೊಂಡಿದ್ದವು? ೪. ಬೇಟೆಗಾರರು ಬಂದಮೇಲೆ ಉಂಟಾದ ಬೇರೆ ಬೇರೆ ಸಪ್ಪುಳಗಳನ್ನು ಹುಡುಕಿ ಹೇಳಿರಿ.**

# ೨೨. ಸರೋಜಿನೀದೇವಿ

**[ ಹಿಂದುಸ್ತಾನದಲ್ಲಿ ಈಗ ಸಾಹಿತ್ಯ, ರಾಜಕರಣಗಳಲ್ಲಿ ಪ್ರಸಿದ್ಧರಾದ ಸರೋಜಿನೀದೇವಿಯುವರ ವ್ಯಕ್ತಿಚಿತ್ರವಿದು. ವ್ಯಕ್ತಿಯ ಜೀವನ ಚರಿತ್ರೆಯನ್ನು ಕೊಡುವದಕ್ಕಿಂತ ವ್ಯಕ್ತಿಯ ವೈಶಿಷ್ಟ್ಯಗಳನ್ನು ಕೊಡುವ ಲೇಖನ ಪ್ರಕಾರಕ್ಕೆ ವ್ಯಕ್ತಿಚಿತ್ರವೆಂದು ಹೆಸರು. ಇದನ್ನು ಸಿದ್ದವನಹಳ್ಳಿ ಕೃಷ್ಣಶರ್ಮರ ದೀಪಮಾಲೆಯಿಂದ ಆಯ್ದಿದೆ. ಲೇಖಕರ ಪರಿಚಯವನ್ನು ೫ನೆಯ ಪುಸ್ತಕದ ೩೬ನೆಯ ಪಾಠದಲ್ಲಿ ಓದಿರುವಿರಿ. ]**

೧

ಸರೋಜಿನೀದೇವಿ ಭಾರತ ಕಾವ್ಯಾಂಬರದ ಬೆಳುದಿಂಗಳು; ಹಿಂದುಸ್ತಾನದ ಕವಿಚೂತವನ ಕೋಕಿಲೆ. ಆಕೆಯ ವಾಣಿ ವೇಣುಗಾನ, ಭಾಷಣ ರಸಗಂಗೆ. ಆಕೆಯ ಜೀವನ ನಿರಂತರ ಸೌಂದರ್ಯೋಪಾಸನೆ.

ಇನ್ನೂ ಹದಿಮೂರು ವರುಷದ ಹುಡುಗಿಯಾಗಿರುವಾಗಲೇ ಸರೋಜಿನಿ ಕಾವ್ಯಪ್ರಪಂಚದಲ್ಲಿ ಕಾಲಿಟ್ಟಳು. ಆಗಲೇ ಆಕೆಯ ಕಾವ್ಯಾಂಕುರ. ಅಂದಿನಿಂದ ಆ ಲೋಕದಲ್ಲಿ ಸಾಮ್ರಾಜ್ಞಿಯಂತೆ ವಿಹರಿಸುತ್ತಿದಾಳೆ. ಆಕೆ ಆಡಿದ ಯಾವ ಮಾತೂ ಮಾಡಿದ ಯಾವ ಕೆಲಸವೂ ಕಾವ್ಯಮಯವಾಗದೆ ಇಲ್ಲ. ಆಕೆಯ ರಸವತ್ತಾದ ಉದ್ವೇಗಪೂರ್ಣವಾದ ಭಾಷಣಗಳನ್ನು ಕೇಳಿದವರದೇ ಪುಣ್ಯ. ಎಂಥ ಶುಷ್ಕೋಪಚಾರದ ಸಾಮಾನ್ಯ ಭಾಷಣವೂ ಕೂಡ ರೂಪುಗೊಂಡು ನಿಲ್ಲುತ್ತದೆ, ಕೇಳುವವರ ಇದಿರಿನಲ್ಲಿ. ಅದೊಂದು ಕಿನ್ನರೀಗಾನ, ಅಪ್ಸರಾವಿಲಾಸ. ಸರೋಜಿನಿ ಒಮ್ಮೆ ಜಾಯಿಂಟ್ ಸಿಲೆಕ್ಟ್ ಕಮಿಟಿಯ ಮುಂದೆ ಸಾಕ್ಷ್ಯ ನುಡಿದಳು, ರಾಜಕೀಯ ಸಮಸ್ಯೆಗಳ ವಿಷಯದಲ್ಲಿ. ಆ ಸಮಿತಿಯ ಅಧ್ಯಕ್ಷ ಆಕೆಯ ಸಾಕ್ಷ್ಯದ ಬಗ್ಗೆ ಹೀಗೆ ಬರೆದ: " ನಮ್ಮ ನೀರಸವಾದ ಗದ್ಯಮಯವಾದ ಸಾಹಿತ್ಯಕ್ಕೆ ಅದು ರಸಮಯವಾದ ಕಾವ್ಯದ ಬಣ್ಣವನ್ನು ಕೊಟ್ಟಿತು. "

ಸರೋಜಿನಿಯ ಕವಿತೆ ಇಂಗ್ಲಿಷಿನಲ್ಲಿದೆ. ಇಂಗ್ಲಿಷಿನಲ್ಲಿ ಕವಿತೆ ಮಾಡಿ ಹೆಸರು ಗಳಿಸಿದ ಆಂಗ್ಲೇತರರು— ಅದರಲ್ಲೂ ಭಾರತೀಯರು—

ಬಹಳ ಕಡಮೆ. ಆಕೆಯ 'ಸ್ವರ್ಣದೇಹಳಿ', 'ಭಗ್ನಪಕ್ಷಗಳು' ಇಂಗ್ಲಿಷಿನ ಜನವನ್ನು ತಲೆದೂಗಿಸಿದವು. ಇಂಗ್ಲಿಷರ ಸಹಜಮಧುರವಾದ ಇಂಗ್ಲಿಷಿಗಿಂತ ಸವಿ ಸರೋಜಿನಿಯ ಕವನ. ಪರಕೀಯರ ಕವಿತಾಸಂಗ್ರಹಗಳನ್ನು ಪ್ರಕಟಿಸುವುದು ಇಂಗ್ಲಿಷು ಪ್ರಕಟನಾಲಯಗಳಿಗೆ ರೂಢಿಯಿಲ್ಲ. ಅವು ಈ ಗೌರವಕ್ಕೆ ತಕ್ಕವಲ್ಲವೆಂದು ಅವರ ಅಭಿಪ್ರಾಯ. ಸರೋಜಿನಿಯ ಕವನಗಳು ಈ ರೂಢಿಗೆ ಅಪವಾದವಾದವು. ಇಂದಿಗೂ ಇಂಗ್ಲೆಂಡಿನಲ್ಲಿ



ಕವನಸಂಗ್ರಹಗಳನ್ನು ಪ್ರಕಟಿಸಿದ ಆಂಗ್ಲೇತರರು ಬಹಳ ಕಡಮೆ, ಒಬ್ಬರೋ ಇಬ್ಬರೋ. ಅಷ್ಟೇ ಅಲ್ಲ; ಆಕೆಯ 'ಸ್ವರ್ಣದೇಹಳಿ'ಗೆ ಸುಪ್ರಸಿದ್ಧ ವಿಮರ್ಶಕ ಚಕ್ರವರ್ತಿಯಾದ ಆರ್ಥರ್ ಸೈಮನ್ಸ್ ಪೀಠಿಕೆಯನ್ನು ಬರೆದಿದಾನೆ. 'ಈಕೆಯ ಚೆಲುವಿನ ಹಸಿವೇ, ಸೌಂದರ್ಯೋಪಾಸನೆಯೇ ಆಕೆಯನ್ನು ಕಾವ್ಯಪಥಕ್ಕೆ ಎಳೆದಿವೆ. ಸೂರ್ಯಕಾಂತಿಯ ಹೂ ಸೂರ್ಯನ ಕಡೆ ತಿರುಗುವಂತೆ ಈಕೆಯ ಕಣ್ಣು ಸೌಂದರ್ಯದ ಕಡೆಗೆ ಹರಿದೋಡುತ್ತದೆ,' ಎಂದು ಆತ ಆ ಪೀಠಿಕೆಯಲ್ಲಿ ಹೇಳಿದಾನೆ.

೧೩ — ೨೬೦೩

ಈ ಸೌಂದರ್ಯೋಪಾಸನೆಯೇ, ಚೆಲುವು-ನಲವುಗಳ ಪೂಜೆಯೇ ಸರೋಜಿನೀದೇವಿಯ ಜೀವನ ರಹಸ್ಯ, ಗೆಲವಿನ ಗುಟ್ಟು. ಅದೇ ಆಕೆಯ ಜೀವನ ಸಂಗೀತದ ಶ್ರುತಿ.

ಆಕೆಯ ಜೀವನದ ಎಲ್ಲ ರಂಗಗಳಲ್ಲೂ ಈ ಶ್ರುತಿ ಸ್ಪಷ್ಟವಾಗಿಯೋ ನೇಪಥ್ಯದಲ್ಲೋ ಕೇಳಬರುತ್ತದೆ. ಸ್ವದೇಶೀ-ಖಾದೀತತ್ವ ಆಕೆಗೆ ಒಪ್ಪಿಗೆಯಿದ್ದರೂ ಒರಟು ಗೋಣಿತಟ್ಟು ಆಕೆಗೆ ಸಹಿಸದು. ಆಕೆ ಕೈನೂಲನ್ನೇ ಉಪಯೋಗಿಸಿಯಾಳು; ಆದರೆ ರೇಶಿಮೆಯನ್ನೇ ಉಟ್ಟಾಳು. ಹೈದರಾಬಾದಿನಲ್ಲಿ ಆಕೆಯ ಮನೆಯಿದ್ದರೂ ಹಿಂದು-ಸ್ತಾನದ ಮೊದಲ ಪಟ್ಟಣವಾದ ಮುಂಬಯಿಯಲ್ಲಿ ಆಕೆಯ ವಾಸ; ಮುಂಬಯಿಯಲ್ಲೂ ತಾಜಮಹಾಲು ಹೋಟೆಲಿನಲ್ಲಿ. ಮುಂಬಯಿಯ ತಾಜಮಹಾಲೆಂದರೆ ಇಂದ್ರಭವನ! ಸತ್ಯಾಗ್ರಹ ಚಳುವಳಿಯಲ್ಲಿ ಆಕೆ ಜೈಲಿಗೂ ಹೋಗಿದ್ದಳು. ಆಗ ಆ ಜೈಲಿನ ಅಂಗಳದಲ್ಲೇ ಸೂರ್ಯಕಾಂತಿ ಹೂಗಳನ್ನು ಪಾತಿಮಾಡಿ ನೀರು ಹಾಕಿ ಬೆಳೆಸುತ್ತಿದ್ದಳಂತೆ. ಆ ಬೀಳು ನೆಲ ಮೋರೆ ಸಿಡಿಸಿಕೊಂಡು ನಿಂತಿರುವುದು ಆಕೆಗೆ ಸಹಿಸಲಿಲ್ಲ. ಹೂವನ್ನಾದರೂ ಬೆಳೆದು ಅಲ್ಲಿ ಆನಂದ ನಗೆಗಳನ್ನು ಹರಿಯಿಸಬೇಕು. ಸರೋಜಿನಿಯ ಮನೆಯ ಹೆಸರೂ ಮುದ್ದಾಗಿದೆ; 'ಸ್ವರ್ಣದೇಹಳಿ.' ಮನೆಯಲ್ಲಿ ಕಮನೀಯವಾದ ಚಿಕ್ಕ ಕೈದೋಟವಿದೆ. ಪೌಳಿಯನ್ನು ದಾಟಿ ಒಳಗೆ ಹೋದರೆ ವನಶ್ರೀಯೇ ಆಡುತಿರುವಳೆಂದು ಅನಿಸುತ್ತದೆ. ಲತಾಕುಂಜವನ್ನು ದಾಟಿದರೆ ಒಳಗೆ ದಿವಾಣಖಾನೆಯಲ್ಲಿ ವಿವಿಧ ವರ್ಣ-ಸಮ್ಮೇಳನದ ಸೊಬಗು. ನೆಲಕ್ಕೆ ಶ್ರೇಷ್ಠವಾದ ಪರ್ಸಿಯನ್ ಜಂಖಾನೆ-ಗಳು; ಅದರ ಮೇಲೆ ಬೇರೆ ಬೇರೆ ಪ್ರಾಣಿಗಳ ನಯವಾದ ಚರ್ಮಗಳು; ನಡುವೆ ವಿವಿಧಾಕೃತಿಗಳ ಸುಖಾಸನಗಳು. ಇದಿರಿಗೆ ಪದ್ಮಾಸನ ಸ್ಥಿತನಾದ ಪ್ರಶಾಂತವದನದ ಬುದ್ಧದೇವನ ದಿವ್ಯಮೂರ್ತಿ.

ಸರೋಜಿನೀದೇವಿಯ ಮನೆಯಲ್ಲಿ ಪತ್ರವ್ಯವಹಾರಕ್ಕಾಗಿ ಅಂದ-ವಾದ ಕೈತಯಾರಿಯ ಕರಡುಕಾಗದ ಲಕೋಟೆಗಳನ್ನು ಉಪಯೋಗಿಸು-ತ್ತಾರೆ. ಹಿಂದುಸ್ತಾನದ ಆರ್ಥಿಕ ಪುನರುಜ್ಜೀವನದ ಪರಮೋಪಾಯವಾದ

ಖಾದಿಯ ಮೇಲೆ ಆಕೆಯ ಒಲವು ಬಹಳ; ಗಾಂಧೀಜಿಗೇನು ಕಡಮೆ-ಯಿಲ್ಲ ಅದರಲ್ಲಿ. ಆದರೆ ಆಕೆಯ ನೋಟ ಆರ್ಥಿಕವಲ್ಲ; ಗೃಹಪರಿಶ್ರಮ-ದಿಂದ ಹಳ್ಳಿಯ ಕೈಗಾರಿಕೆಯಿಂದ ಹಿಂದುಸ್ತಾನದ ಬೊಕ್ಕಸ ತುಂಬೀತೆಂಬ ಯೋಚನೆ ಆಕೆಯದಲ್ಲ. ಅದರಿಂದ ಭಾರತದ ಕಲಾಕೌಶಲ್ಯದ ಪುನ-ರುಜ್ಜೀವನವಾಗುತ್ತದೆ; ಅದರಲ್ಲಿ ರಾಟೆಯ ಶ್ರಾವ್ಯಗಾನ ಕೇಳಿಸುತ್ತದೆ. ಗಾಂಧೀ ಜವಾಹರಲಾಲರಿಗಿದ್ದಷ್ಟೇ ಶ್ರದ್ಧೆಯಿದೆ, ಹಿಂದೂ ಮುಸ್ಲಿಮ ಸೌಭ್ರಾತ್ರತ್ವದಲ್ಲಿ ಸರೋಜಿನಿಗೆ. ಅದು ಜವಾಹರಲಾಲರ ರಾಜಕೀಯ ಆದರ್ಶವೂ ಅಲ್ಲ; ಗಾಂಧೀಜಿಯ ನೀತಿಧರ್ಮದ ವಿಶ್ವಾಸವೂ ಅಲ್ಲ. ಸ್ತ್ರೀಸಹಜವಾದ ಸಮರಸ ಜೀವನದ ಹಂಬಲದಿಂದ ಹುಟ್ಟಿದ ನಂಬಿಗೆ ಅದು.

## ೨೩. ಸರೋಜಿನೀದೇವಿ

### ೨

ಮೊಳಕೆಯಲ್ಲೇ ಗುಣ ತಿಳಿಯುತ್ತದೆ. ಎಳೆತನದಿಂದಲೂ ಸರೋಜಿನಿ ಬಹು ಚುರುಕು. ೧೨ ವರ್ಷಕ್ಕೇ ಆಕೆ ಮ್ಯಾಟ್ರಿಕ್ ಪರೀಕ್ಷೆ-ಯಲ್ಲಿ ತೇರ್ಗಡೆಯಾದಳು; ಮುಂದೆ ವಿಲಾಯತಿಯಲ್ಲಿ ಓದಿದಳು. ವಿಲಾಯತಿಯಲ್ಲಿ ತನ್ನ ಕವಿತೆಯಿಂದ ಜನರನ್ನು ಮುಗ್ಧಗೊಳಿಸಿ ಪ್ರಾಚೀ-ಕೋಕಿಲ ಎನಿಸಿಕೊಂಡಳು. ಗಾಂಧೀಜಿ, ರವೀಂದ್ರ, ಜವಾಹರಲಾಲ-ರಿಗಿದ್ದಷ್ಟೇ ಜಗದ್ವಿಖ್ಯಾತಿಯಿದೆ ಆಕೆಗೆ. ಅಮೇರಿಕಾ, ಆಫ್ರಿಕಾ, ಯುರೋಪು ಖಂಡಗಳಲ್ಲಿ ಭಾರತದ ಸಂದೇಶವನ್ನು ತನ್ನದೇ ಆದ ರೀತಿ-ಯಲ್ಲಿ ಬೀರಿದಾಳೆ. ದಕ್ಷಿಣ ಆಫ್ರಿಕದಲ್ಲಿ ಹಿಂದೀಯರ ಸ್ಥಿತಿ ಬಹಳ ಶೋಚನೀಯವಾಗಿತ್ತು. ಬಿಳಿಯ ಯುರೋಪಿಯನ್ನರಿಗೆ ಕಪ್ಪುಬಣ್ಣದ ಹಿಂದೀಯರನ್ನು ಅಲ್ಲಿ ನಿರ್ನಾಮಮಾಡುವ ಹಂಬಲ. ಸರೋಜಿನಿ ಆಫ್ರಿಕಕ್ಕೆ ಭಾರತದ ರಾಯಭಾರಿಯಂತೆ ಹೋಗಿ ನಮ್ಮವರಿಗೆ ಬೆಂಬಲ-ಕೊಟ್ಟು ಧೈರ್ಯ ವಿಶ್ವಾಸಗಳನ್ನು ತುಂಬಿದಳು.

ವಿಲಾಯತಿಯಿಂದ ಬಂದೊಡನೆ ಹಿಂದುಸ್ತಾನದಲ್ಲಿ ಆಕೆಯ ಮನಸ್ಸನ್ನು ಕರಗಿಸಿದುದು ಭಾರತ ಸ್ತ್ರೀಯರ ದೈನ್ಯಾವಸ್ಥೆ. "ಹೆಂಗಸೆಂದರೆ ಹಣಸೊತ್ತು; ಗಂಡಸಿನ ಸುಖಭೋಗದ ಸಾಮಗ್ರಿ-ಸಾಧನೆ. ಅವಳಿಗೆ ಸ್ವಲ್ಪ ಸ್ವಾತಂತ್ರ್ಯಕೊಟ್ಟರೆ ಸಾಕು, ಪ್ರಳಯವೇ ಆದೀತು. ನಾರಿ ಮಾರಿ; ಎಲ್ಲ ಅನರ್ಥಕ್ಕೂ ಕಾಂಚನದಂತೆ ಕಾಮಿನಿಯೂ ಮೂಲ." ವಿಚಾರದಲ್ಲೂ ಆಚಾರದಲ್ಲೂ ಹಿಂದೂ ಜನರಲ್ಲಿ ಈ ಭಾವನೆ ಬಲವಾಗಿ ಬೇರೂರಿತ್ತು. ನಮ್ಮ ಸಂಸ್ಕೃತಿಯಲ್ಲಿ ಮೊದಲಿನಿಂದಲೂ ಇದು ಇತ್ತೋ ಇಲ್ಲವೋ, ಪರಾಧೀನರಾಗಿ ಶಕ್ತಿಹೀನರಾದ ಮೇಲೆ ಈ ಮಾತು ನಮ್ಮ ಬದುಕಿನ ಹಾಸು ಹೊಕ್ಕಾಗಿದೆ. ನಮ್ಮ ಸಂಸ್ಕೃತಿಗೆ ಜೀವನಕ್ಕೆ ವಿಕಾಸಕ್ಕೆ ಹಿಡಿದ ಈ ಗೆದ್ದಲು ಆಕೆಯ ಚೆಲುವಿನ ನೋಟಕ್ಕೆ, ಪೂರ್ಣಜೀವನದ ಕಲ್ಪನೆಗೆ ಸರಿ ತೋರಲಿಲ್ಲ. ಕೂಡಲೆ ಸ್ತ್ರೀಜನೋದ್ಧರಣ ಕಾರ್ಯಕ್ಕೆ ತೊಡಗಿದಳು. ಅಂದಿನಿಂದ ಆಕೆಯ ಭಾಷಣಗಳಿಗೆ ಹಿಂದೀ ಹೆಂಗಸರ ಹಕ್ಕುಬಾಧ್ಯತೆಗಳು, ಅವರ ಆದರ್ಶ ಪ್ರೇಮಗಳು, ಅವರ ತ್ಯಾಗ ಸೇವೆ-ಗಳು ಪಲ್ಲವಿಯಾದವು. ಭಾರತ ಮಹಿಳೆಯರ ಸ್ವಾತಂತ್ರ್ಯಸಾಧನೆಗಾಗಿ ದೊರೆತ ಯಾವ ಸಂದರ್ಭವನ್ನೂ ಆಕೆ ವ್ಯರ್ಥವಾಗಿ ಬಿಡಲಿಲ್ಲ. ಯಾರ ಮನಸ್ಸನ್ನೂ ನೋಯಿಸದೆ, ಇಲ್ಲದ ಬಡಾಯಿ ಕೊಚ್ಚದೆ, ವಾದವಿವಾದ-ಗಳ ಜಗಳದ ಜಗಲಿಯನ್ನು ಹತ್ತದೆ, ಗದ್ದಲವಿಲ್ಲದೆ ಗುಲ್ಲು ಇಲ್ಲದೆ ಶಾಂತವಾಗಿಯೆ ಹಿಂದುಸ್ತಾನದಲ್ಲಿ ಈ ಚಳುವಳಿ ನಡೆದಿದೆ. ನಾರೀಜನ ಪಕ್ಷಪಾತಿಗಳೆಂದು ಬಡಾಯಿ ಹೇಳಿಕೊಳ್ಳುವ ಇತರ ದೇಶಗಳಲ್ಲಿ ಈ ಚಳುವಳಿ ಕುಸ್ತಿಯ ಕಣದ ವರೆಗೂ ಬಂತು. ಮುಂದೆ ಸಿಂತು ಪ್ರಯತ್ನ ಮಾಡಿ ಕಾದಾಡಿದ ಧೀರೆಯರು ಕೆಲವರು ಸೆರಮನೆಯನ್ನೂ ಕಂಡರು. ಬಹಳ ದಿನಸದ ವರೆಗೆ ಸಮಾಜದ ಜೀವನದಲ್ಲಿ ಅಸಮಾಧಾನ ಕಲಹ-ಗಳು ನೆಲೆಸಿದ್ದವು.

ಹಿಂದುಸ್ತಾನದಲ್ಲಿ ಸದ್ದಿಲ್ಲದೆಯೇ ಕಣ್ಣುಮುಚ್ಚಿ ಕಣ್ಣುತೆರೆಯು-ವುದರೊಳಗಾಗಿ ಈ ಕ್ರಾಂತಿ ನಡೆದುಹೋಗಿದೆ. 'ನ ಸ್ತ್ರೀ ಸ್ವಾತಂತ್ರ್ಯ-ಮರ್ಹತಿ' ಎಂಬ ವಾಕ್ಯ ಪಾತಾಳದಲ್ಲಿ ಮುಳುಗಿಹೋಗಿದೆ. ಸ್ವಾತಂತ್ರ್ಯದ ಸುಂದರ ಧ್ಯೇಯದ ಉಪಾಸನೆಯಲ್ಲಿ ನಾರಿ ಲಕ್ಷ್ಮಿಯಯಾಗಿದ್ದಾಳೆ.

ಗಂಡು ಹೆಣ್ಣು ವಾಗರ್ಥಗಳಂತೆ ಅನ್ಯೋನ್ಯ ಆಶ್ರಯಗಳು. ಯಾರಿಗೆ ಯಾರೂ ಹೆಚ್ಚಲ್ಲ ಎಂಬ ಭಾವನೆ ಬಂದಿದೆ. ಸಂಘ ಜೀವನದಲ್ಲಿ, ರಾಜಕೀಯ ರಂಗದಲ್ಲಿ, ಶಿಕ್ಷಣದಲ್ಲಿ, ಕುಟುಂಬದಲ್ಲಿ ಸಾಮರಸ್ಯ ಬೆಳೆ-ದಿದೆ. ಗಂಡೂ ಹೆಣ್ಣೂ ಸರಿಸಮನಾಗಿ ಎಲ್ಲ ಕ್ಷೇತ್ರಗಳಲ್ಲೂ ಕೆಲಸ ಮಾಡುತ್ತಿದಾರೆ. ಶಾಸನ ಸಭೆಗಳಲ್ಲಿ ಹೆಂಗಸರಿಗೆ ಯೋಗ್ಯ ಸ್ಥಳವಿದೆ. ಅಷ್ಟೇ ಅಲ್ಲ. ಜಗತ್ತಿಗೇ ಉದಾಹರಣೆಯಾಗಿ ಶ್ರೀಮತಿ ವಿಜಯಲಕ್ಷ್ಮಿ ಮಂತ್ರಿಯಾಗಿದ್ದಾಳೆ.

ಈ ಕ್ರಾಂತಿ ಪುನರುಜ್ಜೀವನಗಳಿಗೆ ಗಾಂಧೀಜಿಯ ಪ್ರಭಾವ ಅವರ ಸತ್ಯಾಗ್ರಹ ಚಳುವಳಿಗಳು ಬಹುಮಟ್ಟಿಗೆ ಕಾರಣವಾಗಿದ್ದರೂ ಸರೋ-ಜಿನಿಯ ಕೃಷಿಗೆ ಆ ಕೀರ್ತಿ ಸಲ್ಲಬೇಕು. ೧೯೩೦ ರಲ್ಲಿ ಸತ್ಯಾಗ್ರಹ ಸಮರದಲ್ಲಿ ಹಿಂದುಸ್ತಾನದ ಹೆಂಗಸರು ವಹಿಸಿದ ಭಾಗ, ಹೊತ್ತ ಹೊಣೆ, ಮಾಡಿದ ತ್ಯಾಗ ಜಗತ್ತಿನ ಇತಿಹಾಸದಲ್ಲೇ ಸಾಟಿಯಿಲ್ಲದುದು. ಅಂಥ ಚಿತ್ರ ಎಲ್ಲೂ ಯಾರೂ ಕಂಡುದಿಲ್ಲ. ಸರೋಜಿನಿ ಕೈಯಲ್ಲಿ ಕುಂಚ ಹಿಡಿದು ತಾನೇ ಆ ಚಿತ್ರಲೇಖನಕ್ಕೆ ತೊಡಗದಿದ್ದರೆ ಬಣ್ಣ ಹೇಗಿರು-ತ್ತಿತ್ತೋ! ಸರೋಜಿನಿ ಸ್ವಯಂ ಉಪ್ಪಿನ ಸತ್ಯಾಗ್ರಹದಲ್ಲಿ ಧುಮುಕಿದಳು. ಹೆಸರಾದ ಧರಸನದ ಮುತ್ತಿಗೆಗೆ ಆಕೆಯೇ ಮುಂದಾಳು. ಆಗ ಆಕೆ ತೋರಿದ ಧೈರ್ಯ ಸಾಹಸ ತ್ಯಾಗಗಳು ಮರೆಯಲಾರದುವು.

ಹಿಂದುಸ್ತಾನದ ಜನಜೀವನದಲ್ಲಿ ಇಂದು ರಾಷ್ಟ್ರಪತಿಯ ಗೌರವವೇ ಕಟ್ಟಕಡೆಯ ಮರ್ಯಾದೆ. ಜನರು ಸಲ್ಲಿಸಬಹುದಾದ ಮಾನ ಅದಕ್ಕಿಂತ ಹೆಚ್ಚಿನದು ಯಾವುದೂ ಇಲ್ಲ ಲಕ್ನೋ ಕಾಂಗ್ರೆಸ್ಸಿಗೆ ಒಂದುಮನಸಿನಿಂದ ಭಾರತವು ಸರೋಜಿನಿಯನ್ನು ಅಧ್ಯಕ್ಷಪದಕ್ಕೆ ಆರಿಸಿತು. ಅದಕ್ಕೆ ಮೊದಲಾಗಲಿ ಅನಂತರವಾಗಲಿ ಆನಿಬಿಸೆಂಟ್ ವಿನಾ ಯಾವ ಹೆಂಗಸೂ ಆ ಪದವಿಯನ್ನು ಪಡೆದಿಲ್ಲ. ಇಷ್ಟರಲ್ಲೇ ಪಡೆಯುವ ಲಕ್ಷಣಗಳೂ ಇಲ್ಲ.

ಸರೋಜಿನಿಯ ರಾಜಕೀಯ ಜೀವನವೆಲ್ಲ ಬರಿ ಸಿಡಿಲುಗುದುರೆಯ ಸವಾರಿಯಾಗಿಲ್ಲ. ಸ್ತ್ರೀಸಹಜವಾದ ಕವಿಗುಣವಾದ ಸಾಮೋಪಾಯವೇ ಆಕೆಯ ಮುಖ್ಯ ಸಾಧನ. ಕಾಂಗ್ರೆಸ್ಸಿನಲ್ಲಿ ಹೆಣ್ಣುಗಂಡಿನ ಸಮಾನತೆ

ರೂಢಿಯಲ್ಲಿ ಬಂದುದು ಆಕೆಯ ಮಧುರ ಪರಿಶ್ರಮದಿಂದ. ಹಿಂದುಸ್ತಾನದ ಹೆಂಗಸರಿಗೆ ಇಂದು ಮತಕೊಡುವ ಹಕ್ಕು ಬಂದಿದೆ. ೧೯೧೯ ರಲ್ಲಿ ಮಾಂಟ್‌ಫರ್ಡ್ ಸುಧಾರಣೆಗಳು ಬಂದಾಗ ಈ ಅಧಿಕಾರ ದೊರೆಯಿತು. ಆಗ ಸರೋಜಿನಿಯೇ ಭಾರತ ಮಹಿಳೆಯರ ಶಿಷ್ಟಮಂಡಲದ ಮುಂದಾಳಾಗಿ ಇಂಗ್ಲೆಂಡಿಗೆ ಹೋಗಿದ್ದಳು. ಆ ಮತಲಾಭದ ಕೀರ್ತಿ ಆಕೆಗೆ ಸಲ್ಲಬೇಕು. ಹಿಂದೀ ಹೆಂಗಸರಲ್ಲಿ ಇಂದು ನಾವು ನೋಡುವ ಪ್ರಗತಿಗೆ ಅಂದೇ ತಳಹದಿ ಬಿತ್ತು. ಮತ್ತೊಮ್ಮೆ ತನ್ನ ಅಕ್ಕತಂಗಿಯರ ಪ್ರತಿನಿಧಿಯಾಗಿ ಇಂಗ್ಲೆಂಡಿಗೆ ಹೋಗುವ ಪ್ರಸಂಗ ಬಂದಿತ್ತು. ಹಿಂದುಸ್ತಾನದ ಜಾತಕವನ್ನು ಚರ್ಚಿಸಲೋಸುಗ ರೌಂಡ್‌ಟೇಬಲ್ ಕಾನ್‌ಫರೆನ್ಸ್ ನಡೆದಾಗ ಸರೋಜಿನಿಯೂ ಅದರಲ್ಲಿ ಪಾಲ್ಗೊಂಡಳು. ಆನಿಬಿಸೆಂಟರ ಹೋಂರೂಲು ಲೀಗಿನ ಶಿಷ್ಟಮಂಡಳದಲ್ಲೂ ಆಕೆ ಇಂಗ್ಲೆಂಡು ಕಂಡಳು. ಹಿಂದುಸ್ತಾನದ ರಾಜಕೀಯ ರೂಪಕದ ಎಲ್ಲ ಅಂಕಗಳಲ್ಲೂ ಆಕೆ ಪ್ರೇಕ್ಷಕ ಮನೋಜ್ಞಳಾಗಿ ಇದ್ದೇ ಇದಾಳೆ; ಆಕೆಯ ಸ್ಥಾನ ಆಕೆಯದೇ ಆಗಿ ಸದಾ ಕಾಯಲ್ಪಟ್ಟಿದೆ.

—ಸಿದ್ದವನಹಳ್ಳಿ ಕೃಷ್ಣಶರ್ಮ.

**೧. ನಮ್ಮ ದೇಶದಲ್ಲಿ ಹೆಂಗುಸರ ವಿಷಯದಲ್ಲಿ ಬಹುಕಾಲದಿಂದ ನೆಲೆಸಿದ ಸಾಮಾನ್ಯ ಕಲ್ಪನೆಗಳು ಯಾವವು? ೨. ನಮ್ಮ ದೇಶದ ಹೆಂಗುಸರ ಉದ್ಧಾರಕ್ಕಾಗಿ ಸರೋಜಿನೀದೇವಿ ಯಾವ ಯಾವ ಕೆಲಸಗಳನ್ನು ಮಾಡಿರುವಳು? ೩. ಸರೋಜಿನೀದೇವಿಯು ನಡುಮನೆಯಲ್ಲಿ ಕಾಣುವ ವಸ್ತುಗಳನ್ನು ಹೇಳಿ, ಅವುಗಳಿಂದ ಸೂಚಿತವಾಗುವ ಆಕೆಯ ಜೀವನದ ಒಂದೆರಡು ಗುರಿಗಳನ್ನು ವರ್ಣಿಸಿರಿ. ೪. ಸರೋಜಿನೀದೇವಿ ಇಂಗ್ಲಿಷಿನಲ್ಲಿ ಹೆಸರಾದ ಕವಯಿತ್ರಿಯೆಂದು ಏತರಿಂದ ಸ್ಪಷ್ಟವಾಗುವದು? ೫. ಈ ಪಾಠದ ಮೊದಲನೆಯ ವಾಕ್ಯವೃಂದದ ಅರ್ಥವು ಸ್ಪಷ್ಟವಾಗುವಂತೆ ನಿಮ್ಮ ಸ್ವಂತ ಮಾತಿನಲ್ಲಿ ವಿಸ್ತರಿಸಿ ಬರೆಯಿರಿ. ೬. ಕೆಳಗಿನ ವಾಕ್ಯಗಳ ಅರ್ಥವನ್ನು ಸ್ಪಷ್ಟಪಡಿಸಿರಿ:— (ಅ) ಚೆಲುವು ನಲವುಗಳ ಉಪಾಸನೆ ಸರೋಜಿನೀದೇವಿಯ ಜೀವನದ ರಹಸ್ಯ; (ಆ) ಖಾದಿಯಲ್ಲಿ ರಾಟೆಯ ಶ್ರಾವ್ಯಗಾನ**

ಕೇಳುತ್ತಿದೆ; (ಇ) ಸರೋಜಿನಿಯ ರಾಜಕೀಯ ಜೀವನವು ಬರಿ ಸಿಡಿಲು-ಗುದುರೆಯ ಸವಾರಿಯಾಗಿಲ್ಲ; (ಈ) ವೊಳಕೆಯಲ್ಲಿಯೇ ಗುಣ ತೋರುತ್ತದೆ. (ಉ) ಇತರ ದೇಶಗಳಲ್ಲಿ ಈ ಚಳುವಳಿ ಕುಸ್ತಿಯ ಕಣದ ವರೆಗೂ ಬಂತು. ೬. ಈ ಎರಡು ಪಾಠಗಳ ಭಾಷಾಶೈಲಿ ಹೊಸದು. ಹಳೆಯ ವಾಕ್ಯರಚನೆಗೂ ಇದಕ್ಕೂ ಇರುವ ಮುಖ್ಯವ್ಯತ್ಯಾಸಗಳನ್ನು ಉದಾಹರಣ ಸಹಿತವಾಗಿ ಹೇಳಿರಿ.

## ೨೪. ಸೀತಾಪರಿತ್ಯಾಗ

[ ಲಕ್ಷ್ಮೀಶಕವಿಯ 'ಜೈಮಿನಿ ಭಾರತ'ದಿಂದ ಈ ಭಾಗವನ್ನು ತೆಗೆದುಕೊಳ್ಳಲಾಗಿದೆ. ಲಕ್ಷ್ಮೀಶಕವಿ ದೇವನೂರು ಎಂಬ ಗ್ರಾಮದವನು. ಈತನು ಸುಮಾರು ೧೬೦೦ರಲ್ಲಿ ಇದ್ದಿರಬಹುದೆಂದು ತಿಳಿಯುತ್ತದೆ. ಸುಲಲಿತವಾದ ಷಟ್ಪದೀಕಾವ್ಯವನ್ನು ರಚಿಸಿ ಈತನು ಒಳ್ಳೆಯ ಜನಪ್ರಿಯ ಕವಿಯಾಗಿದ್ದಾನೆ. ಅಗಸನೊಬ್ಬನ ಹೀನ ನುಡಿಯನ್ನು ಕೇಳಿ ರಾಮಚಂದ್ರನು ತನ್ನ ಪತ್ನಿ ಸೀತಾದೇವಿಯನ್ನು ಲಕ್ಷ್ಮಣನ ಮೂಲಕ ವನಕ್ಕೆ ಕಳಿಸಿದ ಕಥಾಭಾಗವು ಈ ಆಯ್ಕೆಯಲ್ಲಿದೆ. ]

" ತಮ್ಮ, ಬಾ, ನೀನಿಂದುವರೆಗೆ ತಾನೆಂದ ಮಾ-
ತಮ್ಮೀರಿದವನಲ್ಲ ; ಕೆಲಬಲವನಾರಯ್ಯು-
ತಮ್ಮರುಗದಿರು ; ತನ್ನ ಕೊರಳಿಗಿದೆ ಖಡ್ಗಮಲ್ಲದೊಡೀಗ ;
ಜಾನಕಿಯನು ||
ಉಮ್ಮಳಿಸದೊಯ್ದು ಗಂಗೆಯ ತಡಿಯರಣ್ಯದೊಳ್
ಸುಮ್ಮನೆ ಕಳುಹಿ ಬರ್ಪುದವಳೆನ್ನೊಳಾಡಿರ್ದ-
ಳೊಮ್ಮೆ ಕಾನನಕೈದಬೇಕೆಂದು ಬಯಕೆಯಿಂದದೆ ನೆವಂ
ನಿನಗೆ"ಂದನು || ೧ ||

ಅಣ್ಣದೇವನೊಳಿಡಿದ ವಾತ್ಸಲ್ಯಮೆಂಬ ಬ-
ಲ್ಗಣ್ಣಿಯೊಳ್ಕಟ್ಟುವಡೆದಲ್ಲೆನಲರಿಯವೆ, ನಿ-
ರ್ವಿಣ್ಣಭಾವದೊಳಂದು ಲಕ್ಷ್ಮಣಂ ತುರಗಸಾರಥಿಕೇತನಂಗಳಿಂದೆ||
ಹಣ್ಣಿದ ವರೂಥಮಂ ತರಿಸಿ, ಪೊರಗಿರಿಸಿ, ನೆಲ-
ವೆಣ್ಣ ಮಗಳಿರುತಿರ್ದ ರಾಜಮಂದಿರಕ್ಕೈದಿ,
ಕಣ್ಣೊಳೀಕ್ಷಿಸದೆ ತಲೆವಾಗಿ, ದೂರದೊಳೆ ನಿಂದಾಸೀತೆ-
ಗಿಂತೆಂದನು : || ೨ ||

"ತಾಯೆ, ನೀನೇತಕೆಳಸಿದೆ ? ನಿನ್ನನೀಗ ರಘು-
ರಾಯಂ ತಪೋವನಕೆ ಕಳುಹಿ ಬರಹೇಳಿದಂ ;
ಪ್ರಿಯಮುಳ್ಳೊಡೆ ರಥಂ ಪಣ್ಣಿ ಬಂದಿದೆಕೊ ! ಬಿಜಯಂ
ಗೈವುದೆ"ಂದು ||
ಛಾಯೆಗಾಣಿಸಿ ಸುಮಿತ್ರಾತ್ಮಜಂ ನುಡಿದಭಿ-
ಪ್ರಾಯಮಂ ತಿಳಿಯದತಿಸಂಭ್ರಮಾನ್ವಿತೆಯಾದ-
ಳಾಯತಾಂಬಕಿ, ತನ್ನಭೀಷ್ಟಮಂ ಸಲಿಸುವಂ ಕಾಂತನೆಂ-
ಬುತ್ಸವದೊಳು || ೩ ||

ಅಗ್ರಜಂ ತರಿಸಂದು ತನ್ನೊಳಾಡಿದ ಕಜ್ಜ-
ದುಗ್ರಮಂ, ಬನಕೆ ಪೋದಪೆನೆಂಬ ದೇವಿಯಸ-
ಮಗ್ರಸಂತೋಷಮಂ ಕಂಡು, ಸೌಮಿತ್ರಿ ಮನದೊಳ್ಮರುಗಿ,
ಕಂಬನಿಯನು ||
ನಿಗ್ರಹಿಸಿಕೊಂಡು, ಸಾರಥಿಗೆ ಸೂಚನೆಗೈದು,
ವ್ಯಗ್ರದಿಂದೈದಿಸಿದನಾರಥವನಾಗ ದೇ-
ವಗ್ರಾಮನಿಲಯ ಲಕ್ಷ್ಮೀಶನುಂಗುಟದೊಳೊಗೆದಮಲ
ಜಾಹ್ನವಿಯ ತಡಿಗೆ || ೪ ||

'ಧುರದೊಳಾಂತರನಿರಿದು ಮೆರೆಯಲೇರುವ ರಥಂ
ತರಳೆಯಂ ಕಾನನಕೆ ಕಳುಹಲಡರ್ವಂತಾಯ್ತು !
ಧರೆಯೊಳಾರ್ತರನೈದೆ ರಕ್ಷಿಸುವ ಬುದ್ಧಿ ಕೋಮಲೆಯ
ಕೊಲೆಗೆಲಸಕಾಯ್ತು ! ||

ಕರುಣಮಿಲ್ಲದೆ ಹೊರೆವ ಹರಣಮಂ ಸುಡಲಿ ! ನಿ-
ಷ್ಠುರದೊಳೆಂತೀ ಕೃತ್ಯಮೆಸಗುವೆನೊ ! ರಾಘವೇ-
ಶ್ವರನೇತಕಿದಕೆ ಬೆಸಸಿದನೊ ತನಗೆ'ನುತ ಸೌಮಿತ್ರಿ ಮರು-
ಗುತೆ ನಡೆದನು. ॥ ೫ ॥

ಇಳಿದು ರಥದಿಂದೆ ಮಂದಾಕಿನಿಗೆ ಪೊಡಮಟ್ಟು,
ಬಳಿಕ ನಾವಿಕರೊಡನೆ ನಾವದೊಳ್ಗಂಗೆಯಂ
ಕಳೆದು, ನಿರ್ಮಲ ತೀರ್ಥದೊಳ್ಮಿಂದು, ಸೌಮಿತ್ರಿ ಮತ್ತೆ
ಭೂಜಾತೆ ಸಹಿತ ॥
ಒಳಗೊಳಗೆ ಮರುಗಿ, ಬಿಸುಸುಯ್ದು ಚಿಂತಿಸುತೆ, ಮುಂ-
ದಳೆದುಗ್ರ ಮೃಗಪಕ್ಷಿಗಣದಿಂದೆ ಘೂರ್ಮಿಸುವ
ಹಳುವಮಂ ಪೊಕ್ಕನಡಿಯಿಡುವೊಡಸದಳವೆಂಬ ಕರ್ಕಶದ
ಮಾರ್ಗದಿಂದೆ. ॥ ೬ ॥

"ಎಲ್ಲಿ ಮುನಿಪೋತ್ತಮರ ಪಾವನದ ವನದೆಡೆಗ-
ಳೆಲ್ಲಿ ಸಿದ್ಧಾಶ್ರಮಂಗಳ ಮಂಗಳಸ್ಥಳಗ-
ಳೆಲ್ಲಿ ಸುಹವಿಗಳ ಕಂಪೊಗೆದ ಪೊಗೆದಳೆದಗ್ನಿಹೋತ್ರದ
ಕುಟೀರಂಗಳು ॥
ಎಲ್ಲಿ ಪರಿಚಿತವಾದ ವಾದವೇದಧ್ವನಿಗ-
ಳಲ್ಲಿಗುಯ್ಯದೆ ದಾರುದಾರುಣದ ಕಟ್ಟಡವಿ-
ಗಿಲ್ಲಿಗೇಕೈತಂದೆ ? ತಂದೆ, ಸೌಮಿತ್ರಿ, ಹೇಳೆ"ಂದು ಜಾನಕಿ-
ಸುಯ್ದಳು. ॥ ೭ ॥

ನರನಾಥ ಕೇಳವನಿಸುತೆ ನುಡಿದ ಮಾತಿಗು-
ತ್ತರವನಾಡದೆ, ಮನದೊಳುರೆ ನೊಂದು, 'ರಾಘವೇ-
ಶ್ವರನೆಂದ ಕಷ್ಟಮಂ ಪೇಳ್ದಪೆನೊ ? ಮೋಣುಸಿರದಿರ್ದಪೆನೊ ?
ನಿಷ್ಠುರದೊಳು ॥
ತರಣಿಕುಲ ಸಾರ್ವಭೌಮನ ರಾಣಿಯಂ ಬನದೊ-
ಳಿರಿಸಿ ಪೋದಪೆನೆಂತೊ ? ಪೋಗದಿರ್ದೊಡೆ ಸಹೋ-
ದರನದೇನೆಂದಪನೊ ? ಹಾ !' ಎಂದು ಲಕ್ಷ್ಮಣಂ ಬೆಂದು
ಬೇಗುದಿಗೊಂಡನು. ॥ ೮ ॥

"ದೇವಿ, ನಿನಗಿನ್ನೆಗಂ ಪೇಳ್ದುದಿಲ್ಲಪವಾದ-
ಮಾವರಿಸೆ, ನಿನ್ನನೊಲ್ಲದೆ ರಘುಕುಲೋದ್ವಹಂ
ಸೀವರಿಸಿ ಬಿಟ್ಟು, ಕಾಂತಾರಕ್ಕೆ ಕಳುಹಿ ಬಾಯೆಂದೆನಗೆ
ನೇಮಿಸಿದೊಡೆ,
ಆ ವಿಭುವಿನಾಜ್ಞೆಯಂ ಮೀರಲರಿಯದೆ ನಿಮ್ಮ-
ನೀ ವಿಪಿನಕೊಡಗೊಂಡು ಬಂದೆನಿನ್ನೊಯ್ಯ್ಯ-
ನಾವಲ್ಲಿಗಾದೊಡಂ ಪೋಗೆ"ಂದು ಲಕ್ಷ್ಮಣಂ ಬಾಷ್ಪಲೋಚನ-
ನಾದನು ॥ ೯

—ಲಕ್ಷ್ಮೀಶ

೧. ಸೀತೆಯ ವಿಷಯದಲ್ಲಿ ಜನರು ಹೇಳುತ್ತಿದ್ದ ಅಪವಾದವು ಯಾವದು? ೨. 'ಛಾಯೆಗಾಣಿಸಿ ಸುಮಿತ್ರಾತ್ಮಜಂ ನುಡಿದಭಿಪ್ರಾಯಮಂ ತಿಳಿಯದೆ' ಎಂದು ಕವಿ ಹೇಳಿದ್ದನ್ನು ಸ್ಪಷ್ಟಗೊಳಿಸಿರಿ. ೩. 'ಕರುಣ-ಮಿಲ್ಲದೆ ಹೊರೆವ ಹರಣಮಂ ಸುಡಲಿ' ಎಂದು ಮರುಗುತ್ತಿರುವ ಲಕ್ಷ್ಮಣನ ಮನಸ್ಸಿನ ವೇದನೆಯನ್ನು ನಿಮ್ಮ ಶಬ್ದಗಳಲ್ಲಿ ಚಿತ್ರಿಸಿರಿ.

## ೨೫. ಸೃಷ್ಟಿಯ ತಂತ್ರಜಾಲ

[ ಪ್ರೊ. ಎಲ್. ಕೆ. ಗುಂಜೀಕರರು ಬರೆದ 'ನಿಸರ್ಗದ ನೇಗೆ' ಎಂಬ ಆಯ್ಕೆಯಿಂದ ಸ್ವಲ್ಪ ಹೆಚ್ಚುಕಡಿಮೆ ಮಾಡಿ ಇದನ್ನು ಬರೆಯ-ಲಾಗಿದೆ. ಇದರಲ್ಲಿ ಜಗತ್ತಿನ ಎಲ್ಲ ವ್ಯಾಪಾರಗಳು ಒಂದು ನಿಯಂತ್ರಣ-ಕ್ಕೊಳಪಟ್ಟವೆಯೆಂದೂ ಸಾಮಾನ್ಯರಿಗೆ ತೋರುವಂತೆ ಸೃಷ್ಟಿ ಅವ್ಯವಸ್ಥಿತ-ವಾಗಿಲ್ಲವೆಂದೂ ಮನೋರಂಜಕ ಉದಾಹರಣೆಗಳಿಂದ ಸ್ಪಷ್ಟಮಾಡಲಾಗಿದೆ.]

ಪ್ರಾಣಿಗಳಲ್ಲಿ ಸಸ್ಯಾಹಾರಿಗಳನ್ನು ನಾವು ಬಲ್ಲೆವು; ಆಕಳು ಕುರಿ ಎಮ್ಮೆ ಆನೆ ಒಂಟೆ ಮುಂತಾದವು ಸಸ್ಯಗಳಿಂದ ಉಪಜೀವಿಸುವವು. ಕೆಲವು ಪ್ರಾಣಿಗಳು ಸಸ್ಯಾಹಾರಿ ಪ್ರಾಣಿಗಳನ್ನು ತಿಂದು ಬದುಕುವವು. ಮೊಲ ಚಿಗರೆ ಮುಂತಾದವು ತಾವು ಎಲೆ ಹುಲ್ಲು ಇವುಗಳನ್ನು ತಿಂದು ಹುಲಿ ತೋಳ ಮುಂತಾದವುಗಳ ಆಹಾರವಾಗುವವು. ಕೆಲವು ವನಸ್ಪತಿ-ಗಳು ತಮ್ಮ ಮೇಲೆ ಕುಳಿತ ಪತಂಗ ಹಕ್ಕಿಪಕ್ಕಿ ಮುಂತಾದವನ್ನು ನುಂಗಿ ಜೀರ್ಣಿಸಿಕೊಳ್ಳುವವು. ಹೀಗೆ ಒಂದು ಜೀವಿ ಇನ್ನೊಂದು ಜೀವಿಯನ್ನು ತಿಂದು ಬದುಕುವ ಈ ಕ್ರಮವು ಅತಿ ಸೂಕ್ಷ್ಮ ಜೀವಿಯಿಂದಾರಂಭಿಸಿ ಇನ್ನಾವ ಪ್ರಾಣಿಯ ಆಹಾರಕ್ಕೂ ಅಸಾಧ್ಯವಾದ ಹಿಂಸ್ರಪ್ರಾಣಿಯವರೆಗೆ ಬಂದು ನಿಲ್ಲುತ್ತದೆ. ಹೀಗೆ ಬಂದು ನಿಲ್ಲುವದು ಕೂಡ ಆ ಹಿಂಸ್ರ-ಪ್ರಾಣಿ ಬದುಕಿರುವವರೆಗೆ ಮಾತ್ರ. ಅದು ಸತ್ತುಬೀಳುವದೊಂದೇ ತಡ; ಬಗೆಬಗೆಯ ಹುಳುಹುಪ್ಪಡಿಗಳೂ ಹದ್ದು ಕಾಗೆಗಳೂ ನರಿ ನಾಯಿಗಳೂ ಅದನ್ನು ತಿಂದು ತೇಗುತ್ತವೆ.

ಹೀಗೆ ನಿಸರ್ಗದಲ್ಲಿ ಆಹಾರಚಕ್ರದ ನಿರ್ಮಿತಿಯಿರುವದಕ್ಕೆ ಕಾರಣ-ವಿಲ್ಲದೆ ಇಲ್ಲ. ಈ ನಿರ್ಮಿತಿಯಿಂದ ಯಾವದೊಂದೇ ವರ್ಗದ ಜೀವಿಗಳು ಅಪರಿಮಿತವಾಗಿ ಬೆಳೆಯದಂತೆ ನಿಯಂತ್ರಣ ಮಾಡಿದಂತಾಗುವದು. ಈ ನಿಯಂತ್ರಣವಿಲ್ಲದಿದ್ದರೆ ಬೆಕ್ಟೇರಿಯದಂಥ ಅತಿಸೂಕ್ಷ್ಮ ಅಣುಜಂತುಗಳು ಒಂದೇ ತಿಂಗಳಲ್ಲಿ ಈ ಭೂಲೋಕದ ಹನ್ನೊಂದು ಮಡಿಯಷ್ಟು ಆಗ-ಬಹುದಂತೆ! ಸೃಷ್ಟಿಯೊಳಗಿನ ಯಾವದೊಂದು ಪ್ರಾಣಿವರ್ಗವು ಹೆಚ್ಚಾಗ-ತೊಡಗಿದರೆ ಉಳಿದ ಪ್ರಾಣಿವರ್ಗಗಳಿಗೆ ಅವಕಾಶವು ಇಲ್ಲದಂತಾಗುವದು. ಹೀಗಾದರೆ ನಿಸರ್ಗದ ಸುನಿಯಂತ್ರತೆ ನಿಂತುಹೋದೀತು. ಇದಕ್ಕಾಗಿಯೇ ಒಂದು ಇನ್ನೊಂದನ್ನು ತಿಂದು ಬದುಕುವಂತೆ ಮಾಡಿ ಸೃಷ್ಟಿಯು ಯಾವದೊಂದು ಪ್ರಾಣಿಯ ಹೆಚ್ಚಿನ ಸಂಖ್ಯಾಭಿವೃದ್ಧಿಗೆ ನಿಯಂತ್ರಣ-ವನ್ನು ಹಾಕಿರುವದು.

ಮೇಲೆ ಹೇಳಿದಂತೆ ಸೃಷ್ಟಿಯೊಳಗಿನ ಪ್ರಾಣಿಗಳಲ್ಲಿ ಪರಸ್ಪರ ನಾಶಕಭಾವವೊಂದೇ ಇರುವದಿಲ್ಲ; ಪರಸ್ಪರ ಪರಿಪೋಷಕಭಾವವೂ

ಕಂಡುಬರುವದು. ಸಸ್ಯ ಮತ್ತು ತುಂಬಿ ಇವುಗಳಲ್ಲಿ ಈ ಭಾವವನ್ನೇ ನಾವು ಕಾಣುವೆವು. ನಿಸರ್ಗವು ಸಸ್ಯಗಳ ಹೂವುಗಳಲ್ಲಿ ಮಕರಂದ-ವನ್ನಿರಿಸಿ ತುಂಬಿಗಳಲ್ಲಿ ಒಂದು ಹೂವಿನಿಂದ ಇನ್ನೊಂದು ಹೂವಿಗೆ ಪರಾಗವನ್ನು ಒಯ್ದು ಮುಟ್ಟಿಸುವ ಕಲೆಯನ್ನಿರಿಸಿದೆ. ಹೂವಿನ ಮಕರಂದದಿಂದ ತುಂಬಿಯು ಹೊಟ್ಟೆ ತುಂಬುವದು; ತುಂಬಿ ಒಂದು ಹೂವಿಗೆ ಇನ್ನೊಂದು ಹೂವಿನ ಪರಾಗಸಂಕ್ರಮಣಮಾಡುವದರಿಂದ ಆ ಹೂವು ಹಣ್ಣಿನ ರೂಪವನ್ನು ಹೊಂದುವದು.

ಒಂದು ಇನ್ನೊಂದಕ್ಕೆ ಕೇವಲ ಪೋಷಕವಾಗಿರುವದನ್ನೂ ನಾವು ವನಸ್ಪತಿ ಜೀವಿಗಳಲ್ಲಿ ಕಾಣಬಹುದು. ಮನುಷ್ಯನಿಗಾಗುವ ಕಜ್ಜಿ ತದ್ದು ಮುಂತಾದ ಚರ್ಮರೋಗಗಳಲ್ಲಿ ಆ ರೋಗಜಂತುಗಳು ಮನುಷ್ಯಶರೀರ-ದಿಂದ ಪೋಷಣಹೊಂದುತ್ತಿರುವವು. ಮಾವಿನ ಗಿಡಗಳ ಮೇಲೆ ಬೆಳೆ-ಯುವ ಬದನಿಕೆ ಇದಕ್ಕೆ ಒಳ್ಳೆಯ ಉದಾಹರಣವು. ಮಾವಿನ ಗಿಡಕ್ಕೆ ಇದರಿಂದ ಏನೂ ಉಪಯೋಗವಿಲ್ಲ; ಆದರೂ ಮಾವಿನ ಗಿಡವು ಇದಕ್ಕೆ ತನ್ನ ಆಹಾರವನ್ನು ಕೊಡಲೇಬೇಕಾಗುತ್ತದೆ. ಕಾಗೆಯಿಂದ ಪೋಷಿತ-ವಾಗುವ ಕೋಗಿಲೆಯ ಮರಿಯಂತೆ ಒಂದು ವನಸ್ಪತಿಯಿಂದ ಪೋಷಿತ-ವಾಗುವ ಬದನಿಕೆಯಂಥ ಪರಪುಷ್ಟ ವನಸ್ಪತಿಗಳನ್ನು ಕಂಡು ನಮಗೆ ಕೌತುಕವೆನಿಸುತ್ತದೆ.

ಮೇಲಿನ ಉದಾಹರಣೆಗಳಿಂದ ನಿಸರ್ಗವು ತನ್ನೊಳಗಿನ ಎಲ್ಲ ಬಗೆಯ ಜೀವಜಂತುಗಳಲ್ಲಿ ಒಂದು ಬಗೆಯ ಸಮತೋಲತೆಯನ್ನು ಕಾಯುತ್ತಿ-ರುವದು ಕಂಡುಬರುವದು. ಎಂದರೆ ಸೃಷ್ಟಿಯು ಹಲವು ಪ್ರಾಣಿಗಳನ್ನೂ ಜೀವಜಂತುಗಳನ್ನೂ ಹುಟ್ಟಿಸಿಕೊಳ್ಳುತ್ತದೆ; ಹೆಚ್ಚಿಗೆ ಹುಟ್ಟಿದವುಗಳ ನಾಶಕ್ಕೆ ತಕ್ಕ ಏರ್ಪಾಡನ್ನೂ ಮಾಡುತ್ತದೆ. ಸೃಷ್ಟಿಯ ಈ ತಂತ್ರವು ಜೇಡನ ಬಲೆಯಂತೆ ಹಲವು ಸೂತ್ರಗಳ ಹೆಣಿಕೆಯಿಂದ ಕೂಡಿದ್ದಾಗಿದೆ. ಜೇಡನ ಬಲೆಯು ಎಳೆಗಳು ಗಟ್ಟಿಯಾಗಿರುವತನಕ ಚೆನ್ನಾಗಿ ಕೆಲಸ-ಮಾಡುವದು; ಯಾವದೊಂದು ಎಳೆ ಹರಿದರೆ ಇಡಿ ಬಲೆಯ ಕೆಲಸವು ನಡೆಯದಂತಾಗುವದು. ನಿಸರ್ಗದ ತಂತ್ರಜಾಲಕ್ಕಾದರೂ ಈ ಮಾತು

ಅನ್ವಯಿಸುವದು. ಅದರ ಸೂತ್ರಗಳಿಗೆ ವಿಚ್ಛೇದವುಂಟಾಗದಿರುವ ವರೆಗೆ ಅದು ಸರಿಯಾಗಿ ಸಾಗುವದು. ಪ್ರತಿಯೊಂದು ಜೀವಜಂತು ಎರಡನೆಯ ಜೀವಜಂತುವಿನ ಉತ್ಪತ್ತಿಗೆ ಅಡ್ಡಿಯಾಗಿ ಇಲ್ಲವೆ ಕೆಲವೊಂದು ಜೀವಜಂತುವಿನ ಬೆಳಿಗೆಗೆ ಸಹಾಯಕವಾಗಿ ಇರುವದರಿಂದ ನಾವು ಯಾವದೊಂದು ಜೀವಜಂತುವಿನ ಬೆಳಿಗೆಗೆ ನಿರೋಧಮಾಡುವದರಿಂದಾಗಲಿ ಸಹಾಯಮಾಡುವದರಿಂದಾಗಲಿ ಸೃಷ್ಟಿವ್ಯಾಪಾರದಲ್ಲಿ ಕೈಹಾಕಿದಂತೆಯೇ ಆಗುವದು. ನಿಸರ್ಗದ ಆ ಕಾರ್ಯಕ್ಕೆ ಅಡ್ಡಿಮಾಡಿದರೆ ಸೃಷ್ಟಿಯ ತಂತ್ರಜಾಲದ ಎಳೆ ಹರಿದಂತಾಗಿ ಅದರ ವ್ಯಾಪಾರವು ಸರಿಯಾಗಿ ನಡೆಯದಂತಾಗುವದು. ಕೆಳಗಿನ ಉದಾಹರಣವನ್ನು ನೋಡಿರಿ:—

ಜಮೇಕಾ ದ್ವೀಪದಲ್ಲಿ ಹೇಗೋ ಒಮ್ಮೆ ಇಲಿಗಳು ಪ್ರವೇಶಿಸಿದವು. ದಿನದಿನಕ್ಕೆ ಅವುಗಳ ಸಂಖ್ಯೆ ಮಿತಿಮೀರಿ ಬೆಳೆಯತೊಡಗಿತು. ಅಲ್ಲಿಯ ಜನರು ಇಲಿಗಳ ನಾಶಕ್ಕಾಗಿ ಪರದೇಶಗಳಿಂದ ಮುಂಗುಲಿಗಳನ್ನು ತರಿಸಿ ಬಿಟ್ಟರು. ಮುಂಗುಲಿಗಳು ಇಲಿಗಳನ್ನೇನೋ ನಾಶಮಾಡಿದವು, ಆದರೆ ಮುಂಗುಲಿಗಳ ಸಂತಾನವು ಅತ್ಯಧಿಕವಾಗಿ ಬೆಳೆಯಿತು. ಅವು ತಮ್ಮ ಆಹಾರಕ್ಕೆ ಇಲಿಗಳು ದೊರೆಯದಂತಾದ್ದರಿಂದ ಕೋಳಿ ಮೊದಲಾದ ಪ್ರಾಣಿಗಳನ್ನೂ ಅವುಗಳ ತತ್ತಿ ಮರಿ ಇವುಗಳನ್ನೂ 'ಸ್ವಾಹಾ' ಮಾಡತೊಡಗಿದವು. ಇದರಿಂದ ಕೋಳಿ ಮುಂತಾದವು ತಿನ್ನುತ್ತಿದ್ದ ಕ್ರಿಮಿಕೀಟಕಗಳು ಅಸಂಖ್ಯವಾಗಿ ಬೆಳೆದವು; ಅದರಿಂದ ಹೊಲಗಳ ಬೆಳೆಗಳಿಗೆ ಬಾಧೆ ತಟ್ಟಿತು.

ಮನುಷ್ಯನು ತನ್ನ ಕಲ್ಯಾಣವಾಗಬೇಕೆಂದೇ ಸೃಷ್ಟಿಯ ಅಬಾಧಿತ ಕ್ರಿಯೆಯಲ್ಲಿ ಕೈಹಾಕಿ ತನಗೆ ಅನುಕೂಲ ಪರಿಸ್ಥಿತಿಯನ್ನುಂಟುಮಾಡಿಕೊಳ್ಳಲು ಹೆಣಗುತ್ತಿರುವನು. ಆದರೆ ಅದರಿಂದ ವಿರುದ್ಧ ಪರಿಣಾಮಗಳೂ ಆಗುವವು. ಮನುಷ್ಯನು ಮೇಲೆ ಹೇಳಿದ ಸೃಷ್ಟಿಯ ಗುಟ್ಟನ್ನು ಅರಿತುಕೊಂಡರೆ ಅವನು ಅತ್ಯಂತ ಕ್ಷುಲ್ಲಕವೆಂದು ತಿಳಿದ ಒಂದು ಹುಳು ಕೂಡ ಜಗತ್ತಿನ ಕಲ್ಯಾಣಕ್ಕಾಗಿ ಜೀವನವನ್ನು ಸಾಗಿಸುವದೆಂಬ ಕಲ್ಪನೆ ಆತನಿಗೆ ಆಗದಿರದು. ಗೆದ್ದಲಿ ತೀರ ಚಿಕ್ಕದು. ಅದು ಭೂಮಿಯಲ್ಲಿ ಬಿದ್ದ

ಎಲೆ ಸಗಣಿ ಮಣ್ಣು ಮುಂತಾದವನ್ನೆಲ್ಲ ತಿಂದು ತನ್ನ ಮಲದ ಮೂಲಕ ಹೊಲಗಳಿಗೆ ಉತ್ತಮವಾದ ಗೊಬ್ಬರವನ್ನು ಅಣಿಮಾಡುವದು. ಅದರ ಈ ಕಾರ್ಯವನ್ನು ತಿಳಿದ ಬಳಿಕ ತನ್ನ ಬಟ್ಟೆಯನ್ನೋ ಪುಸ್ತಕವನ್ನೋ ನುಂಗಿದ್ದಕ್ಕಾಗಿ ಗೆದ್ದಲಿಯ ಮೇಲೆ ಸಿಟ್ಟಾದ ಮನುಷ್ಯನು ಕೂಡ ಅದರ ವಿಷಯವಾಗಿ ಸಹಾನುಭೂತಿಯನ್ನು ತಾಳಬಹುದಲ್ಲವೆ ?

ಬ್ರಿಟಿಶರು ವಸತಿ ಮಾಡುವದಕ್ಕೆ ಮುಂಚೆ ಆಸ್ಟ್ರೇಲಿಯದಲ್ಲಿ ಮೊಲಗಳಿರಲಿಲ್ಲ. ಈ ಗುಳೆಕಾರರ ಜೊತೆಗೆ ಅಲ್ಲಿ ಮೊಲಗಳು ಸೇರಿ ಮಿತಿ ಮೀರಿ ಬೆಳೆದು ಕುಳಿತಿವೆ. ಹೊಲಗಳ ಪೈರುಗಳೆಲ್ಲ ಅವುಗಳ ಹೊಟ್ಟೆಗೇ ಹೋಗುವಂತಾಗಲು ಸರಕಾರವು ಹೊಲಗಳ ಸುತ್ತಲೂ ಬೇಲಿ ಹಾಕು-ವದು ಮುಂತಾದ ಕೆಲಸಕ್ಕಾಗಿ ಹೇರಳ ಹಣವನ್ನು ವೆಚ್ಚಮಾಡುತ್ತಿರು-ವದು. ಮೊಲಗಳನ್ನು ಒಯ್ಯದಿದ್ದರೆ ಈ ಪ್ರಸಂಗವು ಬರುತ್ತಿರಲಿಲ್ಲ.

ಮೊಲಗಳ ಮಾತನ್ನು ಬಿಡಿರಿ, ಹಾವಿನಂಥ ದುಷ್ಟ ಪ್ರಾಣಿಯ ಉಪಯೋಗವೇನು ? ಅವನ್ನೇಕೆ ನಿಸ್ಸಂತಾನ ಮಾಡಬಾರದು ? ಎಂದು ಕೆಲವರು ಆವೇಶದಿಂದ ಕೇಳಬಹುದು. ಆದರೆ ಹಾವು ಮನುಷ್ಯನ ಕಲ್ಯಾಣಕ್ಕಾಗಿ ಕೆಲಸ ಮಾಡುವದು ಎಂದು ವೈಜ್ಞಾನಿಕರು ಹೇಳಿದರೆ ನಮಗೆ ಮೊದಲು ಆಶ್ಚರಿಯೆನಿಸುವದು. ಹೊಲಗಳಲ್ಲಿರುವ ಅಡವಿಯ ಇಲಿಗಳು ಹಾವುಗಳಿಲ್ಲದಿದ್ದರೆ ಅಪರಿಮಿತವಾಗಿ ಬೆಳೆದು ಬೆಳೆಗಳನ್ನೆಲ್ಲ ತಿಂದುಬಿಡುತ್ತಿದ್ದವೆಂಬದನ್ನು ತಿಳಿಸಿ ಹೇಳಿದಾಗ ನಾವು ಅವರ ಮಾತನ್ನು ಒಪ್ಪುವೆವು.

ಹಿಂದುಸ್ತಾನದಲ್ಲಿ ಮುಳ್ಳುಗಳ್ಳಿ ಹೆಚ್ಚಾಗಿ ಬಾಧೆಮಾಡತೊಡ-ಗಲು ಅದರ ವಿನಾಶಕ್ಕಾಗಿ ಸಿಂಹಲದಿಂದ ಕೆಲವು ಕ್ರಿಮಿಗಳನ್ನು ತಂದು ಬಿಟ್ಟರು. ಈಗ ಅವು ಮುಳ್ಳುಗಳ್ಳಿಯನ್ನು ನಿರ್ಮೂಲಮಾಡಿರುವದೇನೋ ಸರಿ. ಆದರೆ ಅವು ತಮ್ಮ ಕೆಲಸವನ್ನು ಅಷ್ಟಕ್ಕೇ ನಿಲ್ಲಿಸಿಲ್ಲವಂತೆ. ಬಾಳೆ ಬದನೆ ಮೊದಲಾದ ಗಿಡಗಳಿಗೂ ಅಂಟಿಕೊಂಡು ಅವನ್ನು ನಾಶಮಾಡ-ತೊಡಗಿವೆಯೆಂಬ ಕೂಗು ಕೇಳಬರುತ್ತಿದೆ ! ಹೀಗಾದರೆ ಮುಂದೇನು ಗತಿ ?

ಇವೆಲ್ಲ ಉದಾಹರಣೆಗಳ ತಾತ್ಪರ್ಯವನ್ನು ನಾವು ಆಲೋಚಿಸ-ತೊಡಗಿದರೆ ಒಂದು ಮಾತು ನಮ್ಮ ಲಕ್ಷದಲ್ಲಿ ಬರುವದು. ಸೃಷ್ಟಿಯು ಸಾಮಾನ್ಯರಿಗೆ ತೋರುವಂತೆ ಅವ್ಯವಸ್ಥಿತವಾದದ್ದಲ್ಲ. ಅದು ಅತ್ಯಂತ ನಿಯಮಬದ್ಧವಾಗಿರುವದು. ಅದು ತನ್ನ ತಂತ್ರಜಾಲದಿಂದ ಅನೇಕಾ-ನೇಕ ವನಸ್ಪತಿ, ಮನುಷ್ಯ, ಪಶುಪಕ್ಷಿ, ಕ್ರಿಮಿಕೀಟಕ ಮೊದಲಾದ ಪ್ರಾಣಿವರ್ಗದ ಸೃಷ್ಟಿ ಸ್ಥಿತಿ ಲಯಗಳನ್ನು ಉಂಟುಮಾಡುವದು, ಅವು-ಗಳಲ್ಲಿ ತನ್ನ ಸಂಕೇತಕ್ಕೆ ವ್ಯತ್ಯಾಸವಾದರೆ ನಿಯಂತ್ರಣಗೊಳಿಸುವದು. ಸೃಷ್ಟಿಯ ಈ ಅಬಾಧಿತವ್ಯಾಪಾರವನ್ನು ನಾವು ಗಮನಿಸಿದಾಗ ಸದ್ಯದ ಮನುಷ್ಯನು ತನ್ನ ಸಂಕುಚಿತ ಜ್ಞಾನದಿಂದ ಕೆಲವು ಪ್ರಾಣಿಗಳು ನಿರುಪ-ಯುಕ್ತವೆಂದು ಬಗೆದು ಅವನ್ನು ಕೂಡಲೆ ಕೊಲ್ಲಬೇಕೆಂದು ಆತುರ-ಬಡಬಾರದೆಂದೂ ಸೃಷ್ಟಿಯು ಯಾವದೊಂದು ಮಹತ್ವದ ಕಾರ್ಯ-ಕ್ಕಾಗಿಯೇ ಅವನ್ನು ನಿರ್ಮಿಸಿರಬಹುದೆಂದೂ ನಾವು ತಿಳಿಯಬೇಕಾಗುವದು. ಮತ್ತು ತನ್ನ ತಂತ್ರಜಾಲದ ಬಹುಭಾಗವನ್ನು ಇನ್ನೂ ಮನುಷ್ಯನಿಂದ ಮರೆಯಾಗಿಟ್ಟುಕೊಂಡ ರಹಸ್ಯಮಯಳಾದ ಸೃಷ್ಟಿದೇವಿಗೆ ನಾವು ತಲೆ-ವಾಗಬೇಕಾಗುವದು.

**೧. ಈ ಪಾಠದಲ್ಲಿ ಬಂದ ಮಾಹಿತಿಗೆ 'ಸೃಷ್ಟಿಯ ತಂತ್ರಜಾಲ' ಎಂಬ ಮಾತು ಹೇಗೆ ಒಪ್ಪುವದು? ೨. ತಿಂದು ತೇಗು, ಪರಪುಷ್ಟ ವನಸ್ಪತಿ, ಪರಪುಷ್ಟ ಜಂತು, ಸಮತೋಲ ಕಾಯು, 'ಸ್ವಾಹಾ' ಮಾಡು, ಬಾಧೆ ತಟ್ಟು ಈ ಶಬ್ದಸಮೂಹಗಳ ಅರ್ಥವನ್ನು ಹೇಳಿ, ಅದು ಸ್ಪಷ್ಟ-ವಾಗುವಂತೆ ಒಂದೊಂದು ವಾಕ್ಯವನ್ನು ರಚಿಸಿರಿ. ೩. ಒಕ್ಕಲಿಗರಿಗೆ ಹಾವು, ಗೆದ್ದಲಿಹುಳ, ಹಕ್ಕಿಗಳು ಇವುಗಳಿಂದಾಗುವ ಉಪಯೋಗವನ್ನು ವಿವರಿಸಿ ಬರೆಯಿರಿ.**

## ೨೬. ವಿವೇಕಾನಂದ ಸ್ವಾಮಿ

ಜಿತನಿಗೆ ಜೇತಾರನು ತನಗಿಂತ ಶ್ರೇಷ್ಠನೆಂದು ತೋರುವದು ಸಹಜವು. ಜೇತಾರನು ಜಿತನನ್ನು ಹಲವು ವಿಷಯಗಳಲ್ಲಿ ಮೀರಿರುತ್ತಾನೆ; ಅಂತೆಯೇ ಆತನಿಗೆ ಜಯವು ದೊರೆತಿರುವದು. ಆದರೆ ಜೇತಾರನು ಜಿತನಿಗಿಂತ ಎಲ್ಲ ವಿಷಯಗಳಲ್ಲಿಯೂ ಶ್ರೇಷ್ಠನಾಗಿ ಇರುವನೆಂಬ ನಿಯಮವಿಲ್ಲ. ಭಾರತೀಯರು ಹೋದ ಶತಮಾನದ ಪೂರ್ವಾರ್ಧದಲ್ಲಿ ಪಾಶ್ಚಾತ್ಯರಿಗೆ ಅಂಕಿತರಾದ ಬಳಿಕ ಧರ್ಮದಲ್ಲಿಯೂ ತಾವು ಅವರಿಗಿಂತ ಕೀಳರೆಂದು ಹಲವರು ತಿಳಿದುಕೊಳ್ಳಲಾರಂಭಿಸಿದರು. ಈ ಭಾವನೆಯ ದುಷ್ಪರಿಣಾಮವನ್ನು ಭಾರತವು ಅನುಭೋಗಿಸಬೇಕಾಯಿತು. ಇದನ್ನು ಕಂಡು ಮನಮರುಗಿದ ಹಲವು ಜನ ಭಾರತೀಯ ಮಹನೀಯರು ಹಿಂದುಧರ್ಮದ ಶ್ರೇಷ್ಠತೆಯನ್ನು ತಮ್ಮ ದೇಶಬಂಧುಗಳಿಗೆ ಮನಗಾಣಿಸಿಕೊಡುತ್ತ ಬಂದರು. ಜಗತ್ತಿನಲ್ಲಿ ಹಿಂದುಧರ್ಮವೂ ಒಂದು ಶ್ರೇಷ್ಠಧರ್ಮವು ಎಂದು ಜಗತ್ತಿಗೇ ಮನಗಾಣಿಸಿಕೊಟ್ಟವನು, ಬಂಗಾಲದ ತರುಣ ಸಂನ್ಯಾಸಿ ವಿವೇಕಾನಂದಸ್ವಾಮಿ.

ಕಲಕತ್ತೆಯ 'ವಿಶ್ವನಾಥದತ್ತ' ಎಂಬ ಸದ್ಗೃಹಸ್ಥನು ತನ್ನ ಮಡದಿ ಭುವನೇಶ್ವರೀದೇವಿಯ ಗರ್ಭದಲ್ಲಿ ನರೇಂದ್ರನಾಥ ಎಂಬ ಮಗನನ್ನು ೧೮೬೩ ರಲ್ಲಿ ಒಂದು ಶುಭಮುಹೂರ್ತದಲ್ಲಿ ಹಡೆದನು. ಐದನೆಯ ವರ್ಷ ನರೇಂದ್ರನಾಥನಿಗೆ ವಿದ್ಯಾರಂಭವಾಯಿತು. ಈತನ ದೇಹದ ನಿಲುವು, ಗಂಭೀರವಾದ ಮುಖ, ಅಸಾಧಾರಣವಾದ ಪ್ರತಿಭೆ, ಅಸಾಮಾನ್ಯವಾದ ಶಾರೀರಶಕ್ತಿ ಇವು ವಿದ್ಯಾರ್ಥಿದಶೆಯಲ್ಲಿಯೇ ಎಲ್ಲರನ್ನೂ ಮರುಳುಗೊಳಿಸಿದವು. ವಿದ್ಯಾಭ್ಯಾಸವು ಬೆಳೆಯುತ್ತ ಬಂದಂತೆ ಈತನ ಜ್ಞಾನತೃಷ್ಣೆಯೂ ಅತಿಶಯವಾಗಿ ಬೆಳೆಯುತ್ತ ಬಂದಿತು. ಇತಿಹಾಸ, ಸಾಹಿತ್ಯ, ವೇದಾಂತ ಈ ವಿಷಯಗಳಲ್ಲಿ ಇದ್ದ ಎಲ್ಲ ಗ್ರಂಥಗಳನ್ನು ಓದಿದರೂ ಈತನಿಗೆ ತೃಪ್ತಿಯಿಲ್ಲ. ನರೇಂದ್ರನು ತನ್ನ ಜ್ಞಾನತೃಷ್ಣೆಯನ್ನು ತಣಿಸಲು ಆ ಕಾಲದ ಹಲವು ಜನ ವಿದ್ವಾಂಸರನ್ನು ಆಶ್ರಯಿಸಿದನು. ಆದರೆ ಎಲ್ಲಿ ಹೋದರೂ ಈತನ ಜ್ಞಾನತೃಷ್ಣೆಗೆ ಶಾಂತಿಯಿಲ್ಲ.

ಕೊನೆಗೆ ಆ ಕಾಲದಲ್ಲಿ ಬಂಗಾಲದಲ್ಲಿ ಅತಿ ಶ್ರೇಷ್ಠ ತತ್ತ್ವಜ್ಞಾನಿಯೆಂದು ಹೆಸರಾದ ಶ್ರೀರಾಮಕೃಷ್ಣ ಪರಮಹಂಸ ಸ್ವಾಮಿಗೆ ಶರಣುಹೋದನು. ಶ್ರೀರಾಮಕೃಷ್ಣ ಸ್ವಾಮಿಯಿಂದ ಉತ್ತಮ ತತ್ತ್ವಜ್ಞಾನವು ದೊರೆಯಲು ನರೇಂದ್ರನಾಥನು ಆನಂದದಿಂದ ಉಬ್ಬಿಹೋದನು; ತಾನು ಕೃತಕೃತ್ಯನಾದೆನೆಂದು ಬಗೆದನು.



ನರೇಂದ್ರನು ಗುರುವಿಗೆ, "ಸ್ವಾಮಿ, ತಮ್ಮ ಜ್ಞಾನೋಪದೇಶದಿಂದ ಧನ್ಯನಾದೆನು, ಇನ್ನು ತಮ್ಮ ಬಳಿಯಲ್ಲಿಯೇ ಮೋಕ್ಷ ಸಾಧನಮಾರ್ಗದಲ್ಲಿ ಮುಂದಡಿಯಿಡುತ್ತ ನಿಂತುಕೊಳ್ಳುವೆನು," ಎಂದು ಕೇಳಿಕೊಂಡನು. ಆಗ ರಾಮಕೃಷ್ಣ ಪರಮಹಂಸರು, "ಅಯ್ಯಾ, ನೀನು

ಮಹಾಜೀವನವನ್ನು ಸಂಪಾದಿಸಿ, ವಿಶಾಲವಾದ ಆಲದ ಮರದಂತೆ ಸಾವಿರಾರು ಜನರಿಗೆ ಶಾಂತಿಯ ನೆಳಲು ಕೊಡುವದನ್ನು ಬಿಟ್ಟು, ನಿನ್ನೊಬ್ಬನ ಮುಕ್ತಿಗಾಗಿ ಹಾತೊರೆಯುತ್ತಿರುವೆಯಾ ? " ಎಂದು ಕೇಳಿದರು. ಇದರಿಂದ ನರೇಂದ್ರನ ಜೀವನದ ದಾರಿ ಬೇರೆ ಆಯಿತು. ಲೋಕಕಲ್ಯಾಣಕಾರ್ಯವೇ ತನ್ನ ಜೀವನದ ಕರ್ತವ್ಯವೆಂದು ಆತನು ಬಗೆದನು. ಆಗ ರಾಮಕೃಷ್ಣ ಪರಮಹಂಸರು ಶಿಷ್ಯ ನರೇಂದ್ರನಿಗೆ ಸಂನ್ಯಾಸವನ್ನು ಕೊಟ್ಟು 'ವಿವೇಕಾನಂದ' ಎಂಬ ಹೆಸರನ್ನಿಟ್ಟರು. ನರೇಂದ್ರನು 'ವಿವೇಕಾನಂದ ಸ್ವಾಮಿ' ಎಂದು ಪ್ರಸಿದ್ಧನಾದನು. ವಿವೇಕಾನಂದ ಸ್ವಾಮಿಗಳು ಹಿಂದುಧರ್ಮದ ಶ್ರೇಷ್ಠತೆಯನ್ನು ಜಗತ್ತಿನಲ್ಲಿ ಪ್ರಚಾರಗೊಳಿಸುವದೇ ತಮ್ಮ ಮುಖ್ಯ ಕರ್ತವ್ಯವೆಂದು ತಿಳಿದರು.

ವಿವೇಕಾನಂದರು ಈಗ ಹಿಂದುಧರ್ಮದ ಮಹಿಮೆಯನ್ನು ಪ್ರಸಾರಗೊಳಿಸುವದಕ್ಕಾಗಿ ಭರತಖಂಡದಲ್ಲೆಲ್ಲ ಸಂಚಾರ ಮಾಡಿದರು. ಈ ತರುಣಸಂನ್ಯಾಸಿಯ ಉಜ್ವಲಕಾಂತಿ, ಶುಚಿರ್ಭೂತತನ, ಪ್ರತಿಭಾವ್ಯಂಜಕವಾದ ಮುಖಮಂಡಲ, ಅಗಾಧ ಪಾಂಡಿತ್ಯ, ಮಧುರಗಂಭೀರವಾದ ವಾಣಿ, ಅಸಾಧಾರಣವಾದ ಸರಲತನ ಮುಂತಾದವು ಯಾರನ್ನಾದರೂ ತಲೆವಾಗಿಸುತ್ತಿದ್ದವು. ಹೋದಹೋದಲ್ಲೆಲ್ಲ 'ಕರತಲಭಿಕ್ಷಾ ತರುತಲವಾಸ' ಎಂಬಂತೆ ಈ ವಿರಕ್ತಸಾಧು ಭಿಕ್ಷಾನ್ನದಿಂದ ಹಸಿವೆಯನ್ನು ಹಿಂಗಿಸುವನು, ಮರದಡಿಯಲ್ಲಿಯೋ ಬಯಲಲ್ಲಿಯೋ ಮಲಗುವನು ; ಈ ತರದ ಸಾಮಾನ್ಯಜೀವನದಿಂದಲೇ ಈ ಮಹಾನುಭಾವನು ಗಯೆ, ಪ್ರಯಾಗ, ಕಾಶಿ, ಅಯೋಧ್ಯೆ ಮೊದಲಾದ ಉತ್ತರದ ಪುಣ್ಯಕ್ಷೇತ್ರಗಳನ್ನು ಸಂಚರಿಸಿ ದಕ್ಷಿಣದಲ್ಲಿ ರಾಮೇಶ್ವರದ ವರೆಗಿನ ಪ್ರಸಿದ್ಧ ತೀರ್ಥ ಕ್ಷೇತ್ರಗಳ ದರ್ಶನವನ್ನು ಮಾಡಿಕೊಂಡನು.

ಈ ಸಮಯದಲ್ಲಿ ವಿವೇಕಾನಂದರಿಗೆ ತಮ್ಮ ಜೀವನದ ಮಹಾಕರ್ತವ್ಯವನ್ನು ಜರುಗಿಸುವ ಒಂದು ಅಪೂರ್ವ ಪ್ರಸಂಗವು ಒದಗಿತು. ಅಮೇರಿಕೆಯ 'ಚಿಕಾಗೊ' ಪಟ್ಟಣದಲ್ಲಿ ಒಂದು ದೊಡ್ಡ ಧರ್ಮ ಮಹಾಸಭೆ ನೆರೆಯುವದಿತ್ತು. ಅದಕ್ಕಾಗಿ ಜಗತ್ತಿನ ಬೇರೆ ಬೇರೆ ಧರ್ಮಗಳ ಘನಘನ ವಿದ್ವಾಂಸರು ಆಮಂತ್ರಿತರಾಗಿದ್ದರು. ಹಿಂದುಧರ್ಮದ ಪ್ರತಿ-

ನಿಧಿಗೆ ಮಾತ್ರ ಕರೆ ಇಲ್ಲ! ಸ್ವಾಮೀಜಿಯವರ ಶಿಷ್ಯರನೇಕರು ಈ ಧರ್ಮ-ಮಹಾಸಭೆಗೆ ತಾವು ಹೋಗಬೇಕೆಂದು ವಿವೇಕಾನಂದರನ್ನು ಬೇಡಿ-ಕೊಂಡರು. ಹಿಂದುಧರ್ಮದ ಜಯಭೇರಿಯನ್ನು ಹೊಡೆಸುವದಕ್ಕಾಗಿ ಭಾರತಮಾತೆಯ ಈ ಸುಪುತ್ರನು ೧೮೯೩ ರಲ್ಲಿ ಅಮೇರಿಕೆಗೆ ಪ್ರಯಾಣ ಬೆಳೆಸಿದನು.

ಧರ್ಮಮಹಾಸಭೆಯ ಅಧಿವೇಶನಕ್ಕೆ ಇನ್ನು ಮೂರು ತಿಂಗಳು ಇರುವಾಗ ಸ್ವಾಮೀಜಿ ಚಿಕಾಗೊ ನಗರವನ್ನು ಸೇರಿದನು. ಅಲ್ಲಿಯ ಒಬ್ಬಿಬ್ಬರ ನೆರವಿನಿಂದ ಈ ಸ್ವಾಮಿಗೆ ಧರ್ಮಮಹಾಸಭೆಯಲ್ಲಿ ಭಾಷಣ ಮಾಡಲು ಒಪ್ಪಿಗೆ ದೊರೆಯಿತು. ಸಭೆಯ ದಿನಗಳು ಸಮೀಪಿಸಿದವು. ಜಗತ್ತಿನ ಮಹಾ ಮಹಾ ಪಂಡಿತರು ನೆರೆದರು. ಇವರಲ್ಲೆಲ್ಲ ಹಿಂದು ಧರ್ಮದ ಪ್ರತಿನಿಧಿಯಾದ ನಮ್ಮ ಸ್ವಾಮಿಯೇ ಎಲ್ಲರಿಗಿಂತ ಚಿಕ್ಕವನು. ೧೮೯೩ ರ ಸಪ್ಟಂಬರ್ ಹನ್ನೊಂದನೆಯ ತಾರೀಖಿನ ದಿವಸ ಚಿಕಾಗೋ ನಗರದ ಧರ್ಮಮಹಾಸಭೆಯಲ್ಲಿ ವಿವೇಕಾನಂದ ಮಹಾಸ್ವಾಮಿಗಳ ಅಶ್ರುತಪೂರ್ವವಾದ ವ್ಯಾಖ್ಯಾನವಾಯಿತು. ಅದೊಂದು ಹಿಂದುಧರ್ಮದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವ ದಿವಸವು. ಈ ಮಹಾ-ಪುರುಷನು ಗಂಭೀರವಾದ ಧ್ವನಿಯಿಂದ ಓಜಸ್ವಿಯಾದ ಅಸ್ಖಲಿತ ಭಾಷೆ-ಯಲ್ಲಿ ಹಿಂದುಧರ್ಮದ ತತ್ತ್ವಗಳ ಶ್ರೇಷ್ಠತೆಯನ್ನು ಜಗತ್ತಿನ ಪಂಡಿತ-ರಿದಿರಿಗೆ ಪ್ರಸ್ಥಾಪಿಸುತ್ತಿರುವಾಗ ಸಭೆಯೆಲ್ಲ ಧನ್ಯ ಧನ್ಯ ಎಂದು ತನ್ನ ಆನಂದವನ್ನು ಪ್ರಕಟಿಸಿತು! ಹಿಂದುಧರ್ಮದ ವಿಷಯದಲ್ಲಿ ಜಗತ್ತಿನಲ್ಲಿದ್ದ ಅಜ್ಞಾನವು ಅಳಿಯಿತು. ಹಿಂದುಧರ್ಮವು ಒಳ್ಳೆಯ ತತ್ತ್ವಗಳ ತಳ-ಹದಿಯ ಮೇಲೆ ನೆಲೆಸಿದ ಒಂದು ಶ್ರೇಷ್ಠಧರ್ಮವೆಂಬ ಭಾವನೆ ಜಗತ್ತಿನಲ್ಲಿ ಹರಡಿತು. ಜಗತ್ತಿನ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ವಿವೇಕಾನಂದ ಸ್ವಾಮೀಜಿಯ ಪ್ರಸಿದ್ಧಿ ಸ್ವಲ್ಪ ಕಾಲದಲ್ಲಿ ಹರಡಿತು. ಸ್ವಾಮೀಜಿಯ ಈ ಕಾರ್ಯಕ್ಕಾಗಿ ಪ್ರತಿಯೊಬ್ಬ ಹಿಂದುಧರ್ಮೀಯನು ಆ ಮಹಾನುಭಾವನಿಗೆ ಚಿರಋಣಿಯಾದನೆಂದು ಹೇಳಬಹುದು.

ವಿವೇಕಾನಂದರು ಚಿಕಾಗೊ ನಗರದಿಂದ ತಿರುಗಿ ಬರುವಾಗ ಇಂಗ್ಲಂಡ್ ಮುಂತಾದ ಯುರೋಪಖಂಡದ ದೇಶಗಳಲ್ಲಿ ಸಂಚರಿಸಿ

ಹಿಂದುಧರ್ಮದ ವಿಷಯವಾಗಿ ವ್ಯಾಖ್ಯಾನಗಳನ್ನು ಕೊಟ್ಟರು. ಭರತ-ಖಂಡಕ್ಕೆ ಬಂದ ಬಳಿಕ ಹಿಂದುಗಳು ಅವರಿಗೆ ಅಪೂರ್ವವಾದ ಸತ್ಕಾರ-ವನ್ನು ಮಾಡಿದರು; ಈ ವಿಜಯಿ ಭಾರತಪುತ್ರನಿಗೆ ಅಂತಃಕರಣದ ಕೃತಜ್ಞತೆಯನ್ನು ತೋರ್ಪಡಿಸಿದರು.

ಸ್ವಾಮೀಜಿಯು ಜನ್ಮಭೂಮಿಗೆ ಮರಳಿ ಬಂದಬಳಿಕ ೧೮೯೭ ರಲ್ಲಿ ಶ್ರೀರಾಮಕೃಷ್ಣ ಮಿಶನ್ ಎಂಬ ಸೇವಾಸಂಘವನ್ನು ಸ್ಥಾಪಿಸಿದನು. ದೀನಾನಾಥರ ಸೇವೆಮಾಡುವ ಈ ಸಂಘವು ಸುಚರಿತ್ರರೂ ಸುಶಿಕ್ಷಿತರೂ ಆದ ತರುಣ ಸಂನ್ಯಾಸಿಗಳಿಂದ ಘಟಿತವಾಗಿರುವದು.

ಶರೀರದ ಮೇಲೆ ಮೋಹವನ್ನಿಟ್ಟುಕೊಳ್ಳದೆ ಹಲವು ವರ್ಷ ಒಂದೇ ಸವನೆ ಮಾಡಿದ ಸಂಚಾರದಿಂದ ಸ್ವಾಮೀಜಿಯ ಸುದೃಢವಾದ ಪ್ರಕೃತಿ ಕೂಡ ಅಸ್ವಸ್ಥವಾಯಿತು. ಈ ಕರ್ಮಯೋಗಿಯ ಆಯುಷ್ಯದ ಒಂದು ಕ್ಷಣವು ಕೂಡ ವ್ಯರ್ಥ ಹೋಗಲಿಲ್ಲ. ಇಂತು ಆಯುಷ್ಯವನ್ನೆಲ್ಲ ಭರತ ಭೂಮಿಗೆ ಗೌರವವನ್ನು ತರುವ ಕಾರ್ಯಗಳಲ್ಲಿ ವ್ಯಯಮಾಡಿ ಈ ಮಹಾ-ಪುರುಷನು ೧೯೦೨ ನೆಯ ಜುಲಾಯಿ ತಿಂಗಳಲ್ಲಿ ಚಿರವಿಶ್ರಾಂತಿಯನ್ನು ಪಡೆದನು.

ವಿವೇಕಾನಂದ ಸ್ವಾಮಿಗಳು ಭಾರತವಾಸಿಗಳನ್ನು ಕುರಿತು ಈ ಮೇರೆಗೆ ಉಪದೇಶ ಮಾಡಿರುವರು :— "ಭಾರತವಾಸಿಗಳೇ, ನಿಮ್ಮ ದೇಶದ ಒಬ್ಬ ಕಂಗಾಲನು, ಅಷ್ಟೇ ಏಕೆ, ಒಂದು ನಾಯಿ ಕೂಡ ಹಸಿ-ದಿರುವಾಗ ಆ ಪ್ರಾಣಿಗೆ ಅನ್ನವನ್ನು ನೀಡುವದರ ಹೊರತು ನಿಮಗೆ ಬೇರೆ ಶ್ರೇಷ್ಠ ಧರ್ಮವಿಲ್ಲ. ಭಾರತೀಯರೇ, ಕೀಳುಜಾತಿ ಮೇಲುಜಾತಿ, ಪಂಡಿತ ಪಾಮರ, ಹೆಂಗುಸು ಗಂಡುಸು, ಎಲ್ಲರೂ ಒಂದೇ ರಕ್ತದವರು ; ನೀವೆ-ಲ್ಲರೂ ಅಣ್ಣತಮ್ಮಂದಿರು, ಅಕ್ಕತಂಗಿಯರು ;—ಭಾರತ ವಾಸಿಗಳು ನನ್ನ ಅಣ್ಣತಮ್ಮಂದಿರು, ಭಾರತವಾಸಿಗಳು ನನ್ನ ಪ್ರಾಣವು. ಭಾರತದ ಮಣ್ಣು ನನಗೆ ಸ್ವರ್ಗಲೋಕವು ; ಭಾರತದ ಕಲ್ಯಾಣವೇ ನನ್ನ ಕಲ್ಯಾಣವು."

ಅಸಾಧಾರಣ ಶಕ್ತಿಸಂಪನ್ನರಾಗಿ ಜನಿಸಿ ಲೋಕಕಲ್ಯಾಣದಲ್ಲಿಯೇ ತಮ್ಮ ಆಯುಷ್ಯವನ್ನು ಕಳೆಯುವ ಮಹಾಪುರುಷರು ಎಲ್ಲ ಕಾಲದಲ್ಲಿ

ಜನಿಸುವದಿಲ್ಲ. ದೇಶದ ಪುಣ್ಯವು ಒದಗಿಬಂದಾಗ ವಿವೇಕಾನಂದರಂಥ ಮಹಾವಿಭೂತಿಗಳು ಜನ್ಮತಾಳುವವು. ಅವುಗಳಿಂದ ದೇಶದ ಒಂದು ಮಹಾಕಾರ್ಯವು ಈಡೇರುವದು.

—ಮ. ಪ್ರ. ಪೂಜಾರ.

---

೧. ಪಾಶ್ಚಾತ್ಯರು ಯಾವ ಸಂಗತಿಗಳಲ್ಲಿ ನಿಜವಾಗಿಯೂ ಪೌರ್ವಾತ್ಯ-ರಿಗಿಂತ ಹೆಚ್ಚಳ ಪಡೆದಿರುವರು? ೨. ಪಾಶ್ಚಾತ್ಯರಿಂದ ನಾವು ಕಲಿತು-ಕೊಳ್ಳಬಹುದಾದ ನಾಲ್ಕು ಮಾತುಗಳನ್ನು ಹೇಳಿರಿ. ೩. ಸ್ವಾಮಿ ವಿವೇಕಾನಂದರು ಅಮೇರಿಕೆಗೆ ಹೋದದ್ದೇಕೆ? ಅಲ್ಲಿಯ ಅವರ ವ್ಯಾಖ್ಯಾನ-ದಿಂದ ಲೋಕದಲ್ಲೆಲ್ಲ ಅವರ ಪ್ರಸಿದ್ಧಿ ಆಗಲು ಕಾರಣಗಳೇನಾದವು? ೪. ಸ್ವಾಮೀಜಿಯವರ ಯಾವ ಗುಣಗಳ ಮೂಲಕ ಅವರ ಮಹಿಮೆ ಅತಿ ತೀವ್ರವಾಗಿ ಹರಡಿತು? ೫. ರಾಮಕೃಷ್ಣ ಪರಮಹಂಸರು ಯಾರು? ಇವರು ಸ್ವಾಮೀಜಿಯವರ ಬಾಳುವೆಯಲ್ಲಿ ಯಾವ ಹೆಚ್ಚುಕಡಿಮೆಗಳಾಗಲು ಕಾರಣವಾದರು? ೬. ಮನಗಾಣಿಸು, ಈಡೇರು, ತಣಿಸು, ಶರಣು ಹೋಗು, ಈ ಶಬ್ದಗಳನ್ನು ಉಪಯೋಗಿಸಿ ಸ್ಪಷ್ಟವಾಗಿ ಅರ್ಥವಾಗುವ ಒಂದೊಂದು ವಾಕ್ಯವನ್ನು ರಚಿಸಿರಿ.

## ೨೭. ರಣಯಜ್ಞದ ಆರಂಭ

[ ನರಸಿಂಹ ಧೋಂಡೋ ಮುಳಬಾಗಿಲ ಇವರು ಕನ್ನಡದಲ್ಲಿ ರಚಿಸಿದ 'ವೇಣೀಸಂಹಾರ' ನಾಟಕದಿಂದ ಈ ಭಾಗವನ್ನು ಆರಿಸಿಕೊಳ್ಳಲಾಗಿದೆ. ದುರ್ಯೋಧನನ ರಕ್ತದಿಂದಲೇ ತನ್ನ ಹೆಳಲನ್ನು ಕಟ್ಟಬೇಕೆಂಬ ದ್ರೌಪದಿಯು ಪ್ರತಿಜ್ಞೆಯು ಪೂರೈಸಿದ ಕಥಾಭಾಗವು ಈ ನಾಟಕದ ವಸ್ತುವಾಗಿದೆ. ಈ ನಾಟಕವು ಅನೇಕ ರಸಗಳಿಂದ ಕೂಡಿ ಒಳ್ಳೇ ಪರಿಣಾಮಕಾರಿಯಾಗಿದೆ. ಕೌರವರೊಡನೆ ಪಾಂಡವರು ಸಂಧಿಮಾಡಿಕೊಳ್ಳಲಿರುವ ಸುದ್ದಿಯನ್ನು ಕೇಳಿ ದ್ರೌಪದಿ ಸಿಟ್ಟಾಗಿ ತನ್ನ ಪ್ರತಿಜ್ಞೆಯನ್ನು ಪೂರೈಸುವಂತೆ ಭೀಮನನ್ನು ಆವೇಶಗೊಳಿಸಿದ ಕಥಾಭಾಗ ಇಲ್ಲಿ ಬಂದಿದೆ.]

ಸ್ಥಳ: ದ್ರೌಪದಿಯ ಚತುಃಶಾಲೆ.

( ಭೀಮನು ಸಿಟ್ಟಿನಿಂದ ನೆಲದಮೇಲೆ ಕೂತಿದ್ದಾನೆ; ಸಹದೇವನು ಆತನ ಬಳಿಯಲ್ಲಿದ್ದಾನೆ.)

( ತೆರೆಯಲ್ಲಿ ಶಬ್ದವಾಗುತ್ತದೆ) ಅಮ್ಮಾ! ಅಳಬೇಡಿರಿ!

**ಸಹದೇವ:—** (ತೆರೆಯ ಕಡೆಗೆ ನೋಡಿ ತನ್ನೊಳಗೇ ಮಾತಾಡು-ತ್ತಾನೆ) ಎಲಾ ಇದೇನು? ದ್ರೌಪದಿಯು ಮೇಲಿಂದ ಮೇಲೆ ಬರುವ ಕಣ್ಣೀರುಗಳನ್ನು ಸುರಿಸುತ್ತ ಭೀಮಣ್ಣನ ಹತ್ತರ ಬರುತ್ತಾಳಲ್ಲ? ಇದೇನೋ ಬಹಳ ಅನರ್ಥವು ಬಂತೆಂದು ತೋರುತ್ತದೆ. ಇಂದು ಮೊದಲೇ ಅಣ್ಣನಿಗೆ ಸಿಡಿಲಿನಂತಹ ಸಿಟ್ಟು ಬಂದದೆ, ಅದನ್ನು ಈ ಕೃಷ್ಣೆಯು ಮಳೆಗಾಲದಂತೆ ಬಂದು ಹೆಚ್ಚುಮಾಡುತ್ತಾಳೆ. ಆಗುವದಾಗಲಿ.

(ದ್ರೌಪದಿಯೂ ಆಕೆಯ ದಾಸಿಯೂ ಬರುತ್ತಾರೆ. ದ್ರೌಪದಿಯು ಕಣ್ಣೀರು ಸುರಿಸುತ್ತ ಉಸಿರುಬಿಡುತ್ತಾಳೆ.)

**ಭೀಮ:—** (ಸಿಟ್ಟಿನಿಂದ ಸಹದೇವನನ್ನು ನೋಡಿ) ಏನೇನು? ಅಯ್ದೂರುಗಳನ್ನು ಇಸುಕೊಂಡು ಸಂಧಿಯೇ? ಅಂದಮೇಲೆ ಕಾಳಗದಲ್ಲಿ ನೂರು ಮಂದಿ ಕೌರವರನ್ನು ಕೊಲ್ಲಬಾರದೇನು? ಅತಿಕೋಪದಿಂದ ದುಃಶಾಸನನ ಎದೆಯ ನೆತ್ತರವನ್ನು ಕುಡಿಯಬಾರದೇನು? ಗದೆಯಿಂದ ಸುಯೋಧನನ ತೊಡೆಗಳನ್ನು ಮುರಿಯುವದು ಇಲ್ಲೇನು? ಸಹದೇವಾ, ಇಲ್ಲದಿದ್ದರೆ ಇಲ್ಲ, ಬಿಡು. ನಿಮ್ಮ ಅರಸು ಅಯ್ದೂರುಗಳಿಂದ ಸಂಧಿಯ ಮಾಡಲಿ.

**ದ್ರೌಪದಿ:—** (ಕೇಳಿ ಹರ್ಷದಿಂದ ತನ್ನೊಳಗೇ ಮಾತಾಡುತ್ತಾಳೆ.) ಪ್ರಾಣಪತಿಗಳೇ, ಇಂತಹ ನಿಮ್ಮ ಮಾತುಗಳನ್ನು ನಾನು ಮೊದಲು ಎಂದೂ ಕೇಳಲಿಲ್ಲ.

**ಭೀಮ:—** ಸಹದೇವಾ, ಈ ಸಂಧಿಯು ನಿರರ್ಥಕವಾದದ್ದು. ನಾವೆಲ್ಲಾ ರಾಜ್ಯವನ್ನು ಬಿಟ್ಟು ವನಕ್ಕೆ ಹೊರಟು, ಕುರುಕುಲವನ್ನು ಸಂಹರಿಸುವ ಪಂಥವನ್ನು ಮಾಡಿದಾಗಲೇ ಕೌರವರ ಸಂಗಡ ಸಂಧಿಯು

ಅಯೋಗ್ಯವೆಂದು ನಿರ್ಣಯವಾಗಿಹೋಗಿದೆ; ಧಾರ್ತರಾಷ್ಟ್ರರ ಕುಲಕ್ಷಯ-ವಾಗುವದಂತೂ ಲೋಕದಲ್ಲಿ ಪ್ರಸಿದ್ಧವಾಗೇ ಇರುವದು.

( ಸಹದೇವನು ನಾಚಿಕೊಳ್ಳುತ್ತಾನೆ. )

**ಭೀಮ :—** ಏನು ? ಸಹದೇವಾ, ಕುರುಕುಲಕ್ಷಯವೆಂದರೆ ನಿಮಗೆ ನಾಚಿಕೆ ಬರುತ್ತದೇನು ? ಅಯ್ಯೋ, ಅಜ್ಞಾನಿಗಳಿರಾ, ದ್ವೇಷ-ಮೂಲಕವಾಗಿ ಶತ್ರುಕುಲವನ್ನು ಸಂಹರಿಸಲಿಕ್ಕೆ ನೀವು ನಾಚುತ್ತೀರಿ ; ರಾಜಸಭೆಯಲ್ಲಿ ಧರ್ಮಪತ್ನಿಯ ತುರುಬನ್ನು ಪಾಪಿಯು ಹಿಡಿದು ಜಗ್ಗಿದರೆ ಮಾತ್ರ ನಿಮಗೆ ನಾಚಿಕೆ ಬರುವದಿಲ್ಲ, ಅಲ್ಲವೇ ?

**ದ್ರೌಪದಿ:—** ( ತನ್ನೊಳಗೇ ಮಾತಾಡುತ್ತಾಳೆ ) ಪ್ರಾಣಕಾಂತರೇ, ಇವರಿಗೆ ಏನಾದರೂ ನಾಚಿಕೆಯಿಲ್ಲ; ನನ್ನ ಮಾನಾಪಮಾನಗಳು ನಿಮ್ಮನ್ನು ಕೂಡಿರುತ್ತವೆ; ನೀವು ಮಾತ್ರ ನನ್ನ ಮರೆಯಬೇಡಿರಿ, ಕಂಡಿರಾ.

**ಭೀಮ :—** ವತ್ಸಾ, ಪಾಂಚಾಲಿಯು ಏಕೆ ತಡಮಾಡುತ್ತಿದ್ದಾಳು? ಕಾಳಗಕ್ಕೆ ಹೋಗಬೇಕೆಂದು ನನ್ನ ಮನಸ್ಸು ಅವಸರಪಡುತ್ತದೆ.

**ಸಹದೇವ :—** ಅಣ್ಣಾ, ಆ ದೇವಿಯು ಬಂದು ಎಷ್ಟು ಹೊತ್ತಾಗಿ ಹೋಯಿತು ? ಆದರೆ ತಾವು ಸಿಟ್ಟಿನಲ್ಲಿದ್ದದರಿಂದ ನೋಡೇ ಇಲ್ಲ.

**ಭೀಮ :—** ( ನೋಡಿ ಆದರದಿಂದ ) ದೇವೀ, ನಾನು ಬಹಳ ಸಿಟ್ಟಿನಲ್ಲಿ ಇದ್ದದರಿಂದ ನೀನು ಬಂದು ನಿಂತಿದ್ದರೂ ನಿನ್ನನ್ನು ನೋಡಲಿಲ್ಲ; ಆದದರಿಂದ ನೀನು ಸಿಟ್ಟಾಗಬಾರದು.

**ದ್ರೌಪದಿ :—** ಪ್ರಾಣಕಾಂತರೇ, ನೀವು ಉದಾಸೀನರಾಗಿದ್ದರೆ ಮಾತ್ರ ನನಗೆ ಸಿಟ್ಟು ಬರುತ್ತದೆ ಹೊರತು, ನೀವು ಸಿಟ್ಟಿಗೆದ್ದರೆ ನನಗೆ ಹಿತವಾಗುತ್ತದೆ.

**ಭೀಮ :—** ಹೀಗಿದ್ದರೆ ನಿನ್ನ ಎಲ್ಲಾ ದುಃಖಗಳು ದೂರವಾದ-ವೆಂದು ತಿಳುಕೋ.

**ದ್ರೌಪದಿ :—** ( ಖೇದದಿಂದ ಉಸುರು ಬಿಡುತ್ತಾಳೆ. )

**ಭೀಮ :—** ( ದ್ರೌಪದಿಯ ಕಯ್ಯ ಹಿಡಿದು ತನ್ನ ಬಲಗಡೆಗೆ ಕೂಡಿಸಿ-ಕೊಂಡು ಮುಖವನ್ನು ನೋಡಿ ) ಪ್ರಾಣಸಖಿಯೇ, ಈವೊತ್ತು ನೀನು ಏನೋ ಚಿಂತೆಯೊಳಗಿದ್ದಂತೆ ತೋರುತ್ತದೆ.

**ದಾಸಿ :—** ಯುವರಾಜರೇ, ದೇವಿಯವರಿಗೆ ಖೇದವಾಗಲಿಕ್ಕೆ ಈವೊತ್ತು ಇದಕ್ಕೂ ಹೆಚ್ಚಿನ ಕಾರಣವಾಗಿದೆ.

**ಭೀಮ :—** ಏನು ಏನು ? ಇದಕ್ಕೂ ಹೆಚ್ಚಿನ ಕಾರಣವೆ? ಅದೇನು ? ಹೇಳು, ಬೇಗ ಹೇಳು. ಹೊಗೆಯಿಂದ ಕೂಡಿದ ಉರಿಯಂತೆ, ತಲೆಗೂದಲುಗಳನ್ನು ಬಿಚ್ಚಿ ವ್ರತದಿಂದಿರುವ ಈ ಕೃಷ್ಣೆಯನ್ನು ಸ್ಪರ್ಶ-ಮಾಡಿ, ಕುರುಕುಲದ ಬೇಗೆಯಂತಿರುವ ನನ್ನಲ್ಲಿ ದೀಪದ ಹುಳದಂತೆ ಬಿದ್ದು ಸಾಯಲಿಚ್ಛಿಸಿದವನು ಅದಾರು ? ಹೇಳು.

**ದಾಸಿ :—** ದೊರೆಗಳೇ ! ಕೇಳಬೇಕು. ಈವೊತ್ತು ದೇವಿಯವರು ಸುಭದ್ರಾದೇವಿ ಮುಂತಾದ ತಮ್ಮ ಅಕ್ಕತಂಗಿಯರನ್ನು ಕೂಡಿಕೊಂಡು, ಗಾಂಧಾರಮ್ಮನವರ ಪಾದವಂದನೆಗೆ ಹೋಗಿದ್ದರು.

**ಭೀಮ :—** ಯೋಗ್ಯವದೆ, ಹಿರಿಯರಿಗೆ ಸನ್ಮಾನಮಾಡತಕ್ಕದ್ದು. ಅಲ್ಲಿಂದ ?

**ದಾಸಿ :—** ಅಲ್ಲಿಂದ ತಿರುಗಿ ಬರುವಾಗ ದೇವಿಯವರನ್ನು ಭಾನುಮತಿಯಮ್ಮನವರು ನೋಡಿದರು.

**ಭೀಮ :—** ( ಸಿಟ್ಟಿನಿಂದ ) ಆ ! ಹಗೆಯ ಹೆಂಡತಿಯು ನೋಡಿದಳೇ ? ಅದಕ್ಕಂತೇ ದೇವಿಗೆ ಇಷ್ಟು ಕ್ಲೇಶವಾಯಿತು ; ಯೋಗ್ಯವದೆ, ಮುಂದೆ ?

**ದಾಸಿ :—** ಅಲ್ಲಿಂದ ಅವರು ದೇವಿಯವರನ್ನು ನೋಡಿ, ತಮ್ಮ ಸಖಿಯರ ಕಡೆಗೆ ತಿರುಗಿ, ಗರ್ವದಿಂದ ನಗುತ್ತ ಮಾತಾಡಿದರು.

**ಭೀಮ :—** ಹಾಗಾದರೆ ನೋಡಿದ್ದಷ್ಟೇ ಅಲ್ಲ, ಮಾತನ್ನಾಡಿದಳೇ? ಅಯ್ಯೋ ಏನು ಮಾಡಲಿ ? ಅಲ್ಲಿಂದ ಮುಂದೆ ?

**ದಾಸಿ :—** ಅವರು ಅಂದದ್ದು : ಅವ್ವಾ ಯಾಜ್ಞಸೇನಿ, ನಿಮ್ಮ-ವರು ಅಯ್ದು ಗ್ರಾಮಗಳನ್ನು ಬೇಡುತ್ತಾರೆಂದು ಕೇಳುತ್ತೇವೆ ; ಅಂದ ಮೇಲೆ ನೀನು ಇನ್ನೂ ಏಕೆ ಹೆರಳುಹಾಕಿಕೊಳ್ಳುವದಿಲ್ಲ ?

**ಭೀಮ** :— ಸಹದೇವಾ, ಕೇಳಿದೆಯಾ ?

**ಸಹದೇವ** :— ಅಣ್ಣಾ, ಕೇಳುವದೇನದೆ ? ಆಕೆಯು ದುರ್ಯೋಧನನ ಹೆಂಡತಿಯಲ್ಲೇ ? ಸಹವಾಸಯೋಗದಿಂದ ಹೆಂಗಸರಿಗೆ ಪತಿಯ ಸ್ವಭಾವವು ಬರುತ್ತದೆ. ವಿಷವೃಕ್ಷಕ್ಕೆ ಹಬ್ಬಿದ ಬಳ್ಳಿಯು ಮಧುರವಾಗಿದ್ದರೂ ಎಚ್ಚರಗೆಡಿಸುತ್ತದೆ.

**ಭೀಮ** :— ಬುದ್ಧಿಮತಿಕೇ, ಅದಕ್ಕೆ ದೇವಿಯು ಏನಂದಳು ?

**ದಾಸಿ** :— ಸ್ವಾಮಿಾ, ದಾಸೀಜನರಿಗೆ ಕೊರತೆಯಿದ್ದರೆ ದೇವಿಯುವರು ಮಾತಾಡುತ್ತಿದ್ದರು.

**ಭೀಮ** :— ಭಲೆ ! ವಿಹಿತವದೆ. ನೀನಾದರೂ ಏನುತ್ತರಕೊಟ್ಟೆ ?

**ದಾಸಿ** :— ದೊರೆಗಳೇ, ನಾನು ಹೀಗಂದೆನು : ಭಾನುಮತಿಯಮ್ಮನವರೇ, ನೀವು ನಿಮ್ಮ ತಲೆಗೂದಲುಗಳನ್ನು ಬಿಚ್ಚಿಬಿಡದೆ, ನಮ್ಮ ದೇವಿಯುವರು ಹೇಗೆ ಹೆಳಲು ಹಾಕಿಕೊಳ್ಳಬೇಕು ?

**ಭೀಮ** :— ( ಆನಂದದಿಂದ ) ಶಾಬಾಸ್, ಬುದ್ಧಿಮತಿಕೇ ಶಾಬಾಸ್, ನಮ್ಮ ಸೇವಕ ಜನರು ಆಡತಕ್ಕ ಮಾತನ್ನೇ ಆಡಿದೆ. ( ಎಂದು ತನ್ನ ಮೈಮೇಲಿನ ಅಲಂಕಾರಗಳನ್ನು ಮೆಚ್ಚುಕೊಡುತ್ತ ಎದ್ದು ನಿಂತು ) ಪಾಂಚಾಲ ರಾಜಪುತ್ರೀ, ದುಃಖಿಸಬೇಡ, ಬಹಳ ಮಾತುಗಳಿಂದ ಫಲವೇನು ? ಸ್ವಲ್ಪ ದಿನಗಳಲ್ಲಿ ಮಾಡುವದನ್ನು ಹೇಳುತ್ತೇನೆ ಕೇಳು ; ಚಪಲವಾದ ತೋಳುಗಳಿಂದ ಗರಗರನೆ ತಿರುಗುವ ತೀಕ್ಷ್ಣವಾದ ನನ್ನ ಗದೆಯ ಹೊಡತದಿಂದ ಮುರಿದು ಹೋದ ತೊಡೆಗಳ ಸುಯೋಧನನ ದಟ್ಟವಾದ ನೆತ್ತರದ ಕೆಸರು ಹತ್ತಿ ಕೆಂಪಾದ ಕಯ್ಗಳುಳ್ಳ ಭೀಮನು ನಿನ್ನ ಕೂದಲುಗಳನ್ನು ಹೆಣೆದು ಹೆಳಲು ಹಾಕುತ್ತಾನೆ. ತಿಳಿಯಿತೇ !

**ದ್ರೌಪದಿ** :— ಪ್ರಾಣಪತಿಗಳೇ, ನೀವು ಸಿಟ್ಟಾದರೆ ಅದಾವ ಕೆಲಸವು ಅಸಾಧ್ಯವದೆ ? ಈ ಮಾತಿಗೆ ನಿಮ್ಮ ಸಹೋದರರು ಅನುಕೂಲರಾಗಬೇಕು ಮಾತ್ರ.

**ಸಹದೇವ**:— ಸಂಶಯವೇತಕ್ಕೆ ? ಈ ಮಾತಿಗೆ ನಾವೆಲ್ಲರೂ ಅನುಕೂಲರಾಗಿದ್ದೇವೆ.

( ಅಷ್ಟರಲ್ಲಿ ತೆರೆಯಲ್ಲಿ ಕಲಕಲ ಧ್ವನಿಯಾಗುತ್ತದೆ. ಎಲ್ಲರೂ ವಿಸ್ಮಯದಿಂದ ಕೇಳುತ್ತಾರೆ. )

ಎಲಯ್, ದ್ರುಪದ ವಿರಾಟ ವೃಷ್ಣಿ ಅಂಧಕ ಸಹದೇವ ಪ್ರಮುಖರಾದ ನಮ್ಮ ಸೇನಾಪತಿಗಳಿರಾ, ಎಲಯ್, ಕೌರವ ಸೇನೆಯ ಮುಖ್ಯ ವೀರರೇ ಕೇಳಿರಿ :—

ಸತ್ಯವ್ರತಕ್ಕೆ ಭಂಗವಾದೀತೆಂಬ ಮನಸ್ಸಿನಿಂದ ಅಂಜಿ, ಪ್ರಯಾಸದಿಂದ ಯಾವದನ್ನು ತಾಳಿಕೊಂಡನೋ, ಶಾಂತನಾದ್ದರಿಂದ ಕುರುಕುಲಕ್ಕೆ ಕ್ಷೇಮವಾಗಲೆಂದು ಯಾವದನ್ನು ಮರೆತುಬಿಡಲಿಕ್ಕೂ ಮನಸ್ಸು ಮಾಡಿದನೋ, ಅಂತಹ ದ್ಯೂತಕಾಷ್ಠದಿಂದ ಹುಟ್ಟಿದ ಯುಧಿಷ್ಠಿರನ ಕೋಪಾಗ್ನಿಯು ದ್ರುಪದರಾಜ ಕುಮಾರಿಯ ಕೇಶಾಂಬರಾಕರ್ಷಣ ಸ್ಮರಣೆಯಿಂದ ಕುರುಕುಲವೆಂಬ ವನದಲ್ಲಿ ಪಸರಿಸುತ್ತದೆ.

**ಭೀಮ :—** ( ಕೇಳಿ ಹರ್ಷದಿಂದಲೂ ಕೋಪದಿಂದಲೂ ) ಪಸರಿಸಲಿ, ಪಸರಿಸಲಿ, ಅಣ್ಣನ ಕೋಪಾಗ್ನಿಯು ನಿರ್ವಿಘ್ನವಾಗಿ ಪಸರಿಸಲಿ !

( ಇಷ್ಟರಲ್ಲಿ ತೆರೆಯೊಳಗೆ ಮತ್ತೆ ಕೋಲಾಹಲವಾಗುತ್ತದೆ. )

**ದ್ರೌಪದಿ :—** ಪ್ರಾಣಪ್ರಿಯರೇ, ಇದೇನು ? ಕಡೆಗಾಲದ ಮೋಡಗಳ ಮಹಾಗರ್ಜನೆಯಂತೆ ಗಂಭೀರವಾದ ಸಮರ ದುಂದುಭಿಯ ಬಹಳ ಸಪ್ಪಳವು ಕ್ಷಣಕ್ಷಣಕ್ಕೆ ಆಗುತ್ತದೆ !

**ಭೀಮ :—** ಮತ್ತೇನದೆ ? ಯಜ್ಞವು ಆರಂಭವಾಗುತ್ತದೆ.

**ದ್ರೌಪದಿ :—** (ವಿಸ್ಮಯದಿಂದ) ಸ್ವಾಮಿ, ಇದು ಯಾವ ಯಜ್ಞವು ?

**ಭೀಮ :—** ಪ್ರಿಯಳೇ, ಇದು ರಣಯಜ್ಞವು. ಹೇಗಂದರೆ— ನಾವು (ಭೀಮಾದಿ) ನಾಲ್ಕು ಜನರು ಋತ್ವಿಜರು ; ಸಾಕ್ಷಾತ್ ಭಗವಂತನು ಶ್ರೀಹರಿಯು ಕರ್ಮೋಪದೇಶಕನು ; ನಮ್ಮ ಅರಸು ರಣಯಜ್ಞದಲ್ಲಿ ದೀಕ್ಷಿತನು ; ಆತನ ಧರ್ಮಪತ್ನಿಯಾದ ನೀನು ವ್ರತಸ್ಥಳಾಗಿಯೇ ಇರುತ್ತೀ ; ಕೌರವರು ಯಜ್ಞಪಶುಗಳು ; ಪ್ರಾಣಪ್ರಿಯಳ ಮಾನಭಂಗ ದುಃಖದ ಸಮಾಧಾನವೇ ಯಜ್ಞಫಲವು ; ರಾಜಶ್ರೇಷ್ಠರನ್ನು ಕರೆಯು-

ವದಕ್ಕಾಗಿ ವಿಜಯದುಂದುಭಿಯು ಇಷ್ಟು ಅಬ್ಬರದಿಂದ ಬಾರಿಸ-ಲ್ಪಡುತ್ತದೆ.

**ಸಹದೇವ :—** ಅಣ್ಣಾ, ಇನ್ನು ನಾವು ಹಿರಿಯರ ಅಪ್ಪಣೆ-ಯಿಂದ ನಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಉದ್ಯೋಗಗಳನ್ನು ಮಾಡಲಿಕ್ಕೆ ಹೋಗೋಣ.

**ಭೀಮ :—** ಇಕೋ ನೋಡು, ನಾವು ಅಣ್ಣನ ಅಪ್ಪಣೆಯಂತೆ ನಡೆಯಲಿಕ್ಕೆ ಸಿದ್ಧರಾಗಿಯೇ ನಿಂತಿದ್ದೇವೆ. ( ಎಂದು ಎದ್ದು ನಿಂತು ) ಪ್ರಿಯಳೇ ! ಇನ್ನು ನಾವು ಕುರುಕುಲ ಸಂಹಾರಕ್ಕೆ ಹೋಗುತ್ತೇವೆ.

**ದ್ರೌಪದಿ :—** ( ಕಣ್ಣೀರು ತುಂಬಿಕೊಂಡು ) ಪ್ರಾಣಕಾಂತರೇ, ರಾಕ್ಷಸರ ಸಂಗಡ ಯುದ್ಧಕ್ಕೆ ಹೋಗುವ ಶ್ರೀಕೃಷ್ಣನಿಗೆ ಆದ ಮಂಗಲವು ನಿಮಗೆ ಆಗಲಿ.

**—ಧೋಂಡೋ ನರಸಿಂಹ ಮುಳಬಾಗಿಲ.**

**೧. ಭೀಮನಲ್ಲಿ ಎಲ್ಲಿಯೂ ಇಲ್ಲದ ಸಿಟ್ಟು ಒಡಮೂಡಲು ಕಾರಣ-ವೇನು? ಈ ಸಿಟ್ಟಿನ ಬೆಂಕಿ ಉರಿಯಾಗಿ ಏಳಲಿಕ್ಕೆ ಕಾರಣವನ್ನು ಯಾವ ಸನ್ನಿವೇಶದಿಂದ ಕವಿ ಹೊರಡಿಸಿದ್ದಾನೆ? ೧. ಈ ಪಾಠದಲ್ಲಿ ಭೀಮ ಸಹದೇವ ದ್ರೌಪದಿಯರಲ್ಲಿ ನಡೆದ ಸಂಭಾಷಣೆಯಿಂದ ಭೀಮನ ಹಾಗೂ ದ್ರೌಪದಿಯ ಯಾವ ಸ್ವಭಾವಗಳು ಪ್ರಕಟವಾಗಿರುತ್ತವೆ? ೩. ಯಜ್ಞದಲ್ಲಿ ಯಾವ ಯಾವ ಪಾತ್ರಗಳೂ ಸನ್ನಿವೇಶಗಳೂ ಅಗತ್ಯವೆಂದು ಭೀಮನು ದ್ರೌಪದಿಗೆ ಹೇಳುತ್ತಾನೆ? ಇಲ್ಲಿ ಅಂತಹ ಪಾತ್ರಗಳೂ ಸನ್ನಿವೇಶಗಳೂ ಯಾವವು ಇವೆ? ೪. (ಅ) ಅಣ್ಣನಿಗೆ ಸಿಡಿಲಿನಂತಹ ಸಿಟ್ಟು ಬಂದಿದೆ. ಅದನ್ನು ಈ ಕೃಷ್ಣೆ ಮಳೆಗಾಲದಂತೆ ಹೆಚ್ಚು ಮಾಡುತ್ತಾಳೆ. ಇಲ್ಲಿ ಕೃಷ್ಣೆಯನ್ನು ಮಳೆಗಾಲಕ್ಕೆ ಏಕೆ ಹೋಲಿಸಿದೆ? (ಆ) ಪ್ರಾಣಪತಿಗಳೇ, ಇಂತಹ ನಿಮ್ಮ ಮಾತುಗಳನ್ನು ನಾನು ಮೊದಲು ಎಂದೂ ಕೇಳಿಲ್ಲ. ಹೀಗೆ ದ್ರೌಪದಿ ಯಾರಿಗೆ ಹೇಳುತ್ತಾಳೆ? ಏಕೆ ಹೇಳುತ್ತಾಳೆ?**

# ೨೮. ಕುಮಾರವ್ಯಾಸ

[ ಕೆ. ವಿ ಪುಟ್ಟಪ್ಪನವರ ಪರಿಚಯವು ಸೊಗಸಿನ ಓದಿನ ೬ನೆಯ ಪುಸ್ತಕದ ೩೭ನೆಯ ಪಾಠದಲ್ಲಿ ಆಗಿದೆ. ಕುಮಾರವ್ಯಾಸನ ಮಹಾಭಾರತವನ್ನು ಅಭ್ಯಾಸಿಸುವದರಿಂದ ಆತನ ಕವಿತ್ವಶಕ್ತಿಯ ಬಗೆಗೆ ಉಕ್ಕಿ ಬರುವ ಭಾವನೆಗಳನ್ನು ವರ್ಣಿಸಿ ಈ ಕವಿತೆಯನ್ನು ಬರೆದಿರುವರು. ]

ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು !
ಭಾರತ ಕಣ್ಣಲಿ ಕುಣಿವುದು, ಮೈಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು ! ‖ ೧ ‖

ಆ ಕುರುಭೂಮಿಯು ತೋರುವುದು ;
ಆ ರಣರಂಗದಲಿ,
ಆ ಸಂಗ್ರಾಮದಲಿ,
ಪಟುಭಟರಾರ್ಭಟ ಕೇಳುವುದು !
ಮೈ ನವಿರೇಳುವುದು !
ಹೊಳೆಯುವ ಕೈದುಗಳಾಟದಲಿ,
ಕಲಿಗಳ ಕದನದ ಕೂಟದಲಿ,
ತಾಗುವ ಗದೆಗಳ ಸಂಘಟ್ಟನೆಯಲಿ,
ರಥಚಕ್ರಧ್ವನಿ ಚೀತ್ಕಾರದಲಿ,
ಸಾಯ್ವರ ಶಾಪದಲಿ,
ಬೀಳ್ವರ ತಾಪದಲಿ,
ನಸು ಸೋತಿರುವರ ಕೋಪದಲಿ,
ನೆರೆ ಗೆದ್ದಿಹರಾಟೋಪದಲಿ,
ನುಗುವ ಸೈನ್ಯದ ಹಾಹಾರವದಲಿ,
ಕೆನೆಯುವ ಹಯಗಳ ಹೇಷಾರವದಲಿ,
ಕಿವಿ ಬಿರಿಯುವುದು !
ಎದೆ ಮುರಿಯುವುದು !

ಬಸಿಯುವ ಮಜ್ಜೆಯ ಪಂಕದೊಳೂಡಿ
ಚಿಮ್ಮುವ ರಕ್ತದ ಬುಗ್ಗೆಯ ನೋಡಿ
ಕಣ್ಣೊಡೆಯುವುದು
ಮೈ ನಡುಗುವುದು ! ॥ ೨ ॥

ಕೇಳಿರಿ ಪಾರ್ಥನ ಸಾರಥಿಯು,
ರಣಗೀತೆಯನು,
ರಣನೀತಿಯನು,
ಬೋಧಿಸುವನು ನಿರ್ಭೀತಿಯನು !
ರಣರಂಗದ ಶರಶಯ್ಯೆಯಲಿ
ಭೀಷ್ಮನು ಮಲಗಿಹನು !
ಹೆಣಗಳ ಬಣಬೆಯ ಮಂಚದಲಿ
ದ್ರೋಣನು ಬಿದ್ದಿಹನು !
ನೆತ್ತರವೀಂಟುತಲಿರುವನು ಭೀಮನು
ಅಯ್ಯೋ ನೋಡಲ್ಲಿ !
ರಥದಿಂದುರುಳುತಲಿರುವನು ಕರ್ಣನು
ಹಾ ಹಾ ! ನೋಡಲ್ಲಿ !
ರಣಚಂಡಿಯು ಆ ಬೆಂಕಿಯ ಮಗಳು
ಹೆಣ್ಣಿನ ರೂಪದ ಬರಸಿಡಿಲವಳು !
ಮುಗುಳ್ನಗೆ ಬೀರುತ ನೋಡಲ್ಲಿ
ನಿಂತಿರುವಳು ರಣರಂಗದಲಿ
ದ್ರೌಪದಿ ಮುಡಿಗೆದರಿ ! ॥ ೩ ॥

ವೈಶಂಪಾಯನ ಸರಸಿಯ ತೀರದಿ
ತೋರುವರಾರಲ್ಲಿ ?
ಕೌರವದೇವನು ಸಿಡಿಲಾಗಿರುವನು
ಭೀಮನ ಸರಿಸದಲಿ !

ವೈರಿಯ ಎದೆಯನು
ಬಡಿಯುವ ಗದೆಯನು
ಮೇಲೆತ್ತಿರುವನು ನೋಡಲ್ಲಿ !
ಭೀಮನು ಬಿದ್ದನೆ !
ಕೌರವ ಗೆದ್ದನೆ !
ಮುಂದಾಗುವುದನು ಕಾಣಲ್ಲಿ !
ಇದಾವ ನ್ಯಾಯ !
ಏನನ್ಯಾಯ !
ಕೃಷ್ಣನ ಕುಹಕವ ನೋಡಲ್ಲಿ !
ಏನನು ನೋಡುವೆ ? ತಡೆಯುವೆ ಏಕೆ ?
ಕೌರವರಾಯನು ಮಡಿಯಲಿ ಬೇಕೆ ?
ಯುವಕನೆ ತುಡುಕು ಕಠಾರಿಯನು !
ಹೊಡೆ ರಣಭೇರಿಯನು !
ನಡೆ ನಡೆ ! ಊದು ತುತೂರಿಯನು !
ಕರೆ ರಣಮಾರಿಯನು ! || ೪ ||
ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು !
ಭಾರತ ಕಣ್ಣಲಿ ಕುಣಿವುದು ಮೆಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು !
ಕಲಿ ಕೆಚ್ಚಾಗುವನು !
ಕವಿ ಹುಚ್ಚಾಗುವನು !

—ಕೆ. ವಿ. ಪುಟ್ಟಪ್ಪ.

---

೧. ಕುಮಾರವ್ಯಾಸನು ಹಾಡಿದನೆಂದರೆ ಕಣ್ಣೆದುರಿಗೆ ಬರುವ ದೃಶ್ಯಗಳು ಯಾವವು ? ಕಿವಿಗೆ ಬೀಳುವ ಸಪ್ಪುಳಗಳು ಯಾವವು ? ಮನಸ್ಸಿನಲ್ಲಿ ಉಂಟಾಗುವ ಭಾವನೆಗಳು ಯಾವವು ? ೨. ಸ್ಪಷ್ಟೀಕರಿಸಿರಿ:– (ಅ) ಕಿವಿ ಬಿರಿಯುವುದು............ ನಡುಗುವುದು. (ಆ) ಹೆಣಗಳ ಬಣಬೆಯ........... ಬಿದ್ದಿಹನು. (ಇ) ಇದಾವ ನ್ಯಾಯ...........

**ನೋಡಲ್ಲಿ. ೩. ಈ ಕವಿತೆಯಲ್ಲಿ ಹೇಳಿದ ಯಾವದಾದರೊಂದು ದೃಶ್ಯವನ್ನು ನಿಮ್ಮ ಮಾತಿನಲ್ಲಿ ಐದಾರು ವಾಕ್ಯಗಳಲ್ಲಿ ಬರೆಯಿರಿ.**

# ೨೯. ಮಡಂ ಕ್ಯೂರಿ

'ಸ್ತ್ರೀಯರು ಗೃಹಕರ್ಮಗಳಲ್ಲಷ್ಟೇ ಪುರುಷರಿಗೆ ಸಹಾಯಕರೆಂದಲ್ಲ; ಪುರುಷರು ಮಾಡುವ ಎಲ್ಲ ಕಾರ್ಯಗಳಲ್ಲಿಯೂ— ಶಾಸ್ತ್ರೀಯ ಶೋಧಗಳಂಥ ಮಹತ್ವದ ಕಾರ್ಯಗಳಲ್ಲಿಯೂ ಅವರು ಪುರುಷರಿಗೆ ನೆರವಾಗಬಹುದು' ಎಂಬದನ್ನು ನಾವು ಮಡಂ ಕ್ಯೂರಿ ಎಂಬ ಮಹಿಳೆಯ ಉದಾಹರಣದಿಂದ ತಿಳಿದುಕೊಳ್ಳಬಹುದು.

ರಶಿಯ ದೇಶದ ವಾರ್ಸಾ ಪಟ್ಟಣದಲ್ಲಿ ಸ್ಕ್ಲೋಡಾಸ್ಕ್ ಎಂಬ ಶಾಸ್ತ್ರಜ್ಞನು ಆಗಿಹೋದನು. ಆತನಿಗೆ ೧೮೬೭ನೆಯ ಇಸವಿಯಲ್ಲಿ ಒಬ್ಬ ಮಗಳು ಹುಟ್ಟಿದಳು. ಈಕೆಯ ಹೆಸರು 'ಮೇರಿ.' ಈಕೆಯೇ ಮುಂದೆ 'ಮಡಂ ಕ್ಯೂರಿ' ಎಂದು ಜಗತ್ತಿನಲ್ಲಿ ಹೆಸರಾದಳು. ಬಾಲ್ಯವಲ್ಲಿಯೇ ಮೇರಿ ವಿದ್ಯಾಭ್ಯಾಸದಲ್ಲಿ ಮುಂದುವರಿಯುತ್ತ ಬಂದಳು. ತಂದೆಯ ಬೋಧನೆಯಿಂದ ಆಕೆಗೆ ಭೌತಿಕಶಾಸ್ತ್ರಗಳ ಅಭ್ಯಾಸದಲ್ಲಿ ತುಂಬ ಆಸಕ್ತಿ ಉಂಟಾಗಿತ್ತು.

ಮೇರಿಯು ಪಾರಿಸ್ ನಗರದ ವಿಶ್ವವಿದ್ಯಾಲಯವನ್ನು ಸೇರಿದ ಹೊತ್ತಿಗೆ ಅಲ್ಲಿ ಪಿಯರ್ ಕ್ಯೂರಿ ಎಂಬ ಶಾಸ್ತ್ರಜ್ಞನು ಭೌತಿಕಶಾಸ್ತ್ರಗಳ ಮುಖ್ಯಾಧ್ಯಾಪಕನಾಗಿದ್ದನು. ಆತನು ಪಾರಿಸ್ ನಗರದವನೇ. ತನ್ನ ಊರಿನ ವಿಶ್ವವಿದ್ಯಾಲಯದಲ್ಲಿ ಕಲಿತು ಅಲ್ಲಿಯೇ ಒಂದು ವಿಷಯದ ಮುಖ್ಯಾಧ್ಯಾಪಕನಾಗುವ ಮನ್ನಣೆಯನ್ನು ಆತನು ತಾರುಣ್ಯದಲ್ಲಿಯೇ ಪಡೆದವನು. ಇಷ್ಟರಲ್ಲಿ ಆತನು ಹಲವು ಶಾಸ್ತ್ರಶೋಧಗಳನ್ನೂ ಮಾಡಿದ್ದನು.

ಕ್ಯೂರಿ ತರುಣನು; ಅವಿವಾಹಿತನು. ಆತನಿಗೆ ಶಾಸ್ತ್ರ-ಶೋಧವಲ್ಲಿ ಲವಲವಿಕೆ ಬಹಳ. ಮದುವೆಯು ತನ್ನ ಕಾರ್ಯಕ್ಕೆ ಪ್ರತಿಕೂಲವೆಂದು ಆತನ ಭಾವನೆ; ಪತ್ನಿ ಪ್ರತಿಭಾಶಾಲಿನಿಯಾಗಿದ್ದರೂ



ಶಾಸ್ತ್ರಜ್ಞನಾದ ಪತಿಗೆ ಆತನ ಕಾರ್ಯಗಳಲ್ಲಿ ಆಕೆಯ ನೆರವು ದೊರೆಯ-ಬಹುದೇ ಎಂಬ ಸಂಶಯವು ಆತನನ್ನು ಬಾಧಿಸುತ್ತಿತ್ತು.

ಮೇರಿಯು ವಿಶ್ವವಿದ್ಯಾಲಯದಲ್ಲಿ ಕಲಿಯುತ್ತಿರುವಾಗ ಆಕೆಗೂ ಕ್ಯೂರಿಗೂ ಪ್ರೀತಿವಿಶ್ವಾಸಗಳು ಬೆಳೆದುಬಂದದರಿಂದ ಕ್ಯೂರಿಯು ತನ್ನ ಮೊದಲಿನ ವಿಚಾರವನ್ನು ಬಿಟ್ಟು ಮೇರಿಯನ್ನು ಮದುವೆಯಾದನು.

ಮೇರಿಯಿಂದ ಕ್ಯೂರಿಗೆ ಆತನ ಕಾರ್ಯಗಳಲ್ಲಿ ನೆರವು ದೊರೆಯಿತೆಂಬ-ದಿಷ್ಟೇ ಅಲ್ಲ, ಮೇರಿಯು ಹೊಸ ಶೋಧಗಳನ್ನು ಮಾಡುವದರಲ್ಲಿ ಪತಿಗಿಂತ ಒಂದು ಹೆಜ್ಜೆಯನ್ನು ಮುಂದೆ ಇಟ್ಟಳು.

ಪಿಯರ್ ಕ್ಯೂರಿಯೂ ಮೇರಿಯೂ ತಮ್ಮ ಬಿಡುವಿನ ವೇಳೆಯು-ನ್ನೆಲ್ಲ ಶಾಸ್ತ್ರೀಯ ಪ್ರಯೋಗಗಳನ್ನು ಮಾಡುವದರಲ್ಲಿಯೇ ಕಳೆಯು-ತ್ತಿದ್ದರು. ಮೇರಿಯು ಈಗ ಹಲವು ಸಣ್ಣ ಸಣ್ಣ ಶಾಸ್ತ್ರಶೋಧಗಳನ್ನು ಮಾಡಿದಳು. ಆ ಶೋಧಗಳು ಮೇರಿಯು ಕಂಡುಹಿಡಿದಂಥವೆಂದು ಪ್ರಕಟವಾದರೂ ಪಿಯರ್ ಕ್ಯೂರಿಯು ತಾನು ಮಾಡಿದ ಶೋಧಗಳ ಮನ್ನಣೆಯನ್ನು ತನ್ನ ಹೆಂಡತಿಗೆ ಸಲ್ಲಿಸುತ್ತಿರುವನೆಂದು ಜನರು ಆಡಿ-ಕೊಳ್ಳುತ್ತಿದ್ದರು. ಆದರೆ ಮೇರಿಯು ಶಾಸ್ತ್ರೀಯ ಶೋಧಗಳನ್ನು ಮಾಡು-ವದರಲ್ಲಿ ಬಲ್ಲಿದಳೆಂಬದು ಸ್ವಲ್ಪದಿವಸಗಳಲ್ಲಿ ಬಯಲಿಗೆ ಬಂದಿತು.

ಸನ್ ೧೮೯೬ರ ಸಮಯಕ್ಕೆ ಹೆನ್ರಿ ಬೆಕ್‌ರೆಲ್ ಎಂಬ ಶಾಸ್ತ್ರಜ್ಞನು ಕೆಲವು ಶೋಧಗಳನ್ನು ಮಾಡಿದನು. ಯುರೇನಿಯಮ್ ಲವಣಗಳು ಬಿಸಿಲಿನಲ್ಲಿ ಹೀರಿಕೊಂಡ ಪ್ರಕಾಶವನ್ನು ಕತ್ತಲೆಯಲ್ಲಿ ಹೊರಗೆಡವುವ-ವೆಂದು ಮೊದಲು ಆತನು ತಿಳಿದಿದ್ದನು. ಆದರೆ ಹಲವು ಪ್ರಯೋಗ-ಗಳನ್ನು ಮಾಡಿದ ಬಳಿಕ ಸೂರ್ಯಪ್ರಕಾಶದ ಸಹಾಯವಿಲ್ಲದೆ ಸ್ವತಃ ತೇಜೋವಿಸರ್ಜನ (ಪ್ರಕಾಶವನ್ನು ಹೊರಗೆಡವುವದು.) ಮಾಡುವಂಥ ಕೆಲವು ವಸ್ತುಗಳಿರಬೇಕೆಂದು ಆತನು ಮನಗಂಡನು. ಯುರೇನಿಯಮ್ ಲವಣಗಳಲ್ಲಿ ಇಂಥ ವಸ್ತು ಸೇರಿರುವದರಿಂದಲೇ ಅವು ಕತ್ತಲೆಯಲ್ಲಿ ತೇಜಸ್ಸನ್ನು ಹೊರಗೆ ಬಿಡುವವಲ್ಲದೆ ಇಂಥ ವಸ್ತು ಸೇರದ ಶುದ್ಧ ಯುರೇನಿಯಮ್ ಲವಣಗಳಲ್ಲಿ ಈ ಶಕ್ತಿ ಇಲ್ಲವೆಂಬ ಮಾತನ್ನು ಸರ್ ವಿಲಿಯಂ ಕ್ರಾಕ್ಸ್ ಎಂಬ ಶಾಸ್ತ್ರಜ್ಞನು ಕಂಡುಹಿಡಿದನು.

ತೇಜೋವಿಸರ್ಜನ ಮಾಡಬಲ್ಲ ವಸ್ತುಗಳು ಯಾವವು, ಎಂಬದನ್ನು ಕಂಡುಹಿಡಿಯಬೇಕೆಂದು ಮೇರಿಯು ಕುತೂಹಲವುಳ್ಳವಳಾದಳು. ಗಂಡ-ಹೆಂಡಿರು ನಿರಂತರ ಪ್ರಯೋಗಗಳಲ್ಲಿ ನಿರತರಾದರು. ಸತತೋದ್ಯಮ, ಪ್ರತಿಭೆ ಇವುಗಳ ಬಲದಿಂದ ಈ ಕ್ಯೂರಿ ದಂಪತಿಗಳು ತೇಜೋವಿಸರ್ಜನ

ಮಾಡಬಲ್ಲ ಮೂರು ವಸ್ತುಗಳನ್ನು ಕಂಡುಹಿಡಿದರು. ಮೇರಿಯು ಅವುಗಳಲ್ಲಿ ಒಂದಕ್ಕೆ ರೇಡಿಯಂ ಎಂದು ಹೆಸರನ್ನಿಟ್ಟಳು.

ರೇಡಿಯಂ ಎಂಬದು ಅತ್ಯಧಿಕಪ್ರಮಾಣದಲ್ಲಿ ತೇಜೋವಿಸರ್ಜನ ಮಾಡಬಲ್ಲಂಥದೆಂದು ಗೊತ್ತಾಯಿತು. ಗಡಿಯಾರಗಳ ಮುಳ್ಳುಗಳಿಗೂ ಅಂಕೆಗಳಿಗೂ ಅತ್ಯಲ್ಪಪ್ರಮಾಣದಲ್ಲಿ ರೇಡಿಯಮನ್ನು ಸವರಿ ಅವು ಕತ್ತಲೆಯಲ್ಲಿ ಕಾಣಿಸುವಂತೆ ಮಾಡಿಕೊಂಡಿರುವರು. ರೇಡಿಯಮಿಗೆ ಬಂಗಾರದ ಬೆಲೆಯ ಮೂರುಸಾವಿರ ಮಡಿ ಬೆಲೆ ಇರುವದೆಂದು ಹೇಳಿ-ದರೆ, ಅದರ ಬಹುಮೂಲ್ಯತೆಯನ್ನು ನೀವು ಕಲ್ಪಿಸಬಹುದು.

ರೇಡಿಯಂ ಎಂಬ ವಸ್ತುವು ಪಿಚ್‌ಬ್ಲೆಂಡ್ ಎಂಬ ಅದುರುಗಳಲ್ಲಿ ಅತ್ಯಲ್ಪ ಪ್ರಮಾಣದಿಂದ ಸೇರಿಕೊಂಡಿರುವದು. ಒಂದು ಪೌಂಡು ರೇಡಿಯಂ ದೊರಕಿಸಬೇಕಾದರೆ ಸಾವಿರಾರು ಟನ್ ಪಿಚ್‌ಬ್ಲೆಂಡನ್ನು ವಿಭಜಿಸಬೇಕು. ಒಂದು ಸಾಸುವೆಯಷ್ಟು ರೇಡಿಯಮನ್ನು ವಿಭ-ಜಿಸಿಕೊಳ್ಳುವದಕ್ಕಾಗಿ ಮಣಗಟ್ಟಲೆ ಅದುರನ್ನು ಕ್ಯೂರಿ ದಂಪತಿಗಳು ಸ್ಥಳವಿಲ್ಲದ ತಮ್ಮ ಸಣ್ಣ ಮನೆಯಲ್ಲಿ ಇಟ್ಟುಕೊಳ್ಳಬೇಕಾಗುತ್ತಿತ್ತು. ಮುಂದೆ ಹೆಚ್ಚಾಗಿ ಅದನ್ನು ಸಂಪಾದಿಸುವದಕ್ಕೆ ಇವರು ತೊಡಗಿದಾಗ ಊರ ಹೊರಗೆ ಒಂದು ಕಾರಖಾನೆಯನ್ನೇ ಇಡಬೇಕಾಯಿತು. ಬಹಳ ಶ್ರಮವನ್ನು ವಹಿಸಿ ಕೊನೆಗೆ ಕ್ಯೂರಿ ದಂಪತಿಗಳು ಕೆಲವು ತೂಕದ ರೇಡಿಯಮನ್ನು ಬೇರ್ಪಡಿಸಿಕೊಂಡು ತಮ್ಮ ಕಾರ್ಯದಲ್ಲಿ ಕೃತಕೃತ್ಯರಾದರು.

ರೇಡಿಯಂ ಶೋಧದಿಂದ ಕ್ಯೂರಿ ದಂಪತಿಗಳಿಗೆ ಎಲ್ಲ ಕಡೆಗಳಿಂದ ಅಭಿನಂದನೆ ಪ್ರಶಂಸೆಗಳು ತೆರಪಿಲ್ಲದೆ ಬರತೊಡಗಿದವು. ಇಂಗ್ಲಂಡದ 'ರಾಯಲ್ ಸೊಸಾಯಿಟಿ' ಯವರು ೧೯೦೩ ರಲ್ಲಿ ಡೆವ್ಹಿ ಪದಕವನ್ನು ಇವರಿಗೆ ಕೊಟ್ಟರು. ಆ ವರ್ಷದ ವಿಜ್ಞಾನ ವಿಷಯದ ನೋಬೆಲ್ ಪಾರಿ-ತೋಷಿಕವು ಬೆಕ್‌ರೆಲ್ ಎಂಬ ಶಾಸ್ತ್ರಜ್ಞನಿಗೂ ಕ್ಯೂರಿ ದಂಪತಿಗಳಿಗೂ ವಿಭಾಗಿಸಿ ಕೊಡಲ್ಪಟ್ಟಿತು. ೧೯೦೫ ರಲ್ಲಿ ಪಾರಿಸ್ ವಿಶ್ವವಿದ್ಯಾಲಯ-ದವರು ಪಿಯರ್ ಕ್ಯೂರಿಯನ್ನು ತಮ್ಮ ವಿಜ್ಞಾನ ಸಂಘಸಂಸ್ಥೆಯ ಸದಸ್ಯನನ್ನಾಗಿ ಮಾಡಿದರು.

ಕ್ಯೂರಿ ದಂಪತಿಗಳ ಈ ಪರಿಯ ಹೆಚ್ಚಳವನ್ನು ಕಂಡು ಕಾಲ-ಪುರುಷನಿಗೆ ಹೊಟ್ಟೆಕಿಚ್ಚು ಉಂಟಾಯಿತೋ ಏನೋ? ೧೯೦೬ ರಲ್ಲಿ ಪಿಯರ್ ಕ್ಯೂರಿಯು ಮೋಟಾರಿನ ಅಪಘಾತದಿಂದ ಅಕಾಲದಲ್ಲಿ ಪರಲೋಕಕ್ಕೆ ತೆರಳಿದನು. ಅವನ ಮರಣದಿಂದ ಶಾಸ್ತ್ರಶೋಧನೆಗೂ ಪತಿಪ್ರಾಣೆಯಾದ ಮೇರಿಯ ಕೋಮಲ ಹೃದಯಕ್ಕೂ ಒಂದು ಆಘಾ-ತವು ತಗಲಿತೆಂದು ಹೇಳಬಹುದು.

ಪಿಯರ್ ಕ್ಯೂರಿಯ ಮರಣದ ತರುವಾಯ ಪಾರಿಸ್ ವಿಶ್ವ-ವಿದ್ಯಾಲಯದವರು ಮೇರಿಯನ್ನೇ ಪತಿಯ ಸ್ಥಳದಲ್ಲಿ ನಿಯಮಿಸಿದರು. ಈಗ ಮೇರಿಯು ವಿಶ್ವವಿದ್ಯಾಲಯದಲ್ಲಿ ಶಾಸ್ತ್ರದ ಪ್ರಧಾನಾಧ್ಯಾಪಿಕೆ, ಮನೆಯಲ್ಲಿ ಶಾಸ್ತ್ರೀಯ ಶೋಧಗಳ ವಿದ್ಯಾರ್ಥಿನಿ! ಪತಿಯ ಮರಣದ ಶೋಕಭಾರವನ್ನು ಬದಿಗಿರಿಸಿ ಈ ಮಹನೀಯಳು ಅವಿಶ್ರಾಂತ ಶ್ರಮ-ಮಾಡಿ ಹಲವು ರಸಾಯನ ಶಾಸ್ತ್ರ ಶೋಧಗಳನ್ನು ಮಾಡಿದಳು. ಅವಳು ಮಾಡಿದ ಶೋಧಗಳಿಗಾಗಿ ೧೯೧೧ ರಲ್ಲಿ ಅವಳಿಗೆ ಮತ್ತೆ ನೋಬೆಲ್ ಪಾರಿತೋಷಿಕವು ದೊರೆಯಿತು. ಈವರೆಗೆ ಎರಡು ಬಾರಿ ನೋಬೆಲ್ ಪಾರಿತೋಷಿಕವನ್ನು ಪಡೆದವರೆಂದರೆ ಮೇರಿಯೊಬ್ಬಳೇ ಸರಿ. ಈಚೆಗೆ ಅವಳನ್ನು ಎಲ್ಲರೂ ಮೆಡಂ ಕ್ಯೂರಿ ಎಂದೇ ಕರೆಯುತ್ತಿದ್ದರು.

ರೇಡಿಯಮಿಗೆ ಸಂಬಂಧಿಸಿದ ಹಲವು ಶೋಧಗಳನ್ನು ಮಾಡಿ ಅತ್ಯಾಯಾಸವನ್ನು ಪಡೆದ ಮೆಡಂ ಕ್ಯೂರಿಯ ಪ್ರಕೃತಿ ದಿನದಿನಕ್ಕೆ ಕೆಡಲಾರಂಭಿಸಿತು. ಆರೋಗ್ಯ ಸಂಪಾದನೆಗಾಗಿ ಆಕೆಯು ಗುಡ್ಡದ ಮೇಲಿನ ಒಂದು ಆರೋಗ್ಯ ಮಂದಿರದಲ್ಲಿ ವಾಸಮಾಡಿದಳು. ಆದರೇನು, ವಿಧಿಗೆ ದಯೆಯಿಲ್ಲ; ೧೯೩೪ ರಲ್ಲಿ ಈ ಶಾಸ್ತ್ರೀಯ ಶೋಧಕಳು ಪರಲೋಕವನ್ನೈದಿದಳು.

ಪ್ರಾಣಿಮಾತ್ರಕ್ಕೆ ಹುಟ್ಟು ಸಾವುಗಳು ತಪ್ಪಿದವಲ್ಲ. ಯಾರ ಹುಟ್ಟಿನಿಂದ ಲೋಕದ ಕಲ್ಯಾಣವಾಗುವದೋ, ಯಾರ ಸಾವಿಗಾಗಿ ಲೋಕವು ಕಳವಳಬಡುವದೋ ಅಂಥವರು ಮಾನವ ಜಾತಿಗೇ ಭೂಷಣವೆಂಬ ವಿಷಯದಲ್ಲಿ ಸಂಶಯವಿಲ್ಲ. ಮೆಡಂ ಕ್ಯೂರಿ ಪುರುಷ-

ರಂತೆ ಸ್ತ್ರೀಯರೂ ಮಹಾಕಾರ್ಯಗಳನ್ನು ಮಾಡಬಲ್ಲರೆಂಬದನ್ನು ಜಗತ್ತಿಗೆ ತೋರ್ಪಡಿಸಿ ತನ್ನ ಆಯುಷ್ಯವನ್ನೆಲ್ಲ ಶಾಸ್ತ್ರೀಯ ತತ್ತ್ವಶೋಧನೆ-ಯಲ್ಲಿಯೇ ಕಳೆದು ಜಗತ್ತಿನ ಸ್ತ್ರೀಜಾತಿಗೆ ಆದರ್ಶವಾಗಿ ಪರಿಣಮಿಸಿದಳು.

**೧. ಕ್ಯೂರಿ ದಂಪತಿಗಳು ಮಾಡಿದ ಮುಖ್ಯ ಶೋಧಗಳಾವವು? ಅವಕ್ಕಾಗಿ ಅವರಿಗೆ ಯಾವ ಮನ್ನಣೆಗಳು ದೊರೆತವು? ೨. ರೇಡಿಯಮಿನ ಉಪಯೋಗಗಳನ್ನು ಹೇಳಿರಿ. ೩. ಆಸಕ್ತಿ, ದಂಪತಿ, ಕುತೂಹಲ, ಅಭಿನಂದನೆ, ವಿಶ್ವವಿದ್ಯಾಲಯ, ಸಲ್ಲಿಸು ಇವುಗಳ ಅರ್ಥ ಹೇಳಿರಿ. ಕೊನೆಯ ನಾಲ್ಕನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ. ೪. ಮೆಡಂ ಕ್ಯೂರಿಯು ಶಾಸ್ತ್ರಶೋಧದಿಂದ ಹೆಸರಾದಂತೆ ಇನ್ನಾವವಾದರೂ ಬಗೆಗಳಿಂದ ಲೋಕೋಪಕಾರಿಗಳಾದ ಒಬ್ಬಿಬ್ಬರು ಸ್ತ್ರೀಯರ ಹೆಸರು ಹೇಳಿರಿ. ಅವರು ನೆರವೇರಿಸಿದ ಕಾರ್ಯಗಳಾವವು? ೫. ನಮ್ಮ ದೇಶದಲ್ಲಿ ನೋಬೆಲ್ ಪಾರಿ-ತೋಷಿಕಗಳು ಯಾರು ಯಾರಿಗೆ ಏತಕ್ಕಾಗಿ ದೊರೆತಿವೆ? ಅವರ ಕಾರ್ಯ-ಗಳಿಂದ ಭೂಮಂಡಲದ ಜನರಿಗೆ ಯಾವ ಉಪಯೋಗಗಳಾಗಿವೆ?**

## ೩೦. ಕರ್ನಾಟಕ ಶಿಲ್ಪ

**[ಆರ್. ಎಸ್. ಪಂಚಮುಖಿಯವರು ಕರ್ನಾಟಕದ ಇತಿಹಾಸ ಸಂಶೋಧಕರಲ್ಲಿ ಹೆಸರಾದವರು. ಅವರು ಹಲವು ವರ್ಷಗಳ ವರೆಗೆ ಪ್ರಾಚ್ಯ ಸಂಶೋಧನ ಖಾತೆಯ ದಕ್ಷಿಣ ಭಾಗದಲ್ಲಿ ಕಾರ್ಯ ಮಾಡಿ ಅನೇಕ ಮಹತ್ವದ ಸಂಗತಿಗಳನ್ನು ಬಯಲಿಗೆ ತಂದರು. ಇತ್ತೀಚೆಗೆ ಅವರು ಧಾರವಾಡದಲ್ಲಿ ಸರಕಾರದವರಿಂದ ಸ್ಥಾಪಿತವಾದ ಕನ್ನಡ ಸಂಶೋಧನ ಮಂಡಲದ ಡಾಯರೆಕ್ಟರರಾಗಿ ಅವಿಶ್ರಾಂತ ಪರಿಶ್ರಮಪಡುತ್ತಿದ್ದಾರೆ. ಅವರು ಸಾಲೆಯ ಮಕ್ಕಳಿಗಾಗಿ ಬರೆದ ಪಾಠವಿದು.]**

ಕರ್ನಾಟಕದಲ್ಲಿ ಲಲಿತಕಲೆಗಳ ಬೆಳೆವಣಿಗೆ ಬುನಾದಿಯಿಂದಲೂ ನಡೆಯುತ್ತ ಬಂದುದು ತಿಳಿಯಬರುತ್ತದೆ. ವಾಸ್ತುಶಿಲ್ಪ, ಮೂರ್ತಿಶಿಲ್ಪ,

ಸಂಗೀತಶಾಸ್ತ್ರ, ಚಿತ್ರಕಲೆ, ಸಾಹಿತ್ಯಕಲೆ ಇತ್ಯಾದಿ ಚಿತ್ತಾಕರ್ಷಕವಾದ ವಿದ್ಯೆಗಳು ಇಲ್ಲಿ ವಿಚಿತ್ರಸ್ವರೂಪವನ್ನು ಹೊಂದಿ ತಮ್ಮದೊಂದು ವೈಶಿಷ್ಟ್ಯವನ್ನು ಇನ್ನೂ ಪ್ರಕಟಗೊಳಿಸುತ್ತವೆ. ಸಂಗೀತದಲ್ಲಿ 'ಕರ್ನಾಟಕ ಸಂಗೀತ' ಎಂಬ ಹೆಸರು ಭಾರತವರ್ಷದ ಸಂಗೀತಶಾಸ್ತ್ರದಲ್ಲಿ ಪ್ರಸಿದ್ಧ-ವಾಗಿದೆ. ಅದರಂತೆ ಶಿಲ್ಪಕಲೆಯಲ್ಲಿ ಚಾಲುಕ್ಯಶಿಲ್ಪ ಹೊಯ್ಸಳಶಿಲ್ಪ ಎಂಬುವು ಹಿಂದುಸ್ತಾನದ ಶಿಲ್ಪಶಾಸ್ತ್ರದ ಇತಿಹಾಸದಲ್ಲಿ ಗಣ್ಯವಾದ ಸ್ಥಾನವನ್ನು ಪಡೆದಿವೆ. ಕರ್ನಾಟಕಶಿಲ್ಪವು ಎಂದು ಹುಟ್ಟಿತು, ಹೇಗೆ ಬೆಳೆಯಿತು, ಅದರಲ್ಲಿ ಉಂಟಾದ ಮುಖ್ಯ ಪ್ರಭೇದಗಳಾವುವು ಮತ್ತು ಮತ್ತು ಅವುಗಳ ಸಾಮಾನ್ಯಸ್ವರೂಪವಾವುದು ಎಂಬುದನ್ನು ಕುರಿತು ದೃಷ್ಟಾಂತ ಪೂರ್ವಕವಾಗಿ ಒಂದೆರಡು ಮಾತುಗಳನ್ನು ಇಲ್ಲಿ ಬರೆಯುತ್ತೇವೆ.

ಆರ್ಯರು ಯಜ್ಞಯುಗದಲ್ಲಿ ವೇದಿಕೆಗಳನ್ನು ಕಟ್ಟಿ ಅಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ ಆಹುತಿಯನ್ನು ಕೊಡುತ್ತಿದ್ದರು. ವೇದಿಕೆಗಳು ನಾನಾ-ತೆರದ ಆಕಾರದವಾಗಿದ್ದುವು. ಅವುಗಳಿಂದ ದೇವಾಲಯುಗಳನ್ನು ಕಟ್ಟುವ ಕಲ್ಪನೆಯು ಮೊದಲು ಉಂಟಾಯಿತು. ಮೊಟ್ಟಮೊದಲು ಕರ್ನಾಟಕದಲ್ಲಿ ಕಾಣಬರುವ ದೇವಾಲಯುಗಳೆಂದರೆ ಗುಹಾಂತರ್ಗತ ಮಂದಿರಗಳು. ಕ್ರಿ. ಶ. ೬ನೆಯ ಶತಮಾನದಲ್ಲಿ ಬಾದಾಮಿಯಲ್ಲಿ ಚಲುಕ್ಯರಾಜನಾದ ಮಂಗಲೇಶನು ತನ್ನ ಅಣ್ಣ ೧ನೆಯಕೀರ್ತಿವರ್ಮನ ಆಳಿಕೆಯಲ್ಲಿ ಕೊರೆಯಿಸಿದ ವೈಷ್ಣವ ಗವಿಯನ್ನು ಕರ್ನಾಟಕದ ಮೊದಲನೆಯ ಗುಹಾಮಂದಿರವೆಂದು ಉದಾಹರಿಸಬಹುದು. ಇದರ ಪಕ್ಕಗಳಲ್ಲಿ ಕೊರೆಯಲ್ಪಟ್ಟ ಶೈವ ಜೈನ ಗವಿಗಳೂ ಹೆಚ್ಚುಕಡಿಮೆ ಅದೇ ಕಾಲದವಿರುತ್ತವೆ. ಈ ಗವಿಗಳಲ್ಲಿ ತೊಲೆ, ಕಂಬ ಜಂತೆಗಳಲ್ಲಿ ತೋರಿಸಿದ ಕುಸುರಿನ ಕೆಲಸವನ್ನು ನೋಡಿದರೆ ಮೊದಲು ದೇವಾಲಯುಗಳು ಕಟ್ಟಿಗೆಯಲ್ಲಿ ಕಟ್ಟಲ್ಪಡುತ್ತಿದ್ದಿರಬೇಕೆಂದು ಊಹಿಸಬಹುದಾಗಿದೆ. ಚಲುಕ್ಯರಿಗಿಂತ ಮುಂಚೆ ಕರ್ನಾಟಕದಲ್ಲಿ ದೇವಾಲಯುಗಳಿದ್ದಿರಲಿಕ್ಕೆ ಸಾಕು. ಸಾತವಾಹನರ ಮಾಂಡಲಿಕರಾಗಿ ಬನವಾಸಿಯಲ್ಲಿ ಆಳುತ್ತಿದ್ದ ಚುಟುಕುಲದ ರಾಜರೂ ಆಮೇಲೆ ಬಂದ ಕದಂಬ ಅರಸರೂ ವಿಹಾರಗಳನ್ನೂ ಚೈತ್ಯಾಲಯುಗಳನ್ನೂ ದೇವ-ಮಂದಿರಗಳನ್ನೂ ಕಟ್ಟಿಸಿದ್ದರೆಂದು ಅವರವರ ಶಾಸನಗಳಿಂದ ತಿಳಿಯ-

ಬರುತ್ತವೆ. ಆದರೆ ಆ ಕಟ್ಟಡಗಳೆಲ್ಲ ಕಟ್ಟಿಗೆಯವಿದ್ದಿರಬೇಕಾದುದರಿಂದ ಅವುಗಳ ಅವಶೇಷಗಳು ಈಗ ಕಾಣಬರುವುದಿಲ್ಲ. ಚೈತ್ಯಾಲಯದ ಬೆಸವು ಮೊದಲು ಕಟ್ಟಿಗೆಗಳಲ್ಲಿಯೇ ಇದ್ದಿರಬೇಕೆಂದು ತೇರ, ಅಮರಾ-ವತಿ, ನಾಗಾರ್ಜುನಕೊಂಡ ಮುಂತಾದ ಪಟ್ಟಣಗಳ ಅವಶೇಷಗಳಿಂದ ಊಹಿಸಬಹುದಾಗಿದೆ.

೬ ನೆಯ ಶತಮಾನಕ್ಕಿಂತ ಮುಂಚೆ ನಾಸಿಕ, ಕಾರ್ಲೆ, ಕಾಣ್ಹೇರಿ ಮುಂತಾದ ಗ್ರಾಮಗಳಲ್ಲಿ ಗುಹಾಂತರ್ದೇವಾಲಯಗಳಿದ್ದುವು. ಈ ಪ್ರದೇಶವು 'ಕಾವೇರಿಯಿಂದಮಾಗೋದಾವರಿವರೆಗಮಿರ್ಪ' ಕನ್ನಡ ನಾಡಿನಲ್ಲಿ ಸೇರಿರಲಿ, ಇರದಿರಲಿ; ಕನ್ನಡ ಶಿಲ್ಪಿಗರು ಈ ನೆರೆಯ ಗುಹೆ-ಗಳನ್ನು ನೋಡಿ ಬಾದಾಮಿಯಲ್ಲಿ ಗವಿಗಳನ್ನು ಕೊರೆದಿರಬೇಕು. ಪೂರ್ವ ಸಮುದ್ರದ ಕರಾವಳಿಯಲ್ಲಿ ಆಂಧ್ರದೇಶದಲ್ಲಿಯೂ (ಉದಾ: ಹಥಿ-ಗುಂಫಾ, ಉಂಡವಳ್ಳಿಗಳಲ್ಲಿ) ಇದೇ ಕಾಲದ ಎಂದರೆ ಕ್ರಿ. ಶ. ೨-೪ ನೆಯ ಶತಮಾನದ ಬೌದ್ಧ ಜೈನ ಗುಹೆಗಳು ಇರುತ್ತವೆ. ಅಲ್ಲಿಯೂ ಗುಹೆ-ಗಳನ್ನು ಕೊರೆಯುವುದು ವಾಡಿಕೆಯಾಗಿತ್ತು. ತಮಿಳು ದೇಶದಲ್ಲಿ ಮಾತ್ರ ೬ ನೆಯ ಶತಮಾನದ ಕೊನೆಗೆ ಪಲ್ಲವ ೧ ನೆಯ ಮಹೇಂದ್ರ-ವರ್ಮನು ಬಾದಾಮಿಯನ್ನೋ ಆಂಧ್ರದೇಶವನ್ನೋ ಸಂದರ್ಶಿಸಿ ಅಲ್ಲಿಯ ಪದ್ಧತಿಯನ್ನು ತನ್ನ ದೇಶದಲ್ಲಿ ಮೊಟ್ಟಮೊದಲು ಆರಂಭಿಸಿರಬೇಕು. ಇಟ್ಟಿಗೆ, ಕಟ್ಟಿಗೆ, ಕಬ್ಬಿಣ, ಸುಣ್ಣ ಮುಂತಾದ ಸಾಮಗ್ರಿಗಳಿಲ್ಲದೆ ಮಂದಿರ-ಗಳನ್ನು ಕಟ್ಟುವ ವಿಚಿತ್ರ ಪದ್ಧತಿಯನ್ನು ಪ್ರವರ್ತಿಸಿದನೆಂದು ಅವನಿಗೆ 'ವಿಚಿತ್ರ ಚಿತ್ರ' ಎಂಬ ಬಿರುದು ಉಂಟಾಯಿತು. ಅಂತು ಗುಹಾಂತ-ರ್ದೇವಾಲಯಗಳು ಕರ್ನಾಟಕ ವಾಸ್ತುಶಿಲ್ಪದ ಆರಂಭವೆಂದು ಹೇಳ-ಬಹುದು.

ಗುಹಾಂತರ್ದೇವಾಲಯಗಳಾದ ಮೇಲೆ ಪ್ರತ್ಯೇಕ ಕಟ್ಟಡಗಳನ್ನು ಕೊರೆದು ಕಟೆದ ಕಲ್ಲುಗಳಿಂದ ಕಟ್ಟುವ ಪದ್ಧತಿಯು ರೂಢಿಯಲ್ಲಿ ಬಂತು. ಇದರ ಮೊದಲನೆಯ ಸ್ಪಷ್ಟ ಉದಾಹರಣೆಯು ಪಟ್ಟದಕಲ್ಲಿನ ವಿರೂ-ಪಾಕ್ಷದೇವರ ಗುಡಿಯು. ಇದು ೨ ನೆಯ ವಿಕ್ರಮಾದಿತ್ಯನ ಕಾಲದಲ್ಲಿ (೮ ನೆಯ ಶತಮಾನ) ಕಟ್ಟಲ್ಪಟ್ಟಿತು. ಇಷ್ಟರಲ್ಲಿ ತಮಿಳುದೇಶದ-

ಲ್ಲಿಯೂ ಪ್ರತ್ಯೇಕ ದೇವಾಲಯಗಳು ಹುಟ್ಟತೊಡಗಿದ್ದುವು. ಮಹಾಬಲಿಪುರಂದ ತಲಶಯನ ದೇವಾಲಯವು ಇವುಗಳಲ್ಲಿ ಎಲ್ಲಕ್ಕೂ ಮೊದಲನೆಯದು. ಚಲುಕ್ಯ ಪಲ್ಲವರ ನಡುವೆ ಸತತ ಯುದ್ಧಗಳು ನಡೆದಿದ್ದುದರಿಂದ ಪರಸ್ಪರರಲ್ಲಿ ವ್ಯವಹಾರವೂ ಸಂಬಂಧವೂ ಬೆಳೆಯತೊಡಗಿದ್ದುವು. ಅದರ ಪರಿಣಾಮವಾಗಿ ವಾಸ್ತುಶಿಲ್ಪದ ಆಯಾ ಮಾದರಿಗಳಲ್ಲಿ ಹೋಲಿಕೆಯು ವಿಶೇಷವಾಗಿ ಕಾಣಬರುತ್ತದೆ. ಪಲ್ಲವರಿಂದ ರೂಢವಾದ



ಪಟ್ಟದಕಲ್ಲು— ಶ್ರೀ ವಿರೂಪಾಕ್ಷ ದೇವಾಲಯ.

ಮಾದರಿಗೆ ದ್ರಾವಿಡ ಶಿಲ್ಪವೆಂದೂ ಚಲುಕ್ಯರ ಮಾದರಿಗೆ ಚಲುಕ್ಯ ಅಥವಾ ಕರ್ನಾಟಕ ಶಿಲ್ಪವೆಂದೂ ಕರೆಯಬಹುದು. ಕರ್ನಾಟಕದ ಉತ್ತರ ಪಶ್ಚಿಮಗಳಲ್ಲಿ ಎಂದರೆ ಡೆಕ್ಕನ್ ಮತ್ತು ಗುಜರಾತಗಳಲ್ಲಿ ಬೇರೆ ಮಾದರಿಯ ಕಟ್ಟಡಗಳು ಕಾಣಬರುತ್ತವೆ. ಅವುಗಳಿಗೆ ಅನುಕ್ರಮವಾಗಿ ಹೇಮಾಡಪಂಥಿ ಮತ್ತು ಸಿದ್ಧರಾಜಿ ಅಥವಾ ಗವಳಿರಾಜಿ ಎಂದೂ ಕರ್ನಾಟಕದ ಕಟ್ಟಡಗಳಿಗೆ ಜಕ್ಕಣಾಚಾರಿ ಕೃತಿಗಳೆಂದೂ ಜನರು ಹೇಳುವುದುಂಟು.

ಈ ಹೆಸರುಗಳು ಆಯಾ ಮಾದರಿಗಳ ಭಿನ್ನತೆಯನ್ನು ಸೂಚಿಸುತ್ತವೆ. ವಿಂಧ್ಯಪರ್ವತದ ಉತ್ತರದಲ್ಲಿ ಗುಪ್ತ ಅಥವಾ ಔತ್ತರೇಯ ಪದ್ಧತಿಯು ಪ್ರಚಾರದಲ್ಲಿತ್ತೆಂದು ಸಾಮಾನ್ಯವಾಗಿ ಹೇಳಬಹುದು. ಕರ್ನಾಟಕವು ಇವೆಲ್ಲ ಮಾದರಿಗಳಿರುವ ದೇಶಗಳಿಗೆ ಮಧ್ಯವರ್ತಿಯಾಗಿರುವುದರಿಂದ ಇಲ್ಲಿಯ ಪದ್ಧತಿಯಲ್ಲಿ ಇವೆಲ್ಲವುಗಳ ಒಂದಿಲ್ಲೊಂದು ಪರಿಣಾಮವು ಒಡಮೂಡಿರುತ್ತದೆ. ಸಾಮಾನ್ಯವಾಗಿ ಔತ್ತರೇಯ, ದಾಕ್ಷಿಣಾತ್ಯ ಎಂಬ ಎರಡೇ ಪದ್ಧತಿಗಳೆಂದು ಹಿಂದೂದೇಶದ ಪ್ರಾಚೀನ ವಾಸ್ತುಶಿಲ್ಪದಲ್ಲಿ ವಿಂಗಡಿಸಬಹುದು. ದಕ್ಷಿಣ ಪದ್ಧತಿಯಲ್ಲಿ ಮೇಲೆ ಹೇಳಿದಂತೆ ದ್ರಾವಿಡ, ಕರ್ನಾಟಕ ಎಂದು ಸೂಕ್ಷ್ಮಭೇದಗಳನ್ನು ಕಲ್ಪಿಸಬಹುದು.

ಈ ವಿವಿಧ ಪದ್ಧತಿಗಳಲ್ಲಿರುವ ವೈಲಕ್ಷಣ್ಯವನ್ನು ಗರ್ಭಗೃಹದ ಮೇಲಿರುವ ವಿಮಾನಗಳ ಆಕಾರಗಳಿಂದ ಸ್ಥೂಲವಾಗಿ ಕಂಡುಹಿಡಿಯ ಬಹುದು. ಪ್ರಾಚೀನ ದ್ರಾವಿಡ ಪದ್ಧತಿಯ ಗುಡಿಗಳಲ್ಲಿ ವಿಮಾನಗಳು ಅಗಲವಾಗಿದ್ದು ಶಿಖರದ ಮೇಲೆ 'ಆಮಲಕ'ವಿರುತ್ತದೆ. ಸಾಮಾನ್ಯವಾಗಿ ಅವು ೩-೪-೫ ನೆಲೆಗಳುಳ್ಳವಿರುತ್ತವೆ. ಔತ್ತರೇಯ ಗುಡಿಗಳ ವಿಮಾನಗಳು ಲಂಬಾಕಾರವಾಗಿದ್ದು ಮೇಲಕ್ಕೆ ಹೋದಂತೆ ಸೂಚ್ಯಾಕಾರವಾಗಿರುತ್ತವೆ. ಚಲುಕ್ಯರ ಗುಡಿಗಳಲ್ಲಿ ಇವೆರಡೂ ವಿಶೇಷಗಳು ಹೃದಯಂಗಮವಾಗಿ ಸಮ್ಮಿಲಿತವಾಗಿರುತ್ತವೆ. ಇವರು ವಿಮಾನಗಳಲ್ಲಿ ನೆಲೆಗಳನ್ನು ಮಾಡುವ ಪದ್ಧತಿಯನ್ನೂ ಆಕಾರದಲ್ಲಿ ಅಗಲವಿರದೆ ಲಂಬವಾದ ಮಾಡಗಳನ್ನು ಕಟ್ಟುವ ಪದ್ಧತಿಯನ್ನೂ ಸೇರಿಸಿದರು. ಬರಬರುತ್ತ ಈ ಚಲುಕ್ಯ ಪದ್ಧತಿಯು ವಿಕಾಸ ಹೊಂದಿ ತಲವಿನ್ಯಾಸದ ಆಕೃತಿಗನುಸರಿಸಿ ವಿವಿಧ-ವಾದ ಸೊಬಗಿನ ಅಲಂಕಾರಗಳನ್ನು ಕಟ್ಟಡಗಳಲ್ಲಿ ಸೇರಿಸತೊಡಗಿತು. ಇದಕ್ಕೆ ಚಾಲುಕ್ಯ ಪದ್ಧತಿ ಎನ್ನಬಹುದು. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವು ದ್ರಾವಿಡ ಪದ್ಧತಿಯ ಆದರ್ಶವು. ಬಾದಾಮಿಯ ಕೋಟೆ-ಯಲ್ಲಿರುವ ಮಾಲೆಗಿತ್ತಿ ಶಿವಾಲಯವು ಚಲುಕ್ಯಶೈಲಿಯನ್ನು ತೋರಿಸು-ತ್ತದೆ. ಲಕ್ಕುಂಡಿಯ ಜೈನ ಗುಡಿಯು ಈ ಶೈಲಿಯ ಬೆಳವಣಿಗೆಯಲ್ಲಿ ಮೊದಲು ಮೆಟ್ಟಲು. ಆಮೇಲೆ ಗದುಗಿನ ತ್ರಿಕೂಟೇಶ್ವರ ಗುಡಿ, ಸರಸ್ವತೀ ಗುಡಿ, ಹಾವೇರಿಯ ಸಿದ್ಧೇಶ್ವರ ಗುಡಿ, ಲಕ್ಕುಂಡಿಯ ಕಾಶೀವಿಶ್ವೇಶ್ವರ

ಗುಡಿ ಇವುಗಳು ತಲವಿನ್ಯಾಸ, ಮುಖವಿನ್ಯಾಸ, ವಿಮಾನ, ಗೋಪುರ-ಗಳನ್ನು ಒಂದಕ್ಕೊಂದು ಹೊಂದಿಕೆಯಾಗುವಂತೆ ಸೇರಿಸಿ ಅತ್ಯದ್ಭುತವಾದ ಕೈಕೆಲಸವನ್ನು ತೋರಿಸುವುದರಿಂದ ಅವು ಆ ಶೈಲಿಯ ಎರಡನೆಯ ಮೆಟ್ಟಲನ್ನು ತಿಳಿಸುತ್ತವೆ. ಡಂಬಳದ ದೊಡ್ಡಬಸಪ್ಪನ ಗುಡಿಯ ವಿಮಾನವೂ ಕಂಬಗಳೂ ಚಾಲುಕ್ಯಶಿಲ್ಪದ ಕಡೆಯ ಮೆಟ್ಟಿನ ವೈಭವವನ್ನು ಸ್ಪಷ್ಟಗೊಳಿಸುತ್ತವೆ. ಈ ಗುಡಿಯ ತಲವಿನ್ಯಾಸವು ನಕ್ಷತ್ರಾಕಾರವಾಗಿದ್ದು ಆದಕ್ಕೆ ತಕ್ಕಂತೆ ವಿಮಾನವೂ ನಾಲ್ಕೂ ಕಡೆಯಲ್ಲಿ ಚಿಕ್ಕಚಿಕ್ಕ ಗೋಪುರ-



ಬೇಲೂರು-ಶ್ರೀ ಚೆನ್ನಕೇಶವ ದೇವಾಲಯ.

ಗಳಿಂದ ಅಲಂಕೃತವಾಗಿ ಕಣ್ಣಿಗೆ ಅಸದೃಶವಾದ ಸೊಬಗನ್ನು ಬೀರುತ್ತದೆ. ಈ ಚಾಲುಕ್ಯಪದ್ಧತಿಯೇ ೧೨-೧೩ ನೆಯ ಶತಮಾನಗಳಲ್ಲಿ ಚೋಳ-ಪದ್ಧತಿಯ ಲಂಬಾಕಾರದ ೫-೭ ನೆಲೆಗಳುಳ್ಳ ಗೋಪುರ, ವಿಶಾಲವಾದ ಮಂಡಪಗಳು, ಅದಕ್ಕೆ ಅನುಗುಣವಾದ ಅಲಂಕಾರಗಳು ಇವೇ ಮೊದ-ಲಾದ ಲಕ್ಷಣಗಳನ್ನುಸೇರಿಸಿಕೊಂಡು ಮೈಸೂರು ಪ್ರಾಂತದಲ್ಲಿ ಹೊಯ್ಸಳ ಶೈಲಿಯೆಂದು ಹೆಸರಾಯಿತು. ಮೈಸೂರು ಪ್ರಾಂತವು ಚೋಳದೇಶಕ್ಕೆ

ಹೊಂದಿ ಇದ್ದುದರಿಂದ ಅಲ್ಲಿ ಈ ಪರಿಣಾಮವು ಕಂಡುಬರುವುದು ಆಶ್ಚರ್ಯ-ವಲ್ಲ. ( ಉದಾ : ಬೇಲೂರು ಚೆನ್ನಕೇಶವ ದೇವಾಲಯ ) ವಿಜಯ-ನಗರದ ಅರಸರ ಕಾಲದಲ್ಲಿ ವಾಸ್ತುಶಿಲ್ಪದ ಬೆಳವಣಿಗೆಗೆ ಅಷ್ಟೊಂದು ಕಾಲನೆ ಸಿಕ್ಕಲಿಲ್ಲ. ಆಗ ಆ ಹೊಯ್ಸಳ ಶೈಲಿಯೇ ಕರ್ನಾಟಕದಲ್ಲೆಲ್ಲ ರೂಢವಾಯಿತು. ಆದರೆ ಮೂರ್ತಿಶಿಲ್ಪದಲ್ಲಿಯೂ ಅಲಂಕಾರ ರಚನೆ-ಯಲ್ಲಿಯೂ ಕುಶಲತೆಯೂ ಹಸ್ತಲಾಘವವೂ ಕಡಮೆಯಾಗುತ್ತ ಬಂದವು.



ಬಿಷ್ಟಪ್ಪಯ್ಯನ ಗೋಪುರ ( ಹಂಪೆಯ ವಿರೂಪಾಕ್ಷ ದೇವಾಲಯದ ಮಹಾದ್ವಾರ )

ಬರಬರುತ್ತ ಸರಸತೆ ಸ್ವಾಭಾವಿಕತೆಗಳು ಹೋಗಿ ಕಲೆಯಲ್ಲಿ ಸಂಕೇತವು ಹೆಚ್ಚಾಗತೊಡಗಿತು. ( ಉದಾ: ಹಂಪೆಯ ವಿರೂಪಾಕ್ಷ ದೇವಾಲಯ.)

೧೪ನೆಯ ಶತಮಾನದಿಂದೀಚೆಗೆ ಕರ್ನಾಟಕದಲ್ಲಿ ಮುಸಲ್ಮಾನರ ಸಂಪರ್ಕವು ತಲೆದೋರಿತು. ಅವರ ಪ್ರಭಾವವು ಜನಜೀವನದಲ್ಲಿ ಪ್ರತಿ-ಬಿಂಬಿತವಾಯಿತು. ವಾಸ್ತುಶಿಲ್ಪದಲ್ಲಿಯೂ ಹಿಂದು ಶಿಲ್ಪಿಗರು ಅವರ

ಮಾದರಿಗಳನ್ನು ಅನುಸರಿಸಲಾರಂಭಿಸಿದರು. ದೊಡ್ಡ ಕಮಾನುಗಳುಳ್ಳ ಮಸೀದೆಗಳನ್ನು ಹೋಲುವ ಮಂದಿರಗಳು ವಿಜಯನಗರದ ರಾಜ್ಯದ ಕಾಲದಲ್ಲಿ ಹುಟ್ಟಿದುವು. ವಿಜಯನಗರದ ಅರಮನೆಯಲ್ಲಿರುವ ಕಮಲ-ಮಂದಿರ, ದಿವಾಣಖಾನೆ, ಕಾವಲುಮನೆ ಮುಂತಾದುವುಗಳು ದೇಶೀಯ ಶಿಲ್ಪಕಲೆಯ ಮೇಲೆ ಮುಸಲ್ಮಾನ ಪದ್ಧತಿಯು ಹೇರಿದ ಪ್ರಭಾವವನ್ನು ತೋರಿಸುತ್ತವೆ. ವಿಜಯನಗರದ ಅಳಿಗಾಲವಾದ ಮೇಲೆ ಕಲಾ-ಕೌಶಲ್ಯಗಳ ಬೆಳೆವಣಿಗೆ ಕುಗ್ಗಿತು. ಅದಕ್ಕೆ ಚಾಲನೆ ಇಲ್ಲದ್ದರಿಂದ ಗೃಹ ಮಠ ಮಂದಿರಗಳು ಕಲಾದೃಷ್ಟಿಯಿಲ್ಲದೆ ವಾಸ್ತುಶಾಸ್ತ್ರದಲ್ಲಿ ಅಭ್ಯಾಸ-ವಿಲ್ಲದ, ಪರಂಪರೆಯಿಂದ ಬಂದ ಜ್ಞಾನದಿಂದ ಶಿಲ್ಪಿಗರೆಂದೆನೆಸಿಕೊಂಡ ಉಪ್ಪಾರರಿಂದ ಕಟ್ಟಲ್ಪಡತೊಡಗಿದುವು. ಮುಂದೆ ಪರಚಕ್ರಾಕ್ರಮಣ-ದಿಂದ ದೇಶದ ಸಂಪತ್ತು ಕಡಿಮೆಯಾಗಲು ವಾಸ್ತುಗಳ ವಿಶಾಲತೆ ವೈಭವಗಳು ನಿರ್ಮಾತರ ನಿಯಮಿತ ಹಣದ ಅಧೀನವಾದುವು. ಈ ನವೀನ ಯುಗದಲ್ಲಿ ವಾಸ್ತುಶಿಲ್ಪವು ಅನ್ವರ್ಥಕವಾಗಿ ಬಾಳಲರಿಯದು.

ಹೀಗೆ ಕರ್ನಾಟಕದಲ್ಲಿ ವಾಸ್ತುಶಿಲ್ಪವು ಚಲುಕ್ಯಪದ್ಧತಿ, ಚಾಲುಕ್ಯ ಪದ್ಧತಿ, ಹೊಯ್ಸಳ ಶೈಲಿ, ವಿಜಯನಗರದ ಶೈಲಿ ಎಂದು ನಾಲ್ಕು ಮೆಟ್ಟಲುಗಳಲ್ಲಿ ನಿಂತಿದೆ.

—ಆರ್. ಎಸ್. ಪಂಚಮುಖಿ.

**೧. ಕರ್ನಾಟಕದ ದೇವಾಲಯುಗಳ ಮೊದಲಿನ ಪದ್ಧತಿ ಯಾವದು? ಅದರ ವೈಶಿಷ್ಟ್ಯಗಳೇನು? ಉದಾಹರಣೆಗಳನ್ನು ಕೊಟ್ಟು ತಿಳಿಸಿಹೇಳಿರಿ. ೨. ಕಲ್ಲುಗಳನ್ನು ಕೊರೆದು ಕಟೆದು ಕಟ್ಟುವ ವಿವಿಧ ಪದ್ಧತಿಗಳಾವವು? ಅವುಗಳ ವೈಲಕ್ಷಣ್ಯಗಳನ್ನು ಸಂಕ್ಷೇಪವಾಗಿ ಹೇಳಿರಿ. ೩. ಮುಸಲ್ಮಾನರ ಸಂಪರ್ಕದಿಂದ ಕರ್ನಾಟಕದ ಶಿಲ್ಪದಲ್ಲಿ ಯಾವ ಬದಲಾವಣೆಗಳಾದವು?**

# ೩೧. ಬುದ್ಧದೇವನ ಮಹಾನಿಷ್ಕ್ರಮಣ

**[ ಸಿ. ಕೆ. ವೆಂಕಟರಾಮಯ್ಯನವರ 'ಬುದ್ಧ' ಎಂಬ ಗ್ರಂಥದಿಂದ ಈ ಭಾಗವನ್ನು ಆರಿಸಿಕೊಳ್ಳಲಾಗಿದೆ. ಇವರ ಪರಿಚಯು ಸೊ. ಓ. ೬ನೆಯ ಪುಸ್ತಕದ ೬ನೆಯ ಪಾಠದಲ್ಲಿ ಬಂದಿದೆ. ಸಂಸಾರದ ಜಂಜಡಕ್ಕೆ ಹೇಸಿ-ಕೊಂಡು ನಿಜವಾದ ಜ್ಞಾನ ಪಡೆಯಲು ಸಿದ್ಧಾರ್ಥನು ರಾಜ್ಯವನ್ನೇ ತೊರೆಯುತ್ತಾನೆ. ಹಾಗೆ ರಾಜ್ಯವನ್ನೂ ಹೆಂಡಿರುಮಕ್ಕಳನ್ನೂ ತೊರೆದು ಕಾನನವ ಸೇರಿ ಬೋಧಿವೃಕ್ಷದಡಿಯಲ್ಲಿ ಜ್ಞಾನವನ್ನು ಪಡೆದುಕೊಂಡ ಸಿದ್ಧಾರ್ಥನನ್ನು 'ಬುದ್ಧ' ನೆಂದು ಕರೆಯುವದುಂಟು. ಆತನು ರಾಜ್ಯವನ್ನು ತೊರೆದು ಹೋಗುವಾಗಿನ ಸನ್ನಿವೇಶವು ಹೃದಯಂಗಮವಾಗಿದೆ. ಲೇಖಕರು ಅದನ್ನು ಇಲ್ಲಿ ವಿವರಿಸಿದ್ದಾರೆ. ]**

ಸಿದ್ಧಾರ್ಥನು ತನ್ನ ತಂದೆಯ ಬಳಿಗೆ ಹೋಗಿ ದಂಡಪ್ರಣಾಮ ಮಾಡಿ ಭಕ್ತಿಯಿಂದ ಬದ್ಧಾಂಜಲಿಯಾಗಿ ನಿಂತು ತತ್ವಚಿಂತನೆಗಾಗಿ ಕಾಡಿಗೆ ಪ್ರಯಾಣಮಾಡಲು ಅನುಜ್ಞೆಯಾಗಬೇಕೆಂದೂ ಸಂಸಾರ-ತ್ಯಾಗದಿಂದಲೇ ತನ್ನ ಉದ್ದೇಶವು ಈಡೇರುವುದಾಗಿರುವುದೆಂದೂ ಬಿನ್ನ-ವಿಸಿದನು. ಸಿದ್ಧಾರ್ಥನ ಮಾತುಗಳನ್ನು ಕೇಳಿ ಶುದ್ಧೋದನನು ಆನೆಯಿಂದ ಅಭಿಹತವಾದ ವೃಕ್ಷದಂತೆ ಕಂಪಿಸಿ, ಆದರದಿಂದ ಸಿದ್ಧಾರ್ಥನ ಅಂಜಲಿ-ಯನ್ನು ತನ್ನ ಅಂಗೈಗಳಿಂದ ಹಿಡಿದುಕೊಂಡು, "ಕಂದ, ಈ ಬಗೆಯ ಬುದ್ಧಿಯನ್ನು ಸಾಕುಮಾಡು. ಧರ್ಮಸಂಶ್ರಯದ ಕಾಲವು ನಿನಗೆ ಈ ವಯಸ್ಸಿನಲ್ಲಲ್ಲ. ಈ ಅಲ್ಪ ವಯಸ್ಸಿಗೇ ಅರಣ್ಯವಾಸವನ್ನು ಕೈಕೊಂಡು ಧರ್ಮಚರ್ಯೆಯನ್ನೆಸಗುವುದು ದೋಷಾವಹವೆನ್ನುತ್ತಾರೆ. ತರುಣ ವಯಸ್ಕನ ತಪಸ್ಸು ಸಾಂಗವಾಗಿ ನೆರವೇರುವುದು ಕಷ್ಟ. ಆದಕಾರಣ, ಈ ಉದ್ಯಮವನ್ನು ಬಿಡು ವಯೋನುಗುಣವಾಗಿ ಗೃಹಸ್ಥಾಶ್ರಮ-ಧರ್ಮಗಳನ್ನು ಅನುಭವಿಸಿದ ಬಳಿಕ ತಪೋವನ ಪ್ರವೇಶವು ರಮಣೀಯ-ವಾಗಿರುತ್ತದೆ," ಎಂದು ಹೇಳಿದನು.

ಆಗ ಸಿದ್ಧಾರ್ಥನು, "ತಂದೆಯೆ, ನಾಲ್ಕು ಕೋರಿಕೆಗಳನ್ನು ನೀನು ನೆರವೇರಿಸಿಕೊಡುವುದಾದರೆ ನಾನು ತಪೋವನಕ್ಕೆ ತೆರಳುವ ಪ್ರಯತ್ನ-

ವನ್ನು ಬಿಡುವೆನು,'' ಎಂದನು. ಶುದ್ಧೋದನನು ಮೈಯೆಲ್ಲ ಕಿವಿ-ಯಾಗಿದ್ದಂತೆ ಆ ಮಾತುಗಳನ್ನು ಆಲಿಸಿ ಕೇಳಿದನು. ತನ್ನ ಉದ್ದೇಶವು ಈಡೇರಬಹುದೆಂಬ ಭಾವನೆಯಿಂದ ಅವನ ಆಶಾಲತೆಯು ಬಹುದೂರ ಹಬ್ಬಿಹೋಯಿತು. ಅತ್ಯಂತ ಉತ್ಸಾಹ ಸಂತೋಷಗಳಿಂದ ರಾಜನು, "ಅವುಗಳಾವುವು ? ನಿನ್ನ ಕೋರಿಕೆಗಳನ್ನು ಅಗತ್ಯವಾಗಿ ತಿಳಿಸು," ಎಂದನು. ಸಿದ್ಧಾರ್ಥನು ಮೆಲುನುಡಿಯಲ್ಲಿ, "ನಾನು ಅರೋಗ ದೃಢ-ಕಾಯನಾಗಿರಬೇಕು. ಯೌವನವೇ ಶಾಶ್ವತವಾಗಿರಬೇಕು. ವೃದ್ಧಾ-ಪ್ಯವೇ ನನಗೆ ಬರಕೂಡದು. ನಾನು ಮರಣಹೊಂದದೆ ಚಿರಜೀವಿ-ಯಾಗಿಬರಬೇಕು. ಈ ನಾಲ್ಕು ಮನೋರಥಗಳೂ ಈಡೇರುವುದಾದರೆ ನನಗೆ ತಪೋವನ ಪ್ರವೇಶವೇ ಬೇಡ,'' ಎಂದು ಉತ್ತರ ಹೇಳಿದನು.

ಮಗನ ಮಾತುಗಳನ್ನು ಕೇಳಿ ತಂದೆಯ ಆಶಾಲತೆಯು ಛಿನ್ನ-ಭಿನ್ನವಾಗಿ ನೆಲಕ್ಕುರುಳಿತು. ಶುದ್ಧೋದನರಾಜನು ಕಂಬನಿ ತುಂಬಿ ಗದ್ಗದ ಧ್ವನಿಯಿಂದ, "ಕಂದ, ನನ್ನ ಮಾತನ್ನು ಲಾಲಿಸು. ಮೂರ್ಧಾ-ಭಿಷಿಕ್ತನಾಗಿ ರಾಜ್ಯವನ್ನು ವಹಿಸಿಕೋ. ವನಗಮನಕ್ಕೆ ನನಗೆ ಅವಕಾಶವನ್ನು ಕಲ್ಪಿಸಿಕೊಡು. ಪ್ರಜಾಪರಿಪಾಲನೆ ಮಾಡುತ್ತ ಅರಮನೆಯಲ್ಲಿ ಸುಖವಾಗಿರು," ಎಂದನು. ಸಿದ್ಧಾರ್ಥನು ಅದಕ್ಕೆ ಪ್ರತ್ಯುತ್ತರವಾಗಿ, "ತಂದೆಯೇ, ರಾಜಭೋಗವನ್ನು ಬಿಟ್ಟು ಹೋಗ-ಕೂಡದೆಂದು ನನ್ನನ್ನು ತಡೆಯುವುದು ಬೆಂಕಿಯು ಹೊತ್ತಿಕೊಂಡು ಉರಿಯುತ್ತಿರುವ ಮನೆಯನ್ನು ಬಿಟ್ಟು ಹೋಗದೆ ಒಳಗೇ ಇರುವಂತೆ ತಡೆದ ಹಾಗೆ," ಎಂದನು. ಶುದ್ಧೋದನನು ಪುತ್ರಸ್ನೇಹವನ್ನು ಸೂಚಿಸುವ ಪ್ರೀತಿಯ ಮಾತುಗಳಿಂದ ಸಮಾಧಾನ ಹೇಳಿದನು. ಶಾಸ್ತ್ರ-ವಚನಗಳ ಪ್ರಮಾಣದ ಮೇಲೆ ನಿರೋಧಿಸಿ ನೋಡಿದನು; ಕೊನೆಗೆ ದೀನವಾಣಿಯಿಂದ ಬೇಡಿ ನೋಡಿದನು. ಕೃತನಿಶ್ಚಯನಾದ ಸಿದ್ಧಾರ್ಥನ ಮನಸ್ಸನ್ನು ಕದಲಿಸುವುದು ಅವನಿಂದ ಸಾಧ್ಯವಾಗಲಿಲ್ಲ.

ಸಿದ್ಧಾರ್ಥನು ಸಂಗೀತಲೋಲನಾಗಿದ್ದ ಕಾರಣ, ಶುದ್ಧೋದನನು ತನ್ನ ಕೊನೆಯ ಪ್ರಯತ್ನವಾಗಿ ಸಂಗೀತಗೋಷ್ಠಿಯನ್ನೇರ್ಪಡಿಸಿ ಸಿದ್ಧಾರ್ಥನ ಸಂಕಲ್ಪವನ್ನು ಮುರಿಯುವ ಯೋಚನೆಯನ್ನು ಮಾಡಿದನು.

ಸಿದ್ಧಾರ್ಥನು ಸಂಸಾರತ್ಯಾಗಮಾಡುವುದರಲ್ಲಿದ್ದಾನೆಂಬ ಸುದ್ದಿಯನ್ನೇ ಕುಸುಮಕೋಮಲೆಯರಾದ ಯುವರಾಣಿಯರಿಗೆ ತಿಳಿಸದೆ, ಅಂತಃಪುರದಲ್ಲಿ ಅಂದು ಸಂಧ್ಯಾಕಾಲ ಅತ್ಯುತ್ತಮವಾದ ಸಂಗೀತಗೋಷ್ಠಿಯನ್ನು ನಡೆಯಿಸಿ, ಕಾರಣಾಂತರದಿಂದ ವಿಷಾದಗೊಂಡಿದ್ದ ಸಿದ್ಧಾರ್ಥನನ್ನು ಅವರೆಲ್ಲರೂ ಸಂತೋಷಪಡಿಸಬೇಕೆಂದು ಅಪ್ಪಣೆ ಮಾಡಿದನು. ಯುವರಾಣಿಯರಿಗೆ ಬೇಕಾಗಿದ್ದುದನ್ನೇ ಅವರ ಮಾವನೂ ಸೂಚಿಸಿದ ಮೇಲೆ ಅವರ ಉತ್ಸಾಹವನ್ನೂ ಸಡಗರವನ್ನೂ ಕೇಳಬೇಕೆ? ಅವರೆಲ್ಲರೂ ವಿಜೃಂಭಣೆಯಿಂದ ಸಂಗೀತಗೋಷ್ಠಿಗೆ ಸಜ್ಜುಗೊಳಿಸಿದರು; ಚಿತ್ತಾಕರ್ಷಕವಾದ ವಸ್ತ್ರಾಭರಣಗಳಿಂದ ಅಲಂಕಾರಮಾಡಿಕೊಂಡರು; ಚಿತ್ರವಿಚಿತ್ರವಾಗಿ ಅಂತಃಪುರವನ್ನು ಅಲಂಕರಿಸಿದರು. ಅಂತಃಪುರವು ಅಪೂರ್ವವಸ್ತುಗಳಿಂದಲೂ ಉತ್ತಮವಾದ ಆಸನಗಳಿಂದಲೂ ಕನಕನಿರ್ಮಿತವಾದ ದೀಪವೃಕ್ಷಗಳಿಂದಲೂ ಶೋಭಿಸುತ್ತ, ಕೃಷ್ಣಾಗರು ಮುಂತಾದುವುಗಳ ಧೂಪದ ಸುವಾಸನೆಯಿಂದ ತುಂಬಿದ್ದಿತು.

ಅಂದು ಅರ್ಧರಾತ್ರಿಗೆ ಅರಮನೆಯನ್ನು ಬಿಟ್ಟು ಹೊರಡಬೇಕೆಂದಿದ್ದ ಸಿದ್ಧಾರ್ಥನು ಅವರ ಸಂತೋಷಕ್ಕೆ ತನ್ನಿಂದ ಅಡ್ಡಿಯಾಗುವುದೇಕೆಂದು ಬಗೆದು ಸಂಧ್ಯಾಕಾಲಕ್ಕೆ ಅಂತಃಪುರಕ್ಕೆ ಬಿಜಯಮಾಡಿ ತನಗಾಗಿ ಮೀಸಲಾಗಿದ್ದ ವಜ್ರಖಚಿತವಾದ ಸುವರ್ಣಾಸನದಲ್ಲಿ ಮಂಡಿಸಿದನು. ಶೃಂಗಾರಜಲಧಿಯೇ ಉಕ್ಕಿಬಂದಂತೆ ನಾರೀನಿವಹವು ಶೋಭಿಸುತ್ತಿದ್ದಿತು. ಕಲಾಸಂಪನ್ನೆಯರಾದ ಬಹುಮಂದಿ ವಿಲಾಸಿನಿಯರು ವೀಣಾವೇಣು ಮೃದಂಗಾದಿ ವಾದ್ಯಗಳನ್ನು ಮನೋಹರವಾಗಿ ಬಾರಿಸಿ ಗಾನಸುಧಾರಸದ ಅಮೃತವರ್ಷವನ್ನು ಕರೆದರು. ಯುವರಾಣಿಯರು ಉತ್ತಮೋತ್ತಮವಾದ ಗೀತಗಳನ್ನು ತಾವೂ ಹಾಡಿ ಇನಿಯನ ಮನಸ್ಸಿನ ಸಂತೋಷವಾಗುವಂತೆ ಪ್ರಯತ್ನಿಸಿದರು. ಯಥಾಕಾಲದಲ್ಲಿ ಸಂಗೀತಗೋಷ್ಠಿಯು ಮುಗಿಯಿತು. ಸಿದ್ಧಾರ್ಥನ ದೃಢನಿಶ್ಚಯವು ಲೇಶವೂ ಮಾರ್ಪಡಲಿಲ್ಲ.

ಆದಿನ ರಾತ್ರಿ ಅರಮನೆಯಲ್ಲಿ ಸಮಸ್ತರೂ ನಿದ್ರಿಸಿದರೂ ಸಿದ್ಧಾರ್ಥನೊಬ್ಬನು ಮಾತ್ರ ಎಚ್ಚರವಾಗಿಯೇ ಮಲಗಿದ್ದನು. ಸಮರಾತ್ರಿಯು

ಕಳೆದಬಳಿಕ ಅರಮನೆಯನ್ನು ಬಿಟ್ಟುಹೋಗಬೇಕೆಂದು ಆತನ ಸಂಕಲ್ಪ-ವಾಗಿದ್ದಿತು. ಯಶೋಧರಾದೇವಿಯೇ ಮುಂತಾದವರಿಗೆ ಆ ವಿಚಾರ-ವನ್ನು ತಿಳಿಸದೆ ಆತನು ಅದನ್ನು ಮರೆಮಾಚಿದುದಕ್ಕೆ ವಂಚನೆಯು ಆತನ ಉದ್ದೇಶವಲ್ಲ. ತನ್ನ ತಪೋವನಗಮನವಾರ್ತೆಯಿಂದ ನವಯುವ-ತಿಯರಾದ ತನ್ನ ಪ್ರಿಯಪತ್ನಿಯರ ದುಃಖಾವೇಗವು ಅಪರಿಮಿತವಾಗ-ದಿರದೆಂಬ ಯೋಚನೆಯಿಂದ ಸಿದ್ಧಾರ್ಥನು ಅದನ್ನು ಅವರಿಗೆ ತಿಳಿಸಲಿಲ್ಲ. ಆತನಿಗೆ ಅವರ ಮೇಲಿದ್ದ ಪ್ರೀತಿಯೇನೂ ಕಡಿಮೆಯಾಗಿರಲಿಲ್ಲ. ಆದ-ಕಾರಣವೇ ತಾನು ಅರಮನೆಯನ್ನು ಬಿಟ್ಟುಹೋಗುವುದಕ್ಕೆ ಮುಂಚೆ ಪತ್ನೀಪುತ್ರರನ್ನೊಮ್ಮೆ ಕಣ್ಣುತುಂಬ ನೋಡಲಿಚ್ಛಿಸಿ ಅವನು ಅಂತಃ-ಪುರಕ್ಕೆ ತೆರಳಿದನು. ರೋಹಿಲನನ್ನು ತೋಳ ತಕ್ಕೆಯಲ್ಲಿ ಅಪ್ಪಿಕೊಂಡಿದ್ದ ಯಶೋಧರೆಯನ್ನು ಕಂಡಾಗಲಂತೂ ಸಿದ್ಧಾರ್ಥನು ಒಂದೆರಡು ನಿಮಿಷ-ಗಳ ಕಾಲ ಮುಗ್ಧನಾಗಿ ನಿಂತಿದ್ದನು. ರೋಹಿಲನ ಮುದ್ದುಮುಖ-ವನ್ನೊಮ್ಮೆ ಮುತ್ತಿಡಬೇಕೆಂದು ಆಸೆಯಾಯಿತು. ಆದರೆ ತಾನು ಆ ರೀತಿ ಮಾಡಿದರೆ ರೋಹಿಲನಿಗೂ ಯಶೋಧರೆಗೂ ಎಚ್ಚರವಾಗಿ ತನ್ನ ಪ್ರಯಾಣವೇ ನಿಂತುಹೋಗಬೇಕಾದೀತೆಂದು ಶಂಕಿಸಿ ಸುಮ್ಮನಾದನು. ತನ್ನ ಪ್ರಿಯಪತ್ನಿಯ ಸೌಂದರ್ಯವನ್ನೂ ರೋಹಿಲನ ರೂಪವನ್ನೂ ನೋಡಿ ನೋಡಿ ಪ್ರೇಮಪರವಶನಾಗಿ ಸ್ತಬ್ಧತೆಯಿಂದ ಸುಮ್ಮನೆ ನಿಂತನು. ಅವರನ್ನಗಲಿ ಹೋಗಲು ಮನಸ್ಸು ಬಾರದು. ಅಗಲಿ-ಹೋಗದಿದ್ದರೆ ನಿರ್ವಾಹವಿಲ್ಲ. ಹೋಗುವುದೇ ಬಿಡುವುದೇ ಎಂದು ತರ್ಕಿಸಿ, ಕೊನೆಯ ಸಾರಿ ಅವರ ಕಡೆಗೆ ಪ್ರೇಮಪೂರಿತ ದೃಷ್ಟಿಯನ್ನು ಬೀರಿ ಅಂತಃಪುರವನ್ನು ಬಿಟ್ಟು ಆಪ್ತಭೃತ್ಯ ಛಂದಕನ ಬಳಿಗೆ ಹೋಗಿ ಕಂಥಕವನ್ನು ತರುವಂತೆ ಅಪ್ಪಣೆಮಾಡಿ ಅವನು ಅರಮನೆಯಿಂದ ಹೊರಬಿದ್ದನು.

ಅಶ್ವವನ್ನೇರುವ ಮೊದಲು ಪ್ರೀತಿಯಿಂದ ಅದರ ಕೊರಳನ್ನು ಸವರಿ, "ಕಂಥಕ, ನನ್ನ ಹಿತಕ್ಕಾಗಿಯೂ ಜಗತ್ತಿನ ಹಿತಕ್ಕಾಗಿಯೂ ನನ್ನನ್ನು ಕರೆದೊಯ್ದು ಉಪಕರಿಸು," ಎಂದು ಮಿತ್ರನಂತೆ ಆ ಅಶ್ವರತ್ನ-ವನ್ನು ಸಂಬೋಧಿಸಿ ವಾತ್ಸಲ್ಯಯುಕ್ತನಾದ ತಂದೆಯೂ ಅನುರಕ್ತೆಯ-

ರಾವ ಪತ್ನಿಯರೂ ಪ್ರಿಯತಮನಾದ ಸುತನೂ ಪ್ರೇಮವಂತರಾದ ಪ್ರಜೆಗಳೂ ಇದ್ದ ಕಪಿಲವಸ್ತು ನಗರವನ್ನೂ ರಾಜ್ಯಲಕ್ಷ್ಮಿಯನ್ನೂ ಬಿಟ್ಟು ಅರಣ್ಯದ ಕಡೆಗೆ ಹೊರಟನು. ಕಪಿಲವಸ್ತುನಗರದ ಹೊರಭಾಗ-ವನ್ನು ಸೇರಿದಾಗ ತನಗೆ ಅಷ್ಟು ದಿನಗಳೂ ಆಶ್ರಯವಾಗಿದ್ದ ಆ ನಗರಕ್ಕೆ ಕೈಮುಗಿದು ಜನನ ಮರಣರೂಪದ ಸಂಸಾರ ದುಃಖದಿಂದ ನಿವೃತ್ತ-ನಾಗುವ ಮಾರ್ಗವನ್ನು ಕಂಡಲ್ಲದೆ ಹಿಂತಿರುಗೆನೆಂದು ಪ್ರತಿಜ್ಞೆ ಮಾಡಿ-ದನು. ತನ್ನ ಸ್ವಾಮಿಯ ವರ್ತನೆಯನ್ನು ಕಂಡು ಆತನಿಗೆ ಅದೇ ತನ್ನ ಕೊನೆಯ ಸೇವೆಯಿರಬಹುದೆಂದು ಛಂದಕನಿಗೆ ಸಂಶಯವಾಯಿತು. ಆದರೂ ಅವನು ಏನೊಂದನ್ನೂ ಹೇಳದೆ ಕುತೂಹಲದಿಂದಲೂ ವ್ಯಥೆಯಿಂದಲೂ ತನ್ನ ಕುದುರೆಯನ್ನೇರಿ ತನ್ನ ಸ್ವಾಮಿಯನ್ನು ಹಿಂಬಾಲಿಸಿದನು.

ಬೆಳಗಾಗುವ ವೇಳೆಗೆ ಅವರು ಬಹುದೂರ ಪ್ರಯಾಣಮಾಡಿ ಭಾರ್ಗವನೆಂಬ ಮುನಿಯ ಆಶ್ರಮದ ಬಳಿಗೆ ಹೋದರು. ಹೊಸಬರು ಹತ್ತಿರಕ್ಕೆ ಬಂದರೂ ನಿರಾತಂಕವಾಗಿ ಮಲಗಿದ್ದ ಜಿಂಕೆಗಳನ್ನು, ಅಲ್ಪ-ಸ್ವಲ್ಪವೂ ಬೆದರದೆ ಸುಮ್ಮನಿದ್ದ ಪಕ್ಷಿಸಮೂಹವನ್ನು ಕಂಡು ಅದು ಆಶ್ರಮ ಪ್ರದೇಶವಾಗಿರಬೇಕೆಂದು ಸಿದ್ಧಾರ್ಥನು ಒಡನೆಯೇ ಕುದುರೆ-ಯಿಂದಿಳಿದು ಆದರದಿಂದ ಅದನ್ನು ಮೈದಡವಿ, "ಕಂಥಕ, ಇನ್ನುಮೇಲೆ ನಿನಗೆ ಶ್ರಮ ಕೊಡುವುದಿಲ್ಲ. ನಿನ್ನನ್ನು ತೊಂದರೆ ಪಡಿಸಿದುದು ಇದು ಕೊನೆಯ ಸಲ," ಎಂದನು. ಛಂದಕನು ತನ್ನ ಶಂಕೆ ನಿರ್ಣೀತವಾಯಿತೆಂದು ಶೋಕಸಂತಪ್ತನಾಗಿ ಕುತೂಹಲದಿಂದ ಸಿದ್ಧಾರ್ಥನ ಮುಖವನ್ನು ನೋಡಿದನು. ಸಿದ್ಧಾರ್ಥನು ಪ್ರೀತಿರಸದಿಂದಲೇ ಛಂದಕನಿಗೆ ಸ್ನಾನ-ಮಾಡಿಸುವನೋ ಎಂಬ ತೋರುವಂತಿದ್ದ ಸ್ನಿಗ್ಧಮಧುರ ದೃಷ್ಟಿಯಿಂದ ಅವನ ಮುಖವನ್ನು ನೋಡುತ್ತ, "ಛಂದಕ, ಸ್ವಾಮಿಭಕ್ತಿಯು ನಿನ್ನ ದೃಷ್ಟಿಯಲ್ಲಿ ಚಿತ್ರಿತವಾಗಿದೆ. ನೀನು ಇದುವರೆಗೂ ಮಾಡಿದ ಸೇವೆ-ಯಿಂದ ಸಂತುಷ್ಟನಾಗಿದ್ದೇನೆ. ಆದರೆ ಒಂದು ವಿಶೇಷ. ಸ್ವಾಮಿಭಕ್ತಿ-ಯಿಲ್ಲದ ಸಾಮರ್ಥ್ಯವಂತರಾದ ಸೇವಕರನ್ನೂ ನಾನು ಅಸಂಖ್ಯಾತವಾಗಿ ಕಂಡುದುಂಟು. ಆದರೆ ಸಾಮರ್ಥ್ಯವೂ ಸ್ವಾಮಿಭಕ್ತಿಯೂ ಎರಡೂ

ಇರತಕ್ಕ ನಿನ್ನಂತಹವನನ್ನು ಕಾಣುವುದು ದುರ್ಲಭವೇ ಸರಿ," ಎಂದು ಹೇಳಿದನು. ಆಬಳಿಕ ಛಂದಕನಿಗೆ ಅನರ್ಘ್ಯವಾದ ಆಭರಣಗಳ ಮೆಚ್ಚನ್ನು ಕೊಟ್ಟು, "ಛಂದಕ, ಹೋಗಿ ಬಾ ; ಸುಖವಾಗಿ ಬಾಳು," ಎಂದನು.

ಛಂದಕನು ಕಣ್ಣೀರನ್ನು ಸುರಿಸುತ್ತ, "ಪ್ರಭುವೆ, ನಿನ್ನ ಮಾತಿಗೆ ನಾನೆಂದೂ ಪ್ರತಿಹೇಳಿದವನಲ್ಲ. ಆದರೆ ಇಂದು ಮಾತನಾಡಲೇ ಬೇಕಾಗಿದೆ. ಕಾರುಣ್ಯನಿಧಿಯಾದ ನೀನು ನನ್ನ ಅಲ್ಪ ಸೇವೆಯನ್ನೂ ಮೆಚ್ಚಿರುವುದರಲ್ಲಿ ಆಶ್ಚರ್ಯವೇನುಂಟು? ಆದರೆ ಪ್ರಭುವೆ, ನೀನು ಬಿಜಯ-ಮಾಡುವುದೆಲ್ಲಿಗೆ?" ಎಂದನು. ಸಿದ್ಧಾರ್ಥನು, "ಛಂದಕ, ನಾನು ಜನನಮರಣಗಳಿಂದ ಪಾರಾಗುವ ಪರಮಾರ್ಥವನ್ನು ಸಾಧಿಸಲು ತಪೋ-ವನಕ್ಕೆ ತೆರಳುವೆನು," ಎಂದನು. ಛಂದಕನು ಕಣ್ಣೀರನ್ನು ಸುರಿಸುತ್ತ, "ಪ್ರಭುವೆ, ನಿನ್ನ ಈ ಬಗೆಯ ಸಂಕಲ್ಪವನ್ನು ಕಂಡು ಕಬ್ಬಿಣದ ಹೃದ-ಯವೂ ಕರಗಿಹೋಗುವುದಾಗಿದೆ. ಅಂತಃಪುರದಲ್ಲಿ ಹಂಸತೂಲಿಕಾ-ತಲ್ಪದಲ್ಲಿ ಪವಡಿಸುತ್ತಿದ್ದ ನನ್ನ ಪ್ರಭುವಿಗೆ ಇನ್ನು ಮುಂದೆ ದರ್ಭಶಯ-ನವೇ? ನಾನಂತು ಕಪಿಲವಸ್ತುವಿಗೆ ಹೋಗಲಾರೆ. ನಿನ್ನನ್ನು ಸೇವಿ-ಸುತ್ತ ನಿನ್ನ ಬಳಿಯಲ್ಲಿಯೇ ನಿಲ್ಲುವೆನು," ಎಂದು ಹೇಳಿ ಮಗುವಿನಂತೆ ರೋದಿಸಿದನು.

—ಸಿ. ಕೆ. ವೆಂಕಟರಾಮಯ್ಯ.

**೧. ಸಿದ್ಧಾರ್ಥನು ತಪೋವನಕ್ಕೆ ತೆರಳುವ ನಿರ್ಧಾರಮಾಡುವದರಲ್ಲಿ ಯಾವ ಉದ್ದೇಶವನ್ನಿಟ್ಟುಕೊಂಡಿದ್ದನು? ೨. ಶುದ್ಧೋದನನು ತನ್ನ ಮಗನ ನಿರ್ಧಾರವನ್ನು ಹೋಗಲಾಡಿಸಲು ಯಾವ ಯಾವ ಉಪಾಯ-ಗಳನ್ನು ಯೋಜಿಸಿದನು? ೩. ಸಿದ್ಧಾರ್ಥನು ಕಪಿಲವಸ್ತುವನ್ನು ಬಿಡುವಾಗ ಆದ ಕಷ್ಟಗಳನ್ನು ಹೇಳಿರಿ. ೪. ತನ್ನ ಕುದುರೆ ಹಾಗು ಛಂದಕನು ಯಾವ ರೀತಿಯಿಂದ ತನ್ನ ಸೇವೆ ಮಾಡಿದರೆಂದು ಸಿದ್ಧಾರ್ಥನು ಹೇಳುತ್ತಾನೆ? ೫. ಬದ್ಧಾಂಜಲಿಯಾಗಿ, ಮೈಯೆಲ್ಲ ಕಿವಿಯಾಗಿದ್ದಂತೆ, ಮೆಲುನುಡಿ, ಅಮೃತವರ್ಷ, ವಾತ್ಸಲ್ಯಯುಕ್ತ ಇವುಗಳ ಅರ್ಥ ಹೇಳಿರಿ.**

---

# ೩೨. ಚಂದ್ರೋದಯ

**[ ವಿರೂಪಾಕ್ಷ ಪಂಡಿತ ಕವಿಯ ' ಚೆನ್ನಬಸವಪುರಾಣ ' ದಿಂದ ಈ ಭಾಗವನ್ನು ಆರಿಸಿಕೊಳ್ಳಲಾಗಿದೆ. ಕವಿ ಸುಮಾರು ೧೫೮೪ ರಲ್ಲಿ ಕಾವ್ಯರಚನೆ ಮಾಡಿದನು. ಈತ ಹಂಪೆಯುವ, ವೀರಶೈವ. ಕನ್ನಡದಲ್ಲಿ ಸುಲಲಿತವಾದ ಷಟ್ಪದೀಕಾವ್ಯವನ್ನು ಬರೆದು ಒಳ್ಳೆಯ ಜನಪ್ರಿಯತೆಯನ್ನು ಪಡೆದಿದ್ದಾನೆ. ಕಲ್ಪನೆಯ ಸೊಗಸು, ವರ್ಣನೆಯ ಜಾಣ್ಮೆ, ಹೊಂದಿಕೆ ಇವುಗಳು ಈತನ ಕಾವ್ಯದಲ್ಲಿ ಕಂಡುಬರುತ್ತಿವೆ. ಇಲ್ಲಿ ಆರಿಸಿದ ಚಂದ್ರೋದಯದ ವರ್ಣನೆಯಲ್ಲಿ ಈ ಗುಣಗಳಿವೆ. ]**

ಅನ್ನೆಗಂ, ಪಶ್ಚಿಮಾಂಗನೆ ಲೀಲೆಯಿಂ ಪಿಡಿದ
ರನ್ನದಿಮ್ಮೈಗನ್ನಡಿಯೊ ? ವಾರುಣಿಯ ಮಸ್ತ-
ಕೋನ್ನತ ನವೀನ ಮಾಣಿಕ್ಯವೋ ? ವಡಬಾಗ್ನಿಯಿಂ
ಪಿಡಿದ ಪೆರ್ಗಿಡಿಯಿದೋ ? ||
ಮುನ್ನೀರ ಸತಿ ಪತಿಗೆಯಾರತಿಯನೆತ್ತಿ ಜವ-
ದಿನ್ನೆಗಪಿ ಚೆಲ್ಲಲಾಕೆಯ ಕೈಯೊಳಿರ್ಪ ಪೊಸ-
ಪೊನ್ನ ಪರಿಯಾಣಮೆನಲಸ್ತಗಿರಿಮಸ್ತಕದೊಳಿನಬಿಂಬ-
ಮೆಸೆದಿರ್ದುದು. || ೧ ||

ಸುರಪ ಮುಖ್ಯಾಖಿಳದಿಶಾಧಿಪರ ಖೇಚರರ
ಪೊರೆಯೊಳೊಪ್ಪಿರ್ಪ ಕೈದೀವಿಗೆಗಳೋ ? ಮೀಣು
ಸ್ಫುರಿಸುವಂಬರದ ರತ್ನಂ ಪೋಗಲಾಗಸಮುದಾದ್ಯಂತ ಭೂಮಿಯೊಳಗೆ ||
ಪರಿಕಿಸಲ್ ಲೆಕ್ಕಮಿಲ್ಲದೆ ಲೋಚನಂಗಳಂ
ಧರಿಸಿದುದೊ ? ಮನಸಿಜಂ ತನ್ನ ಜಸಮಂ ನಭೋ-
ಧರೆಯೊಳಗೆ ಪೊಯ್ದನೋ ? ಪೇಳೆನಲ್ ತಾರಾಳಿ ಗಗನದೊಳ್
ಕಣ್ಗೆಸೆದುವು || ೨ ||

ತರಣಿಯಂ ಬೆನ್ನಟ್ಟಲೊಡನೆ ಪಿಡಿಯಾಳಾದ
ಕಿರಣಂಗಳಂ ಸೆರೆಯಿನಲ್ಲಿಟ್ಟುದೋ ತಮಂ
ನಿರುತಮಿದಿರ್ಗಂ ನಿಲ್ಲದೀತಮುವಿದಂ ಮರೆಯೊಳಡಕದಿಂ ಪಿಡಿಯಲೆಂದು||

ಸರಸಿಜಸಖಂ ತನ್ನ ಬಲವನಲ್ಲಲ್ಲಿ ಮೈ-
ಗರೆದುಮಿರಲೆಂದು ನೇಮಿಸಿದನೋ ಪೇಳೆನಲ್
ಕರವೊಪ್ಪಿದುವು ದೀಪಮುವು ತಮಸ್ತಾಪಮುವು ಮನೆಮನೆ-
ಗಳೊಳ್ತಪ್ಪದೆ. ॥ ೩ ॥

ಕಾಲನೆಂದೆಂಬ ಶೌಳಿಗನೊಸೆದು ದೇವೇಂದ್ರ-
ನೋಲಗದೊಳಾಡುವಲ್ಲಿಟ್ಟ ರನ್ನದ ಚೆಂಡು
ಮೇಲೆ ಪೊಂಜೆಂಡು ಮೌಕ್ತಿಕದ ಚೆಂಡಾದಂತನುಕ್ರಮ-
ದೊಳಿಂದುಬಿಂಬಂ ॥
ಸಾಲಾಗಿಯರುಣಂ ಪಿಶಂಗಮಾ ಸಿತರುಚಿಗ-
ಳೋಲೈಸಿ ಪೂರ್ವಾದ್ರಿಯೆಂಬ ದೇವಾಲಯದ
ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ
ಚೆಲ್ವಾದುದು. ॥ ೪ ॥

ನಗನಿಕಾಯಂ ರಜತಗಿರಿಯಂತೆ ಕಂಗೊಳಿಸೆ,
ಖಗಸಂಕುಲಂ ವಿಮಲಹಂಸಾಕೃತಿಯಿನೊಪ್ಪೆ,
ಬಗೆಬಗೆಯ ಪುಷ್ಪರಾಜಿಗಳಮಳವಿಚಕಿಲ ಪ್ರಸೂನಂಗಳೆಂಬಂತಿರೆ, ॥
ಜಗತೀದ್ವಿಪೌಘಮೈರಾವತ ಪ್ರಭೆಯೊಳಿರೆ,
ನಗಜಾತೆ ವಾಣಿಯಂತಿರೆ, ಯಮುನೆ ದೇವನಿ-
ಮ್ನಗೆಯಂತೆ ರಂಜಿಸಲ್ ಪೊಗಳ್ವ ಕವಿಯಾವನಾ ಜ್ಯೋತ್ಸ್ನಾ
ಪ್ರಭಾವತೆಯನು ? ॥ ೫ ॥

ಸರಸಿಜಭವಂ ಸಕಲ ಭೂಮಿಯಂ ತದ್ಗೃಹಾಂ-
ತರಹರ್ಮ್ಯದೇವಾಲಯಂಗಳಂ ಬೆಳ್ಳಿಯಿಂ
ವಿರಚಿಸಿದನೆನೆ, ಧರೆಯ ವರ್ಣಂಗಳಮಳಧವಳಾದ್ವೈತಮಾದುವೆನಲು, ॥
ಪರಿಕಿಸಲ್ ಮುತ್ತು ತೀವಿರ್ದ ಪಳಿಕಿನ ದೊಡ್ಡ
ಭರಣಿಯಂತೊಪ್ಪೆ, ಬ್ರಹ್ಮಾಂಡಮಾ ಬಾಯ್ಗೆ ಮು-
ಚ್ಚಿರಿಸಿರ್ದ ಕರ್ಪುರದ ಹಲ್ಲೆಯಂತೆಸೆಯೆ ಶಶಿ ಚೆಲ್ವಾಯ್ತು
ಚಂದ್ರಾತಪಂ. ॥ ೬ ॥

—ವಿರೂಪಾಕ್ಷ ಪಂಡಿತ.

೧. ಚಂದ್ರ, ನಕ್ಷತ್ರ ಮತ್ತು ದೀಪ ಇವುಗಳನ್ನು ಕವಿ ಯಾವ ಯಾವ ವಸ್ತುಗಳಿಗೆ ಹೋಲಿಸಿರುವನು ? ೨. ಬೆಳ್ದಿಂಗಳ ಸೊಬಗನ್ನು ನಿಮ್ಮ ಶಬ್ದಗಳಲ್ಲಿ ಸ್ಪಷ್ಟಗೊಳಿಸಿರಿ. ೩. ಚಂದ್ರಬಿಂಬವು ಮಣಿಗಳಸ, ಪೊಂಗಳಸ ಮತ್ತು ರಜತಕಲಶ ಇವುಗಳಂತೆ ಕಾಣಿಸಿತೆಂದು ಕವಿ ಹೇಳುತ್ತಾನೆ. ಅದು ಹೇಗೆ ?

## ೩೩. ಶಕುಂತಳೆ ಪತಿಗೃಹಕ್ಕೆ ಹೋದದ್ದು

[ ಕವಿಕುಲತಿಲಕನಾದ ಕಾಲಿದಾಸನ ಸಂಸ್ಕೃತ ನಾಟಕಗಳಲ್ಲಿ ಶಾಕುಂತಲ ನಾಟಕವು ಅಗ್ರಗಣ್ಯವೆನಿಸಿದೆ. ಅದರಲ್ಲಿ ೪ನೆಯ ಅಂಕದಲ್ಲಿ-ಶಕುಂತಲೆ ಪತಿಗೃಹಕ್ಕೆ ಹೋಗುವ ದೃಶ್ಯವು ರಮ್ಯವಿರುವಂತೆಯೇ ಮನಸ್ಸು ಕರಗಿಸುವದೂ ಆಗಿದೆ. ಇಲ್ಲಿ ಅದನ್ನು ಆರಿಸಿಕೊಂಡಿದ್ದೇವೆ. ಶಾಕುಂತಲವನ್ನು ಕನ್ನಡಿಸಿದ ಕೈ. ವಾ. ಬಸವಪ್ಪ ಶಾಸ್ತ್ರಿಗಳ ಚರಿತ್ರವನ್ನು ಸೊಗಸಿನ ಓದಿನ ಆರನೆಯ ಪುಸ್ತಕದ ೧ನೆಯ ಪಾಠದಲ್ಲಿ ನೋಡಿರಿ. ]

**ಗೌತಮಿ:—** ಎಲೆ ಮಗಳೆ, ಪ್ರಿಯಬಂಧುಗಳಂತಿರುವ ಈ ತಪೋವನ ದೇವತೆಗಳು ಅನುಜ್ಞೆಯನ್ನು ಕೊಟ್ಟರು. ಇನ್ನು ಇವರಿಗೆ ನಮಸ್ಕರಿಸಿ ನಡೆ.

( ಶಕುಂತಳೆ ನಮಸ್ಕರಿಸಿ ಹೋಗುತ್ತಾ )

**ಶಕುಂತಳೆ:—** ಎಲೆ ಪ್ರಿಯಂವದೆ, ಪತಿಯನ್ನು ನೋಡುವ ಕುತೂಹಲವು ನನಗೆ ಬಹಳವಾಗಿದ್ದಾಗ್ಯೂ ಆಶ್ರಮವನ್ನು ಬಿಟ್ಟು ಹೋಗುವ ನನ್ನ ಕಾಲುಗಳು ಅತಿ ಕಷ್ಟದಿಂದ ಮುಂದಕ್ಕೆ ಸಾಗುವವು.

**ಪ್ರಿಯಂವದೆ:—** ಎಲೆ ಸಖಿ, ತಪೋವನವನ್ನು ಬಿಟ್ಟು ಹೋಗಲಾರದ ದುಃಖ ನಿನಗೊಬ್ಬಳಿಗೆ ಅಲ್ಲ. ನಿನ್ನ ವಿಯೋಗದಿಂದ ತಪೋವನಕ್ಕಾದ ಅವಸ್ಥೆಯನ್ನು ನೋಡು.

ಕುಣಿವುದನುಳಿದುವು ಶಿಖಿಗಳ್
ತೃಣಕಬಳಂ ಜಗುಳೆ ಬಾಯಿನರಿಯದು ಹರಿಣೀ ||
ಗಣಮುದಿರ್ಪೆಲೆಯಿಂ ರಮಣೀ-
ಮಣಿ ಕಣ್ಣೀರ್ವಿಡುವ ತೆರದೆ ತೋರ್ಪುವು ಲತೆಗಳ್ ||

**ಶಕುಂತಳೆ :—** ( ಸ್ಮರಿಸಿಕೊಂಡು ) ತಂದೆಯೆ, ಲತಾಭಗಿನಿಯಾದ ವನಜ್ಯೋತ್ಸ್ನೆಗೆ ಹೇಳಿಬರುವೆನು.

**ಕಣ್ವ :—** ಬಲ್ಲೆನು, ನಿನಗದರಲ್ಲಿ ಒಡಹುಟ್ಟಿದ ಸ್ನೇಹವಿರುವ-ದಷ್ಟೇ, ಇದೋ ಬಲಗಡೆ ಇರುವದು.

**ಶಕುಂತಳೆ :—** (ಲತೆಯ ಬಳಿಗೆ ಬಂದು) ಎಲೆ ವನಜ್ಯೋತ್ಸ್ನೆಯೆ, ಸಹಕಾರ ಸಂಗತೆಯಾಗಿದ್ದರೂ ಈ ಕಡೆಯ ಶಾಖಾಭುಜಗಳಿಂದ ನನ್ನನ್ನು ಆಲಿಂಗಿಸು; ಇನ್ನುಮೇಲೆ ನಿನಗೆ ನಾನು ದೂರಗತೆಯಾಗುವೆ-ನಲ್ಲವೆ ?

**ಕಣ್ವ :—** ನಂದನೆ ನಾಂ ಸಂಕಲ್ಪಿಸಿ-
ದಂದದೊಳನುರೂಪ ಪತಿಯ ಸೇರಿದೆ ನೀಂ ಸೈ-||
ಪಿಂದೀ ಮಾಲತಿಯುಂ ಮಾ-
ಕಂದವನೊಂದಿತ್ತು ನಿಮ್ಮೊಳಾಂ ನಿಶ್ಚಿಂತಂ ||

ಇತ್ತಲೀ ಮಾರ್ಗವಾಗಿ ನಡೆ.

**ಶಕುಂತಳೆ :—** ಎಲೇ ಸಖಿಯರೆ, ಈ ವನಜ್ಯೋತ್ಸ್ನೆಯನ್ನು ನಿಮ್ಮಿಬ್ಬರ ಕಯ್ಗೆ ಕೊಟ್ಟಿರುವೆನು.

**ಸಖಿಯರು :—** ಇದನಂತು ನಮ್ಮ ಕಯ್ಗೆ ಕೊಟ್ಟೆ, ನಮ್ಮನ್ನು ನೀನು ಈಗ ಯಾರ ಕೈಗೆ ಕೊಟ್ಟೆ ? ( ಎಂದು ಕಣ್ಣೀರನ್ನು ಮಿಡಿಯುವರು.)

**ಕಣ್ವ :—** ಎಲೌ ಅನಸೂಯೆ, ಎಲೆ ಪ್ರಿಯಂವದೆ, ಇದೇನು ? ನೀವೇ ಹೀಗೆ ರೋದಿಸುವದಕ್ಕೆ ಉಪಕ್ರಮಿಸಿದರೆ ಇನ್ನು ಶಕುಂತಳೆ-ಯನ್ನು ಸಮಾಧಾನಪಡಿಸುವರು ಯಾರು ? ಸಾಕು ; ಸುಮ್ಮನಿರಿ. ( ಎಲ್ಲರೂ ನಡೆಯುವರು. )

**ಶಕುಂತಳೆ:—** ಎಲೈ ತಂದೆಯೆ, ಪರ್ಣಶಾಲೆಯ ಬಳಿ ತಿರುಗುವ ಪೂರ್ಣ ಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖಪ್ರಸವವಾಗುವದೋ ಆಗ ನನಗೆ ಕುಶಲ ಪತ್ರಿಕೆಯನ್ನು ಕಳುಹಿಸಬೇಕು.

**ಕಣ್ವ:—** ಆಗಲಿ ; ಇದನ್ನು ಮರೆಯದಿರುವೆವು.

**ಶಕುಂತಳೆ:—** (ಗಮನಭಂಗವನ್ನು ಅಭಿನಯಿಸಿ) ಇದು ಯಾವದು? ಮರಳಿ ಮರಳಿ ನನ್ನ ಸೀರೆಯ ಸೆರಗನ್ನು ಹಿಡಿದು ಸೆಳೆಯುವದು ? (ಎಂದು ಹಿಂತಿರುಗುವಳು) ಎಲೆವತ್ಸಾ, ಸಹವಾಸವನ್ನು ಬಿಟ್ಟುಹೋಗುವ ನನ್ನನ್ನು ಏತಕ್ಕೆ ಅನುಸರಿಸುವೆ? ಹುಟ್ಟಿದ ಕೂಡಲೆ ತಾಯನಗಲಿದ ನಿನ್ನನ್ನು ಬೆಳೆಸಿದೆನು ; ಈಗಲೂ ನನ್ನನ್ನು ಅಗಲಿದ ನಿನ್ನ ಪೋಷಣೆಯ ವಿಷಯದಲ್ಲಿ ತಂದೆಗಳು ಚಿಂತಿಸುವರು ; ಇನ್ನು ಹಿಂತಿರುಗಿ ಹೋಗು. (ಎಂದು ರೋದಿಸುತ್ತ ಹೋಗುವಳು.)

**ಶಾರ್ಙ್ಗರವ:—** ಪೂಜ್ಯರೆ, ಬಂಧುಜನಗಳು ಜಲಾಶಯದ ವರೆಗೆ ಸಂಗಡ ಬರತಕ್ಕುದೆಂಬುದು ಸಂಪ್ರದಾಯವಲ್ಲವೆ? ಆದುದರಿಂದ ಇದೋ, ಸರೋವರದ ತೀರವು. ಇಲ್ಲಿ ನಮಗೆ ಆಜ್ಞಾಪಿಸುವದನ್ನು ಆಜ್ಞಾಪಿಸಿ ಹಿಂದಕ್ಕೆ ದಯಮಾಡಿಸಬೇಕು.

**ಕಣ್ವ:—** ಆದರೆ ಈ ಕ್ಷೀರವೃಕ್ಷದ ನೆರಳಲ್ಲಿ ಕುಳಿತುಕೊಳ್ಳೋಣ ಬನ್ನಿ.

(ಎಲ್ಲರೂ ಬಂದು ಕುಳಿತುಕೊಳ್ಳುವರು.)

**ಕಣ್ವ:—** (ತಮ್ಮಲ್ಲಿ ತಾವು) ಪೂಜ್ಯನಾದ ಆ ದುಷ್ಯಂತನ ಯೋಗ್ಯತಾನುಸಾರವಾಗಿ ಏನು ಹೇಳಿ ಕಳುಹಿಸೋಣ ? (ಎಂದು ಚಿಂತಿಸುವರು.)

**ಶಕುಂತಳೆ:—** (ಮರೆಯಲ್ಲಿ) ಎಲೆ ಅನಸೂಯೆ, ಇದೋ ನೋಡು ; ತಾವರೆಯಲ್ಲಿ ಮರೆಯಾದ ಮಾತ್ರಕ್ಕೆ ತನ್ನ ಸಹಚರನನ್ನು ಕಾಣದೆ ಈ ಚಕ್ರವಾಕ ಸ್ತ್ರೀಯು ಕಳವಳಗೊಂಡು ಎಷ್ಟು ಕೂಗಿಕೊಳ್ಳುವದು ! ನಾನಲ್ಲವೆ ಅತಿ ದುಷ್ಕರವಾದುದನ್ನು ಮಾಡುವಳು ?

**ಕಣ್ವ:—** ಎಲೈ ಶಾರ್ಙ್ಗರವನೆ, ಶಕುಂತಳೆಯ ಇದಿರಿನಲ್ಲಿ ಆ ರಾಜನನ್ನು ಕುರಿತು, ನಾನು ಹೇಳಿದೆನೆಂದು ಹೇಳತಕ್ಕುದು.

**ಶಾರ್ಙ್ಗರವ :—** ಪೂಜ್ಯರೇ, ಆಜ್ಞಾಪಿಸಬೇಕು.

**ಕಣ್ವ :—**

ಪಿರಿದುಂ ಚಿಂತಿಸಿ ಸಂಯಮೀಾರ್ಥರೆನಿಪೆಮ್ಮಂ ಮೇಣ್ಭವದ್ವಂಶದೆ-
ಳ್ತುರಮಂ ನಿನ್ನೊಳಗೀಕೆ ತಾನೆಯೊಲವೆತ್ತಾಪಾಂಗುಮಂ ಪೆಂಡಿರೊಳ್
ಸರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಮಿನ್ನಿಂತರಿಂ
ಪೆರತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ವಧೂಬಂಧುಗಳ್ ||

**ಶಾರ್ಙ್ಗರವ :—** ಅಪ್ಪಣೆಯಾದುದನ್ನು ಗ್ರಹಿಸಿದೆನು.

**ಕಣ್ವ :—** ವತ್ಸೆ, ಈಗ ನಿನಗೆ ಬುದ್ಧಿವಾದವನ್ನು ಹೇಳಬೇಕಾಗಿರುವದು ಕೇಳು; ನಾವು ವನವಾಸಿಗಳಾದರೂ ಲೋಕತಂತ್ರವನ್ನೆಲ್ಲಾ ಬಲ್ಲೆವು.

**ಶಾರ್ಙ್ಗರವ :—** ಬುದ್ಧಿಶಾಲಿಗಳಿಗೆ ಯಾವದು ತಾನೆ ಅಗೋಚರವಾಗಿ ಇದ್ದೀತು ?

**ಕಣ್ವ :—** ಎಲೆ ಮಗಳೆ, ಇನ್ನು ನೀನು ಗಂಡನ ಮನೆಯನ್ನು ಸೇರಿ,

ಪಿರಿಯರ ಸೇವೆಗೆಯ್ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ-
ದಿರು, ಪತಿಯೊರ್ಮೆ ಹೇವಗೊಳಿಸಲ್ಮುಳಿಸಿಂ ಪ್ರತಿಕೂಲೆಯಾಗದಿರ್,
ಪರಿಜನಮಂ ಕರಂ ಸಲಹು, ಭಾಗ್ಯದೆ ಬಾಗಿರು, ಪೆಣ್ಗಳಿಂತಿರ-
ಲ್ಗರತಿಯರಪ್ಪರಿಂತಿರದರನ್ವಯಕಾಧಿಯನುಂಟು ಮಾಳ್ಪರೌ ||

**ಗೌತಮಿ :—** ವಧೂಜನಕ್ಕೆ ಹೇಳತಕ್ಕ ಉಪದೇಶವು ಇಷ್ಟು ತಾನೆ; ಇದರ ಮೇಲೇನಿರುವದು ? ಎಲೆ ವತ್ಸೆ, ಇದನ್ನೆಲ್ಲಾ ಗ್ರಹಿಸಿಕೊಂಡಿರು, ಕಂಡೆಯಾ ?

**ಕಣ್ವ :—** ಎಲೆ ವತ್ಸೆ, ನನ್ನನ್ನೂ ನಿನ್ನ ಸಖೀಜನರನೂ ಆಲಿಂಗಿಸು.

**ಶಕುಂತಳೆ :—** ತಂದೆಯೆ, ಪ್ರಿಯಂವದೆ ಮೊದಲಾದ ಸಖಿಯರು ಇಲ್ಲಿಂದಲೇ ಹಿಂದಿರುಗುವರೆ ?

**ಕಣ್ವ**:— ಎಲೆ ಮಗಳೆ, ಇವರು ಮದುವೆಯಾಗತಕ್ಕವರು. ಆದುದರಿಂದ ಇವರು ಅಲ್ಲಿಗೆ ಬರುವದು ಯುಕ್ತವಲ್ಲ; ನಿನ್ನೊಡನೆ ಗೌತಮಿ ಬರುವಳು.

**ಶಕುಂತಳೆ**:— (ತಂದೆಯನ್ನು ಆಲಿಂಗಿಸಿಕೊಂಡು) ಈಗ ತಂದೆಯ ತೊಡೆಯನ್ನು ಬಿಟ್ಟು ಮಲಯಪರ್ವತದ ತಟದಿಂದ ಕಿತ್ತುಹಾಕಿದ ಚಂದನಲತೆಯಂತೆ ದೇಶಾಂತರದಲ್ಲಿ ನಾನೆಂತು ಜೀವವನ್ನು ಧರಿಸುವೆನು?

**ಕಣ್ವ**:— ಎಲೆ ಮಗಳೆ, ಹೀಗೇತಕ್ಕೆ ಕಳವಳಪಡುವೆ?

ಕುವರಿ, ಕುಲೀನನಾದ ಪತಿಗೊಪ್ಪುವ ಪಟ್ಟದ ರಾಣಿಯಾಗಿ ವೈ-
ಭವಗಳಿನೇಳ್ಗೆವೆತ್ತಿನನ ಕೃತ್ಯದೊಳಾಕುಲೆಯಾಗುತಾವಗಂ ||
ರವಿಯನಮರ್ತ್ಯನಾಥದಿಶೆ ತಾಂ ಪಡೆವಂತೆ ಸುಗಾತ್ರಪುತ್ರನಂ
ತವಕದೆ ಪೆತ್ತು ನೀನೆಣಿಸದಿರ್ಪೆ ಮದೀಯವಿಯೋಗದುಃಖಮಂ ||

(ಶಕುಂತಳೆಯು ತಂದೆಯ ಪಾದಗಳಿಗೆ ನಮಸ್ಕರಿಸುವಳು.)

**ಕಣ್ವ**:— ನಿನ್ನ ಕೋರಿಕೆ ಸಿದ್ಧಿಸಲಿ.

**ಶಕುಂತಳೆ**:— (ಸಖಿಯರ ಸಮೀಪಕ್ಕೆ ಬಂದು) ಎಲೌ ಸಖಿಯರೆ, ನೀವಿಬ್ಬರೂ ನನ್ನನ್ನು ಸಮವಾಗಿ ಆಲಿಂಗಿಸಿರಿ. (ಆಶ್ರಮಕ್ಕೆ ಇದಿರಾಗಿ ನಿಂತು) ತಂದೆಯೆ, ತಪೋವನವನ್ನು ಇನ್ನು ಯಾವಾಗ ನೋಡುವೆನು?

**ಕಣ್ವ**:— ಕೇಳು,

ಕ್ಷಿತಿಸತಿಗೆ ಸವತಿಯಾಗ-
ಪ್ರತಿರಥನಂ ಸುತನ ಪೆತ್ತು ಸುತೆ ನೀಂ ತನಯಾ- ||
ರ್ಪಿತರಾಜ್ಯನಪ್ಪ ನಿನ್ನಯ
ಪತಿಯೊಡನೀಕ್ಷಿಸುವೆ ಮಗುಳ್ದು ಮಿಾಯಾಶ್ರಮವಂ ||

**ಶಕುಂತಳೆ**:— (ತಂದೆಯನ್ನು ಮತ್ತೂ ಆಲಿಂಗಿಸಿಕೊಂಡು) ಮೊದಲೇ ತಪಶ್ಚರ್ಯೆಯಿಂದ ಪೀಡಿತವಾದ ತಂದೆಯ ಶರೀರವು ಮತ್ತೂ ನನಗೋಸುಗ ಬಹಳವಾಗಿ ಕಳವಳಪಡುವದು.

(ಶಕುಂತಳೆಯೂ ಸಂಗಡ ಹೋಗತಕ್ಕವರೂ ಹೊರಡುವರು.)

**ಸಖಿಯರು :—** ( ಶಕುಂತಳೆಯನ್ನು ನೋಡಿ ) ಹಾ ! ಹಾ ! ನಮ್ಮ ಪ್ರಿಯ ಸಖಿಯಾದ ಶಕುಂತಳೆಯು ವನಪಂಕ್ತಿಯಿಂದ ಮರೆಯಾದಳಲ್ಲಾ !

**ಕಣ್ವ:—** ( ನಿಟ್ಟುಸಿರನ್ನು ಬಿಟ್ಟು ) ಎಲೆ ಅನಸೂಯೆ, ನಿಮ್ಮ ಒಡನಾಡಿಯಾದ ಶಕುಂತಳೆಯು ಹೊರಟುಹೋದಳು ; ಶೋಕವನ್ನು ತಡೆದು ನನ್ನೊಡನೆ ಬನ್ನಿ, ಹೋಗೋಣ.

**ಇಬ್ಬರು ಸಖಿಯರೂ :—** ತಂದೆಯೆ, ಶಕುಂತಳೆಯು ಇಲ್ಲ-ದುದರಿಂದ ಶೂನ್ಯವಾದಂತಿರುವ ತಪೋವನವನ್ನು ಹೇಗೆ ಹೊಗುವೆವು ?

**ಕಣ್ವ :—** ಸ್ನೇಹವು ಹೀಗೆ ತೋರ್ಪಡಿಸುವದು. ( ವಿಚಾರಯುಕ್ತ-ರಾಗಿ ಸ್ವಲ್ಪ ತಡೆದು ) ಆಹ ! ಶಕುಂತಳೆಯನ್ನು ಪತಿಗೃಹಕ್ಕೆ ಕಳುಹಿಸಿ ಈಗ ನೆಮ್ಮದಿಯನ್ನು ಪಡೆದೆನು.

ಕನ್ನೆ ಪೆರನೊಡವೆ ಗಡ ಪತಿ-
ಸನ್ನಿಧಿಗಿಂದವಳ ಕಳುಹಿ ನಿರ್ಮಲವಾದ- ||
ತ್ತೆನ್ನಯ ಮಾನಸಮಾದಂ
ತನ್ನಯ ಬಳಿಯಿಟ್ಟೊಡವೆಯ ಮಗುಳಿತ್ತನವೊಲ್ ||

( ಇಂತೆಲ್ಲರೂ ಹೊರಟುಹೋಗುವರು )

—ಬಸವಪ್ಪ ಶಾಸ್ತ್ರಿ.

**೧. ಶಕುಂತಳೆಯು ತಪೋವನವಾಸಿಗಳನ್ನು ತನ್ನ ಕುಟುಂಬ-ದವರನ್ನಾಗಿ ಮಾಡಿಕೊಂಡಿದ್ದಳೆಂಬದನ್ನು ಕವಿಯು ಯಾವ ಮಾತುಗಳಿಂದ ಸೂಚಿಸಿರುವನು ? ೨. ಕಣ್ವರು ದುಷ್ಯಂತನಿಗೂ ಶಕುಂತಳೆಗೂ ಮಾಡಿದ ಉಪದೇಶವನ್ನು ನಿಮ್ಮ ಮಾತುಗಳಲ್ಲಿ ವಿಸ್ತರಿಸಿ ಬರೆಯಿರಿ. ೩. ಪರ್ಣಶಾಲೆ, ಕುಶಲಪತ್ರಿಕೆ, ಜಲಾಶಯ, ವನಜ್ಯೋತ್ಸ್ನೆ, ಪ್ರಿಯಂವದೆ, ಅನಸೂಯೆ, ಸಹವಾಸ ಈ ಶಬ್ದಗಳ ಅರ್ಥವನ್ನು ಬಿಡಿಸಿ ಹೇಳಿರಿ. ೪. ಸತಿಯರ ಧರ್ಮವನ್ನು ಕುರಿತು ಒಂದು ವಾಕ್ಯವೃಂದವನ್ನು ಬರೆಯಿರಿ.**

---

# ೩೪. ಪಂಪಕವಿ

ಕನ್ನಡದಲ್ಲಿ ಕಾವ್ಯರಚನೆ ಎಂದಿನಿಂದ ಮೊದಲಾಯಿತೆಂದು ನಿರ್ದಿಷ್ಟವಾಗಿ ಹೇಳಲಿಕ್ಕೆ ಬರುವಂತಿಲ್ಲ. ಆದರೂ ಎಂಟನೆಯ ಶತಮಾನದ ಹಿಂದೆಯೇ ಆಗಿರಲಿಕ್ಕೆ ಬೇಕೆಂದು ಆಧಾರಸಹಿತವಾಗಿ ಹೇಳ-



ಬಹುದು. ಈವರೆಗೆ ಉಪಲಬ್ಧವಾದ ಕನ್ನಡ ಗ್ರಂಥಗಳಲ್ಲಿ ರಾಷ್ಟ್ರಕೂಟ ವಂಶದ ದೊರೆಯಾದ ನೃಪತುಂಗನ 'ಕವಿರಾಜಮಾರ್ಗ'ವೇ ಮೊದಲನೆಯದು. ಅದಕ್ಕಿಂತ ಪೂರ್ವದಲ್ಲಿ ರಚಿತವಾದ ಗದ್ಯಪದ್ಯ ಗ್ರಂಥಗಳು ನಮ್ಮ ಕಣ್ಣು ತಪ್ಪಿಸಿಕೊಂಡಿವೆ. ಕವಿರಾಜಮಾರ್ಗವು ಕಾವ್ಯವಲ್ಲ;

ಅದೊಂದು ಲಕ್ಷಣಗ್ರಂಥವು. ಈವರೆಗೆ ದೊರೆತ ಕನ್ನಡ ಕಾವ್ಯಗಳಲ್ಲಿ ಎಲ್ಲಕ್ಕೂ ಪುರಾತನ ಕಾವ್ಯಗಳೆಂದರೆ ಪಂಪಕವಿಯ ಪಂಪಭಾರತವೆಂದು ಹೆಸರುಗೊಂಡ 'ವಿಕ್ರಮಾರ್ಜುನ ವಿಜಯ'ವೂ 'ಆದಿಪುರಾಣ'ವೂ. ಆದುದರಿಂದ ಪಂಪನೇ ಕನ್ನಡಿಗರ ಆದಿಕವಿಯೆಂದು ಹೇಳುತ್ತಾರೆ.

ನಮ್ಮ ನಾಡಿನ ಆದಿಕವಿಯೆನಿಸಿದ ಪಂಪನ ಪರಿಚಯವನ್ನು ನಾವು ಮಾಡಿಕೊಳ್ಳಬೇಕಲ್ಲವೇ ? ಆತನು ಜೀವಿಸಿದುದು ಹತ್ತನೆಯ ಶತಮಾನದ ಉತ್ತರಾರ್ಧದಲ್ಲಿ. ಕರ್ನಾಟಕವು ಆಗ ನಮ್ಮ ನಾಡಿನ ಅರಸರ ಆಳಿಕೆಯಲ್ಲಿ ನಲಿದಾಡುತ್ತಿತ್ತು. ಆಗ ಚಾಲುಕ್ಯವಂಶದ ದೊರೆಗಳು ಕರ್ನಾಟಕದ ಸಿಂಹಾಸನವನ್ನು ಅಲಂಕರಿಸಿದ್ದರು. ಆ ವಂಶದ ಪ್ರಬಲಪ್ರತಾಪನಾದ ಅರಿಕೇಸರಿ ಎಂಬ ದೊರೆ ಪಂಪನ ಪೆಂಪಿಗೆ ಮೆಚ್ಚಿ ಅವನ ಕವಿತಾಶಕ್ತಿಗೆ ಮನಸೋತು ಆತನನ್ನು ಕರೆಯಿಸಿಕೊಂಡು ಆಸ್ಥಾನದ ಕವಿಯನ್ನಾಗಿ ಮಾಡಿಕೊಂಡು ಗೌರವಿಸಿ ತನ್ನ ಆಶ್ರಯದಲ್ಲಿಟ್ಟುಕೊಂಡನು. ಕರ್ನಾಟಕಕ್ಕೆ ಹೊಂದಿದ ವೆಂಗಿಮಂಡಲದಲ್ಲಿ ವಾಸಿಸುತ್ತಿದ್ದ ಪಂಪನು ಕನ್ನಡ ನಾಡಿನ ಸೊಗಸಿಗೆ ಮೆಚ್ಚಿ ಇದನ್ನೇ ತನ್ನ ತಾಯ್ನಾಡನ್ನಾಗಿ ತಿಳಿದುಕೊಂಡು ನಲುಮೆಯಿಂದ ವಾಸಿಸತೊಡಗಿದನು.

ಪಂಪನ ಪೂರ್ವಜರು ವೈದಿಕಧರ್ಮದವರು. ಆದರೆ ಅವನ ತಂದೆ ಆಗಿನ ಕಾಲದಲ್ಲಿ ಏರಿಕೆಯಲ್ಲಿದ್ದ ಜೈನಧರ್ಮವನ್ನು ಸ್ವೀಕರಿಸಿದ್ದನು. ಈ ಸಂದರ್ಭದಲ್ಲಿ ಗಮನಿಸಬೇಕಾದ ಒಂದು ಮಾತು ಉಂಟು. ಅದೇನೆಂದರೆ, ವೈದಿಕಧರ್ಮಾನುಯಾಯಿಯಾದ ಚಾಲುಕ್ಯ ರಾಜನು ಜೈನಕವಿಯನ್ನು ಆಸ್ಥಾನಕವಿಯನ್ನಾಗಿ ಮಾಡಿಕೊಂಡು ಗೌರವಿಸಿದುದು ಆ ಕಾಲದ ಅರಸರ ಪರಧರ್ಮಸಹಿಷ್ಣುತೆಯನ್ನೂ ವಿದ್ಯಾಪಕ್ಷಪಾತವನ್ನೂ ವ್ಯಕ್ತಗೊಳಿಸುತ್ತದೆ.

ವೆಂಗಿಮಂಡಲದಲ್ಲಿ ಹುಟ್ಟಿ, ಕನ್ನಡನಾಡಿನ ರಾಜಧಾನಿಯಲ್ಲಿ ಆಶ್ರಯವನ್ನು ಪಡೆದ ಪಂಪನು ಬನವಾಸಿಯಲ್ಲಿ ತನ್ನ ಬಾಲ್ಯವನ್ನೂ ನೂತನ ತಾರುಣ್ಯವನ್ನೂ ಕಳೆದಿರಲಿಕ್ಕೆಬೇಕೆಂದು ಊಹಿಸುವುದಕ್ಕೆ ಕಾರಣವುಂಟು. ವಿಕ್ರಮಾರ್ಜುನ ವಿಜಯದಲ್ಲಿ ಬಂದ ಬನವಾಸಿಯ

ಮೇಲಿನ ಕವಿಯ ಅನುರಾಗದ ವರ್ಣನೆಯನ್ನು ಓದಿದವರಿಗೆ ಈ ಮಾತು ಹೊಳೆಯದಿರದು. ಬನವಾಸಿ ದೇಶದ ಸೃಷ್ಟಿಸೌಂದರ್ಯವು ನಮ್ಮ ಕವಿಯ ಮನಸ್ಸನ್ನು ಸೂರೆಗೊಂಡಿತ್ತು. ಆದುದರಿಂದಲೇ ಬನವಾಸಿಯ ಮಾತು ಬಂದಾಗ ಪಂಪನ ರಸಿಕ ಹೃದಯವು ವೀಣೆಯಂತೆ ಮಿಡಿಯುತ್ತಿತ್ತು.

**" ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ "**

[ ಯಾರು ಅಂಕುಶದಿಂದ ಚುಚ್ಚಿದರೂ ನನ್ನ ಮನಸ್ಸು ಬನವಾಸಿ ದೇಶವನ್ನು ನೆನೆಯುವುದು. ]

ಎಂದು ಮೊದಲಾಗಿ ಅವನು ಹಾಡಿದ ಆವೇಶದ ಭಾವಗೀತೆಯಲ್ಲಿ ಆತನಲ್ಲಿದ್ದ ಬನವಾಸಿದೇಶದ ಪ್ರೇಮವು ಸ್ಫುಟವಾಗಿ ಕಾಣಬರುತ್ತಿದೆ.

ನಮ್ಮ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ತಾವಾಗಿಯೇ ತಮ್ಮ ಪರಿಚಯವನ್ನು ಸಾಕಷ್ಟು ಮಾಡಿಕೊಡುವ ಸಂಪ್ರದಾಯ-ವನ್ನಿಟ್ಟುಕೊಂಡಿಲ್ಲ. ಬಹಳವಾದರೆ ತಮ್ಮ ಸ್ಥಳ, ತಾವು ಬರೆದ ಗ್ರಂಥ-ಗಳು, ತಮ್ಮ ಬಿರುದುಗಳು ಇವುಗಳನ್ನು ಸಂಕ್ಷೇಪವಾಗಿ ಹೇಳುತ್ತಾರೆ, ಅಷ್ಟೆ. ಆದರೆ ಪಂಪಮಹಾಕವಿಯ ವಿಷಯದಲ್ಲಿ ನಾವು ಪುಣ್ಯವಂತ-ರೆಂದೇ ಹೇಳಬಹುದಾಗಿದೆ. ಏಕೆಂದರೆ, ಅವನು ತನ್ನ ಕಾವ್ಯಗಳಲ್ಲಿ ತನ್ನ ಧರ್ಮ, ಕಾಲ, ಸ್ಥಳ, ಬಿರುದು, ಸ್ವರೂಪ ಇವುಗಳನ್ನು ತಕ್ಕ-ಮಟ್ಟಿಗೆ ತಿಳಿಯಪಡಿಸಿದ್ದಾನೆ. ಅವನು ತನ್ನ ಕಾವ್ಯಗಳಲ್ಲಿ ಹೇಳಿದ ಮಾತುಗಳಿಂದಲೇ ನಾವು ಅವನ ಸಂಕ್ಷಿಪ್ತ ಚರಿತ್ರೆಯನ್ನು ಕಟ್ಟಲಿಕ್ಕೆ ಬರುವಂತಿದೆ. ಪಂಪನು ಒಂದು ಪದ್ಯದಲ್ಲಿ ತನ್ನ ಸ್ವರೂಪದ ಚಿತ್ರವನ್ನು ಈ ಮೇರೆಗೆ ಬಣ್ಣಿಸಿದ್ದಾನೆ.

**" ಕದಳೀಗರ್ಭಶ್ಯಾಮಂ,**
**ಮೃದುಕುಟಿಲ ಶಿರೋರುಹಂ, ಸರೋರುಹವದನಂ, ||**
**ಮೃದುಮಧ್ಯಮ ತನು, ಹಿತಮಿತ**
**ಮೃದುವಚನಂ, ಲಲಿತಮಧುರ ಸುಂದರ ವೇಷಂ " ||**

ಇದರಿಂದ ಪಂಪನು ಒಳ್ಳೆಯ ಬಣ್ಣದವನೆಂದೂ ಸುಂದರಾಕಾರನೆಂದೂ ಮೃದು ಮಧುರ ಭಾಷಿಯೆಂದೂ ಸುಂದರ ವೇಷಭೂಷಿತನೆಂದೂ ತಿಳಿ-

ಯುತ್ತದೆ. ಅವನು ಕೇವಲ ಕವಿಯಷ್ಟೇ ಅಲ್ಲ, ಚಾಲುಕ್ಯ ರಾಜ್ಯದಲ್ಲಿ ಅವನಿಗೆ ಸೇನಾಪತಿಯ ಸ್ಥಾನವೂ ದೊರೆತಿದ್ದಿತು. ಅವನು ಕವಿ ಹೇಗೋ ಹಾಗೆ ಕಲಿಯೂ ಅಹುದು. ಪಂಪಭಾರತದಲ್ಲಿ ಪಡಿಮೂಡಿದ ಕ್ಷಾತ್ರ ತೇಜಸ್ಸು ಪಂಪನದೇ. ತಾನು ಕವಿತಾಗುಣಾರ್ಣವನೆಂದು ಹೇಳಿ-ಕೊಂಡು ತನ್ನ ಪ್ರತಿಭಾತೇಜಸ್ಸನ್ನು ವ್ಯಕ್ತಪಡಿಸಿದ್ದಾನೆ ಪಂಪ.

ಪಂಪನ ಕವಿತಾಸಾಮರ್ಥ್ಯವನ್ನು ಬಣ್ಣಿಸುವುದೆಂದರೆ ಸಣ್ಣ-ಬಾಯಿಂದ ದೊಡ್ಡ ತುತ್ತನ್ನು ನುಂಗಲು ಹವಣಿಸಿದಂತೆ. ಅವನು ಬರೆದ ಗ್ರಂಥಗಳೆರಡು: ಒಂದು 'ಆದಿ ಪುರಾಣ', ಇನ್ನೊಂದು 'ವಿಕ್ರಮಾರ್ಜುನ ವಿಜಯ' ಇಲ್ಲವೆ 'ಪಂಪಭಾರತ'. ಎರಡೂ ದೊಡ್ಡ ಗ್ರಂಥಗಳು; ಸರಸಕಾವ್ಯಗಳು. ಮೊದಲನೆಯದು ಜೈನಧರ್ಮದ ಪುರಾಣ; ಅದರಲ್ಲಿ ಜೈನರ ಆದಿತೀರ್ಥಂಕರನಾದ ವೃಷಭದೇವನ ಚರಿತ್ರೆಯಿದೆ; ಅದು ಪುರಾಣವಾದುದರಿಂದ ಅದರಲ್ಲಿ ಧರ್ಮ ವಿಚಾರಗಳು ಸೇರಿರುವುವು. ಆದರೂ ಬೇಸರು ಬಾರದಂತೆ ಕಾವ್ಯಸರಣಿಯಲ್ಲಿ ವಿಷಯವನ್ನು ಹೇಳುವ ಪಂಪನ ಅದ್ಭುತಶಕ್ತಿಯಿಂದ ಅದು ಪುರಾಣವಾದರೂ ಸರಸಕಾವ್ಯ-ವಾಗಿದೆ. ಆತನ ಇನ್ನೊಂದು ಗ್ರಂಥ ವಿಕ್ರಮಾರ್ಜುನ ವಿಜಯ; ಇದರಲ್ಲಿ ಅರ್ಜುನನ ವಿಕ್ರಮದ ವರ್ಣನೆಯನ್ನೇ ಮುಖ್ಯವಾಗಿ ಇಟ್ಟುಕೊಂಡ ಮಹಾಭಾರತದ ಕಥೆ ಇದ್ದು ಪಂಪಕೃತವಾದುದರಿಂದ ಇದಕ್ಕೆ ಪಂಪ-ಭಾರತವೆಂದು ಹೇಳುವುದೇ ವಾಡಿಕೆಯಾಗಿದೆ. ಅಪಾರವಾದ ಮಹಾ-ಭಾರತ ಕಥೆಯನ್ನು ಪ್ರಮಾಣಾನುರೂಪವಾಗಿ ತಕ್ಕ ರೀತಿಯಲ್ಲಿ ಸಂಗ್ರ-ಹಿಸಿ ಹೇಳಿದುದರಲ್ಲಿ ಪಂಪನ ಕೌಶಲವನ್ನು ಕಾಣಬಹುದು. ಬೇಸರದ ಉಪಾಖ್ಯಾನಗಳನ್ನು ಹಾರಿಸಿ ಮೂಲಕಥೆಯ ಓಟಕ್ಕೆ ತಡೆ ಬಾರದಂತೆ ಹವಣಿಸಿರುವನು. ಪಂಪನ ವರ್ಣನೆಗಳು ಎಲ್ಲಿಯೂ ಅಳತೆ ತಪ್ಪಿ ನೀಳ-ವಾಗಿಲ್ಲ. ದುರ್ಯೋಧನ, ಕರ್ಣ, ಭೀಷ್ಮ ಮುಂತಾದ ಭಾರತ ಪ್ರಧಾನ ಪುರುಷರ ವ್ಯಕ್ತಿಚಿತ್ರಗಳನ್ನು ಮೂಡಿಸುವಲ್ಲಿ ಆತನು ಸಿದ್ಧಹಸ್ತ. ಕರ್ಣನ ಗರುವಿಕೆ, ಧರ್ಮರಾಜನ ಸಾತ್ವಿಕತೆ, ಅರ್ಜುನನ ಶೌರ್ಯ, ಭೀಮ-ಸೇನನ ರೌದ್ರಾವೇಶ ಇವನ್ನೆಲ್ಲ ಆತನ ಕಾವ್ಯದಲ್ಲಿ ಓದಿದವರು ಮೆಚ್ಚುವರು, ತಲೆದೂಗುವರು, ಉಬ್ಬುವರು, ರೋಮಾಂಚಿತರಾಗುವರು;

ಹೆಚ್ಚೇನು? ಈ ಮಹಾಕವಿಯ ಕಾವ್ಯದ ಸರಸತೆಯನ್ನು ಅನುಭವಿಸಿ ಸಹೃದಯರು ನಲಿದಾಡುವರು; ಇದರ ಮೇಲೆ ಈ ಕವಿಪುಂಗವನು ಆದಿಪುರಾಣವನ್ನು ಮೂರು ತಿಂಗಳಲ್ಲಿಯೂ ವಿಕ್ರಮಾರ್ಜುನ ವಿಜಯ-ವನ್ನು ಆರು ತಿಂಗಳಲ್ಲಿಯೂ ರಚಿಸಿದನಂತೆ, ಎಂಬುದನ್ನು ಕೇಳಿ ಬೆರಗು-ಬಡುವರು.

ಕನ್ನಡ ನಾಡಿಗೆ ಪಂಪನು ಮಾಡಿದ ಇನ್ನೊಂದು ಉಪಕಾರವನ್ನು ನಾವು ಗಮನಿಸಬೇಕಾದುದು ಆವಶ್ಯಕ. ತಾನು ಜೈನಕವಿ, ಜೈನ ಧರ್ಮದ ಪುರಾಣಗಳನ್ನು ಮಾತ್ರ ಬರೆದು ತಾನು ಕೃತಕೃತ್ಯನಾದೆನೆಂದು ಆತನು ತಿಳಿದುಕೊಳ್ಳಬಹುದಾಗಿತ್ತು. ಆದರೆ ಕನ್ನಡ ನಾಡಿನ ಜನ-ಸಾಮಾನ್ಯಕ್ಕೂ ಉಪಯೋಗವಾಗುವಂಥ ವಿಕ್ರಮಾರ್ಜುನ ವಿಜಯದಂಥ ಒಂದು ಮಹಾಕಾವ್ಯವನ್ನು ರಚಿಸಿದುದು ಆತನ ಉದಾರಹೃದಯವನ್ನು ಸೂಚಿಸುತ್ತದೆ. ಆ ಕಾವ್ಯವನ್ನು ಓದಿದರೆ ಇದು ಜೈನ ಕವಿ ಕೃತಿ ಎಂಬ ವೈಶಿಷ್ಟ್ಯಗಳು ಆ ಕಾವ್ಯದಲ್ಲಿ ಕಾಣದಿರುವುದು ಆತನ ಧರ್ಮಸಮತಾ-ಬುದ್ಧಿಯನ್ನು ತೋರ್ಪಡಿಸುತ್ತದೆ. ಪಂಪನ ಈ ಸಮತೋಲಬುದ್ಧಿಯ ರಚನೆಯು ಮುಂದಿನ ಕವಿಗಳಿಗೂ ಆದರ್ಶವಾಯಿತು. ಪಂಪನ ತರು-ವಾಯದ ಹಲವು ಜನ ಜೈನಕವಿಗಳು ಜೈನಪುರಾಣಗಳನ್ನಲ್ಲದೆ ಜನ-ಸಾಮಾನ್ಯಕ್ಕಾಗಿ ಕಾವ್ಯಗಳನ್ನೂ ರಚಿಸುತ್ತ ಬಂದರು. ಇವೆಲ್ಲ ಕಾರಣ-ಗಳಿಂದ ಇಡಿಯ ಕನ್ನಡ ಕಾವ್ಯಸಾಮ್ರಾಜ್ಯದಲ್ಲಿ ಪಂಪನ ಸ್ಥಾನವು ಬಹಳ ಮೇಲುಮಟ್ಟದಲ್ಲಿ ನಿಂತಿದೆ. ಕನ್ನಡದ ಆದಿಕವಿಯೂ ಮಹಾಕವಿಯೂ ಎಂದು ನಾವೆಲ್ಲ ಹೆಮ್ಮೆಪಡುವಂತಾಗಿದೆ.

—ಡಿ ಎಸ್. ಕರ್ಕಿ.

**೧. ಪಂಪನ ಚರಿತ್ರೆಯ ವಿಷಯವಾಗಿ ಅವನ ಕಾವ್ಯಗಳಿಂದ ಯಾವ ಸಂಗತಿಗಳು ತಿಳಿಯುತ್ತವೆ? ೨. ಪಂಪನನ್ನು ಆದಿಕವಿಯೆಂದೇಕೆ ಕರೆಯುವರು? ೩. ಪಂಪನು ಬರೆದ ಕಾವ್ಯಗಳ ಹೆಸರು ಹೇಳಿ, ಅವನ ಕಾವ್ಯಗುಣಗಳನ್ನು ಸಂಕ್ಷೇಪವಾಗಿ ವಿವರಿಸಿರಿ. ೪. ಪಂಪನು ಯಾರಿಂದ ಯಾವ ಮನ್ನಣೆ ಪಡೆದನು? ಎಲ್ಲಿ ತನ್ನ ಆಯುಷ್ಯದ ಬಹುಭಾಗವನ್ನು ಕಳೆದನು?**

# ೩೫. ಕವಿಯು ಸೌಂದರ್ಯ ಪ್ರಕಟನ ಶಕ್ತಿ

**[ ಸೌಂದರ್ಯವು ಮನಸ್ಸನ್ನು ಉಲ್ಲಾಸಗೊಳಿಸುವದು. ಅದು ಎಲ್ಲ ವಸ್ತುಗಳಲ್ಲಿ ಇರಲಾರದು. ಆದರೆ ಎಂಥಲ್ಲಿಯೂ ಸೌಂದರ್ಯವನ್ನು ತೋರಿಸುವ ಶಕ್ತಿಯು ಕವಿಗೆ ಇರುವದು. ಈ ಮಾತನ್ನು ಉದಾಹರಣೆಗಳಿಂದ ಸ್ಪಷ್ಟಮಾಡಿದ ಇದೊಂದು ಉಪನ್ಯಾಸವು. ಲೇಖಕರು ಪ್ರಾಥಮಿಕ ಶಿಕ್ಷಕರಿಗಾಗಿ ಈ ವಿಷಯದ ಬಗ್ಗೆ ಕೊಟ್ಟ ಒಂದು ಉಪನ್ಯಾಸದಿಂದ ಇದನ್ನು ಆರಿಸಿದೆ ]**

ಪಾಶ್ಚಾತ್ಯರಲ್ಲಿ ಒಂದು ಪ್ರವಾದವುಂಟು : ದೇವತೆಗಳು ಒಂದಾನೊಂದು ದಿವಸ ದೇವಲೋಕದೊಳಗಿನ ಎಲ್ಲ ವಸ್ತುಗಳನ್ನು ಮನುಷ್ಯರಿಗೆ ಹಂಚಿದರು. ಎಲ್ಲರೂ ತಮತಮಗೆ ಬೇಕಾದ ವಸ್ತುಗಳನ್ನು ಪಡೆದರು. ಆ ಕಾಲದಲ್ಲಿ ಕವಿ ಧ್ಯಾನಮಗ್ನನಾಗಿ ಎಲ್ಲಿಯೋ ಕುಳಿತಿದ್ದವನು ಹಸುಗೆ ಎಲ್ಲ ಮುಗಿದ ಬಳಿಕ ತವಕದಿಂದ ಅಲ್ಲಿಗೆ ಬಂದನು. ಕವಿಗೆ ಯಾವ ವಸ್ತುವೂ ಉಳಿದಿರಲಿಲ್ಲ. ಆಗ ದೇವತೆಗಳು ಕವಿಗೆ ಸ್ವರ್ಗವನ್ನೇ ನಿನಗೆ ದಯಪಾಲಿಸಿರುವೆವೆಂದು ಹೇಳಿದರಂತೆ. ಈ ಪ್ರವಾದವು ಕವಿಗೆ ಸ್ವರ್ಗಸಾಮ್ರಾಜ್ಯವು ಎಂದರೆ ಸ್ವರ್ಗೀಯ ಆನಂದ, ಸ್ವರ್ಗೀಯ ಸೌಂದರ್ಯಾನುಭವ ಮುಂತಾದವು ದೊರೆತಿರುವವೆಂಬದನ್ನು ಸೂಚಿಸುವದು. ಕವಿ ದೇವತಾನುಗ್ರಹವನ್ನು ಪಡೆದವನೆಂದು ಪೌರ್ವಾತ್ಯರೂ ಹೇಳುವರು.

ಕವಿವಾಣಿಯಲ್ಲಿ ಆನಂದೋತ್ಪಾದನ ಶಕ್ತಿಯಿರುವಂತೆ ಸೌಂದರ್ಯಾವಿಷ್ಕರಣ ಶಕ್ತಿಯೂ ಇರುವದು. ಬ್ರಹ್ಮಸೃಷ್ಟಿ ಸೌಂದರ್ಯದ ಆಗರವಲ್ಲವೇ ? ಆದರೆ ನಮ್ಮೆಲ್ಲರ ಕಣ್ಣು ಆ ಸೌಂದರ್ಯವನ್ನು ಗ್ರಹಿಸಲು ಅಭ್ಯಾಸಗೊಂಡಿರುವದಿಲ್ಲ. ಹಲವರಿಗೆ ಆ ಸೌಂದರ್ಯವು ಕಣ್ಣಿಗೆ ಬೀಳುವ ಪರಿಸ್ಥಿತಿಯೇ ಇರುವದಿಲ್ಲ. ಕೆಲವರಲ್ಲಿ ಆ ಸೌಂದರ್ಯವನ್ನು ಆಸ್ವಾದಿಸುವ ಒಲವು ಇರುವದಿಲ್ಲ. ಉಳಿದವರು ಸಾಂಸಾರಿಕ ಶೋಕತಾಪಾದಿ ಕುತ್ಸಿತ ಭಾವಗಳಿಂದ ಇದಿರಿಗಿದ್ದ ಸೌಂದರ್ಯವನ್ನೂ ನೋಡ-

ದಿರುವರು. ಈ ಎಲ್ಲ ಸಂದರ್ಭಗಳಲ್ಲಿ ಕವಿಯೇ ನಮಗೆ ಸೌಂದರ್ಯ-ಗ್ರಾಹಕವಾದ ಕಣ್ಣು. ಯಾವ ದೃಶ್ಯವನ್ನು ನೋಡಬೇಕು, ಹೇಗೆ ನೋಡಬೇಕು, ಅದರ ಯಾವ ಅಂಗೋಪಾಂಗಗಳನ್ನು ನೋಡಬೇಕು, ಯಾವಾಗ ನೋಡಬೇಕು ಮೊದಲಾದವನ್ನು ಕವಿಯೇ ನಮಗೆ ಸೂಚಿಸುವನು. ನೋಡಲಾರದವರನ್ನು ಕರೆದೊಯ್ದು ತೋರಿಸುವನು. ನಮಗೆ ಒಂದು ಉಪವನವನ್ನು ತೋರಿಸುವದಾದರೆ ಕವಿ ಆ ವನ-ದೊಳಗಿನ ರಮಣೀಯವಾದ ನೋಟಗಳನ್ನೇ ನಮ್ಮ ಇದಿರಿಗೆ ಇಡು-ವನು; ತೆಂಗಿನ ಗಿಡದಲ್ಲಿ ನೋಡಬೇಕಾದದ್ದೇನು, ಬಾಳೆಯ ಗಿಡದ ಯಾವ ಅಂಗವು ದರ್ಶನೀಯವಾದದ್ದು, ಸಂಪಿಗೆಯ ಗಿಡವನ್ನು ಯಾವಾಗ ನೋಡಬೇಕು ಮೊದಲಾದವನ್ನು ಆತನು ಹೇಳುವನು. ಆ ಉಪವನದೊಳಗಿನ ಪುಷ್ಕರಿಣಿ, ಕಾರಂಜಿ, ಲತಾಮಂಟಪ ಮುಂತಾ-ದವುಗಳ ಕಡೆಗೆ ನಮ್ಮನ್ನು ಕರೆದೊಯ್ಯುವನು.

ಕವಿ ಸೌಂದರ್ಯದ ಉತ್ಪಾದಕನು—ಸೌಂದರ್ಯದ ಸೃಷ್ಟಿಕರ್ತನು. ಸೌಂದರ್ಯವಿಲ್ಲದಲ್ಲಿಯೂ ಸೌಂದರ್ಯವನ್ನುಂಟುಮಾಡುವ, ಹೆಚ್ಚಿಸುವ ಶಕ್ತಿ ಆತನಿಗೆ ಸಲ್ಲುವದು. ಚಳಿಗಾಲದಲ್ಲಿ ಪೈರುಗಳೆಲ್ಲ ಮಾಗಿರುವಾಗ ಅರಿಸಿನ ಬಣ್ಣದಿಂದ ಕಂಗೊಳಿಸುವ ಭೂಮಿ ನಮಗೆ ಚೆಂದ ಕಾಣಿಸುವ-ದಾದರೂ ಕವಿ, ಭೂದೇವಿ ಮೈಗೆ ಹರಿದ್ರಾನುಲೇಪನ ಮಾಡಿಕೊಂಡ ಮದುಮಗಳಂತೆ ಕಂಗೊಳಿಸುವಳೆಂದು ಆ ಭೂಮಿಯನ್ನು ವರ್ಣಿಸಿದಾಗ ಅದರ ಸೌಂದರ್ಯವು ನಮಗೆ ಹೆಚ್ಚಾಗಿ ತೋರುವದು.

ಹಲಸಿನ ಹಣ್ಣುಗಳನ್ನು ನಾವು ಹಲವು ಬಾರಿ ನೋಡಿರುವೆವು. ಆದರೆ ಅವನ್ನೇ ಕವಿ ಹೇಗೆ ತೋರಿಸುವನು, ನೋಡಿರಿ—

**ಮಿಸುನಿದಗಡುಗಳ ಮಿಗೆ ಸುರುಳ್ದು ಮೃದುಮಧುರತೆಯ**
**ಒಸೆದಿತ್ತು ಕಂಪೂಡಿಯುದರೊಳಗೆ ನೆರೆಯಮೃತ**
**ರಸಮನೊಯ್ಯನೆ ತೀವಿ ಸಲೆ ಚೈತ್ರನೆಂಬಜಂ ಪೊಸಪಟ್ಟ-**
**ಸಾಲೆಯೊಳಗೆ ||**

**ಮುಸಗದಂತವನಿಡುತವರ ಮೇಲ್ಪಳಸಿನೊಳ್**
**ಪಸುರ್ಮುಗುಳ್ವಚ್ಚಿಗಳ ಮಯನನೃಪಗೆಂದು ಸೇ-**
**ರಿಸಿ ಬಯ್ತ ಬೋನಗುಡಿಕೆಯು ತೆರದೆ ಸಾಲ್ವಿಡಿದ**
**ಪನಸಫಲತತಿ ಮೆರೆದುದು ||**

[—ಬಂಗಾರದ ತಗಡುಗಳನ್ನು ತಕ್ಕಂತೆ ಸುರುಳಿ ಮಾಡಿ ಆ ಪುಟಿಕೆಗಳಿಗೆ ಮಾರ್ದವವನ್ನೂ ಮಾಧುರ್ಯವನ್ನೂ ಉಂಟುಮಾಡಿ ಅವುಗಳಲ್ಲಿ ಸುವಾಸನೆಯನ್ನು ಹುಟ್ಟಿಸಿ, ಆ ಪುಟಿಕೆಗಳಲ್ಲಿ ಅಮೃತವನ್ನು ಸುರಿದು ವಸಂತನೆಂಬ ಬ್ರಹ್ಮನು (ತನ್ನೆಡೆಗೆ ಬರುತ್ತಿರುವ ಕಾಮನೃಪನಿಗಾಗಿ) ಅವನ್ನು ಒಂದಕ್ಕೊಂದು ಹತ್ತ-ದಂತೆ ಹೊಸ ಅಕ್ಕಸಾಲೆಯಲ್ಲಿ ಒತ್ತಾಗಿ ಒಂದರಮೇಲೊಂದನ್ನು ಇರಿಸಿ, ಅವುಗಳ ಮೇಲ್ಗಡೆಗೆ ಹಸುರು ಮುಗುಳುಗಳ ಹಚ್ಚೆ (ಕಸೂತಿ) ಗಳುಳ್ಳ ಮೇಲ್ಪಟ್ಟೆಯನ್ನು ಹೊದೆಯಿಸಿದ ಬೋನಗುಡಿಕೆಯಂತೆ ಎಂದರೆ ಆಹಾರಪದಾರ್ಥಗಳನ್ನಿಟ್ಟ ಪಾತ್ರೆಯಂತೆ ಸಾಲಾಗಿದ್ದ ಹಲಸಿನ ಹಣ್ಣುಗಳು ಶೋಭಿಸಿದವು.]

ಕವಿಯ ಈ ಹಲಸಿನ ಹಣ್ಣುಗಳೊಳಗಿನ ತೊಳೆಗಳ ಬಣ್ಣ, ಅವು-ಗಳ ಕಂಪು, ಇಂಪು, ಮೇಲ್ಮೈಯ್ಯ ಸೊಂಪು ಮೊದಲಾದವು ನಮ್ಮ ಮನವನ್ನು ಬಲವಾಗಿ ಆಕರ್ಷಿಸುತ್ತಿವೆಯಲ್ಲವೇ ?

ಸೌಂದರ್ಯವಿಲ್ಲದಲ್ಲಿ ಸೌಂದರ್ಯವನ್ನು ತೋರಿಸುವದರಲ್ಲಿಯೂ ಕವಿ ಬಲ್ಲಿದನು : ಮುದುಕರಲ್ಲಿ ನಾವು ಸೌಂದರ್ಯವನ್ನು ಕಾಣಲಾರೆವಲ್ಲವೇ ? ಮುದ್ದಣ ಕವಿ ಬಣ್ಣಿಸಿದ ಮುದುಕನನ್ನು ನೋಡಿರಿ— ಲಕ್ಷ್ಮಣನು ಅಡವಿಯಲ್ಲಿ ಬಿಟ್ಟುಬಂದ ಸೀತಾದೇವಿ ಗಾಬರಿಗೊಂಡು ಅತ್ತಿತ್ತ ನೋಡು-ತ್ತಾಳೆ—"ಇದಿರಿಗೆ ಸಾಕ್ಷಾತ್ ವೇದಪುರುಷನೇ ಮುದುಕನ ವೇಷದಿಂದ ಬರುತ್ತಿರುವನೋ ಎಂಬಂತಿರುವ ಒಬ್ಬ ಋಷಿ. ಈತ ವಾಲ್ಮೀಕಿ. ಬ್ರಹ್ಮಚರ್ಯದಲ್ಲಿ ಎಣೆಯಿಲ್ಲದವನು. ಕಾಮನು ಈವರೆಗೆ ಈತನ ಮೇಲೆ ಕೈಮಾಡಿ ಪ್ರಯೋಜನವಾಗದಿರಲು ನಿರಾಶನಾಗಿ ತನ್ನ ಬಿಲ್ಲನ್ನು ಮುರಿದು ಈತನ ಮೋರೆಯ ಮೇಲೆ ಬಿಸಾಡಿರುವನೋ ಎಂಬಂತೆ ಸಡಿಲವಾದ ಆತನ ಹುಬ್ಬು ಅಂದವಾಗಿವೆ; ಜ್ಞಾನದೃಷ್ಟಿಯ ನೆರವು ಇರುವಾಗ ಹೊರನೋಟವೇತಕ್ಕೆ ಎಂದು ಒಳಗೆ ನೋಡುತ್ತಿರುವನೋ

ಎಂಬಂತೆ ಒತ್ತಾದ ಎವೆಗಳೊಳಗೆ ಅರೆದೆರೆದ ಕಣ್ಣಿನ ಕೊಂಕುನೋಟವು ಒಪ್ಪುತ್ತಿದೆ; ಯೋಗಾಭ್ಯಾಸದ ಯಮನಿಯಮ ಮೊದಲಾದ ಎಂಟು ಜನ ಗೆಳೆಯರು ಏರಿಬರುವದಕ್ಕೂ, ಆಗಲೇ ಕಾಮ ಕ್ರೋಧ ಮೊದಲಾದ ಆರುಜನ ವೈರಿಗಳು ಇಳಿದುಹೋಗುವದಕ್ಕೂ ಹಾಕಿದ ನಿಚ್ಚಣಿಕೆಗಳೋ ಎಂಬಂತೆ ಎರಡೂ ಬದಿಯ ಪಕ್ಕೆಯೆಲುವುಗಳು ಎದ್ದು ಕಾಣಿಸುತ್ತಿವೆ; ಬಿಚ್ಚಿದ ಮಾಯಾಪಾಶದ ಹಲವು ಹುರಿಗಳೋ ಎಂಬ ಹಾಗೆ ನರಗಳು ಎಲ್ಲ ಕಡೆಗೆ ಜೋಲುಬಿದ್ದಿವೆ;........ " ಈ ವರ್ಣನೆಯನ್ನು ಓದುವಾಗ ಮುದುಕನೂ ದರ್ಶನೀಯನಾಗುತ್ತಾನೆ.

ಸೌಂದರ್ಯವನ್ನು ಹೊರಹೊಮ್ಮಿಸುವಲ್ಲಿ ಕವಿಶಕ್ತಿ ಬ್ರಹ್ಮಶಕ್ತಿಯನ್ನು ಮೀರಿದ್ದು. ಬ್ರಹ್ಮನು ಮಾಡುವ ಇಷ್ಟಜನ ವಿಯೋಗವು ಅಸಹ್ಯವು; ಕವಿ ನಿರ್ಮಿಸಿದ ಇಷ್ಟಜನ ವಿಯೋಗವು ಆಕರ್ಷಕವು. ಬ್ರಹ್ಮನು ಅಳಲಿಸುವ ಶೋಕವನ್ನುಂಟುಮಾಡುವನು; ಕವಿ ಸೊಗಸುಬಡುವ ಶೋಕವನ್ನು ಎಂದರೆ ಶೋಕರಸವನ್ನು ಉಂಟುಮಾಡುವನು: ಲಕ್ಷ್ಮಣನು ಅಡವಿ-ಯಲ್ಲಿ ಇಳಿಸಿಬಂದ ತರುವಾಯ ಸೀತಾದೇವಿ—" ಹಾ! ಅನಾಥೆಯಾದೆ-ನಲ್ಲವೇ? ನನ್ನ ಪ್ರಾಣದೊಡೆಯನು ನನ್ನನ್ನು ಅಡವಿಗಟ್ಟಿದನೇ? ನನ್ನ ಪತಿ ನನ್ನನ್ನು ತೊರೆದನೇ? ಶ್ರೀರಾಮಚಂದ್ರನು ನನ್ನ ಕೈಬಿಟ್ಟನೇ? ಕರು-ಣಾಕರನು ನನ್ನನ್ನು ಅಗಲಿದನೇ? ಅಂದು ವನವಾಸಕ್ಕೆ ಹೊರಡುವಾಗ ಅರಗಳಿಗೆ ಕೂಡ ಬಿಟ್ಟಿರಲಾರೆನೆಂದು ಆತನನ್ನು ಹಿಂಬಾಲಿಸಿದೆನಲ್ಲವೇ? ಈಗ ಆತನನ್ನಗಲಿ ಜೀವವಿರುವವರೆಗೂ ಈ ಕಟ್ಟಡವಿಯಲ್ಲಿ ಹೇಗೆ ಜೀವಿಸಲಿ?" ಎಂದು ಮೊದಲಾಗಿ ಕಾಡ ಕಲ್ಗಳೂ ಕರಗುವಂತೆ ಆ ಗರ್ಭಿಣಿ ಅಳುವ ವರ್ಣನೆಯನ್ನು ಓದುವಾಗ ನಡುವೆ ಬಿಡಲಾದೀತೇ? ಬ್ರಹ್ಮಸೃಷ್ಟಿಯಲ್ಲಿ ಸೀತೆ ಅತ್ತಿರಬಹುದು. ಆಕೆ ಅಳುವದನ್ನು ಕಂಡ-ವರೂ ಅತ್ತಿರಬಹುದು. ಆದರೆ ಕವಿಸೃಷ್ಟಿಯೊಳಗಿನ ಸೀತಾವಿಲಾಪವು ನಮಗೆ ಆಕರ್ಷಕವಾಗಿರುವದು.

ಬ್ರಹ್ಮಸೃಷ್ಟಿಯೊಳಗಿನ ಎಮ್ಮೆ ಅಂದಗೇಡಿ; ಕವಿಸೃಷ್ಟಿಯ ಎಮ್ಮೆ ಮನೋಹರ:

ನೆರೆವುಲ್ಲಂ ಮೇದೆರಳ್ಕಣ್ ತುಮುಳೆ ಕುಡಿದು ಪೂ-
ರಾಂಬುವಂ ಬೀಗಿ ಬೆನ್ನಿಂ |
ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡುಗೆಚ್ಚಲ್
ಪೊದಳ್ತಂದು ವತ್ಸೋ- ||
ತ್ಕರಕೆಲ್ಲಂ ಪಾಲನಿಂಬಿಂ ಕರೆಯೆ ಬಹಳ ರೋ-
ಮಂಥ ಫೇನಾವಳೀ ಪಾಂ- |
ಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ
ಕಣ್ಗೆಗುರ್ವಾಯ್ತು ಕಾರೊಳ್ ||

[ —ಅಡವಿಯಲ್ಲಿ ಹುಲ್ಲನ್ನು ಯಥೇಷ್ಟವಾಗಿ ಮೇದು ಎರಡೂ ಕಣ್ಣುಗಳು ಮುಚ್ಚಿರಲು ತೊರೆಯ ನೀರನ್ನು ಕುಡಿದು ಬೆನ್ನಿಂದ ಬಿರಿಯುವವೋ ಎನ್ನು-ವಷ್ಟು ಮಟ್ಟಿಗೆ ಸೊಕ್ಕಿ ಮುಂಗಾಲ ವರೆಗೆ ಬೀಸಾದ ತುಂಬುಗೆಚ್ಚಲು ಕರುಗಳಿಗೆ ಸಾಕೆನಿಸುವಷ್ಟು ಹಾಲನ್ನು ಕರೆಯುತ್ತಿರಲು ಮೆಲುಕಾಡಿಸುವಾಗ ಹೊರಟ ಬುರುಗಿನಿಂದ ಬೆಳ್ಳಗೆ ಕಾಣಿಸುವ ಬಾಯಿಯುಳ್ಳ ಎಮ್ಮೆಗಳು ಅಂದವಾಗಿ ಕಾಣಿಸುತ್ತಿದ್ದವು. ]

ಕವಿಯ ಈ ಎಮ್ಮೆಗಳನ್ನು ನೋಡಲು ತವಕಿಸುತ್ತೇವೆ.

ಮಸಣವು ನಮಗೆ ಭಯಾನಕವಾಗಿರುವದಷ್ಟೇ? ಹೇಸಿಗೆಯು-ನ್ನುಂಟುಮಾಡುವದಷ್ಟೆ? ಆದರೆ ಭಾರತ ಯುದ್ಧಾವಸಾನದಲ್ಲಿ ಹೆಣ-ಮಯವಾದ ಕುರುಕ್ಷೇತ್ರ ರಣಭೂಮಿಯನ್ನು ರನ್ನ ಕವಿ ತನ್ನ ಗದಾ-ಯುದ್ಧ ಕಾವ್ಯದಲ್ಲಿ ತೋರಿಸುತ್ತಿರುವಾಗ ನಮಗೆ ಅಂಜಿಕೆಯೆನಿಸುವದಿಲ್ಲ; ಹೇಸಿಗೆ ಬರುವದಿಲ್ಲ.

ಬಾಹ್ಯಸೌಂದರ್ಯಕ್ಕಿಂತ ಮಾನಸಸೌಂದರ್ಯವು ಹೆಚ್ಚಿನದು. ನಾಟಕ ಕಾದಂಬರಿಗಳಲ್ಲಿರುವ ಪಾತ್ರಗಳ ಸ್ವಭಾವ, ಅವರ ಚರಿತ್ರ, ಅವರ ಪರಸ್ಪರ ವಿರುದ್ಧ ಮನೋಭಾವಗಳ ಹೋರಾಟ ಇವುಗಳ ಸೌಂದರ್ಯವು ಮಾನಸಸೌಂದರ್ಯವು. ಬಾಣನು ತನ್ನ ಕಾದಂಬರಿಯಲ್ಲಿ ಮಹಾಶ್ವೇತೆಯ ಸ್ವಭಾವವನ್ನು ಎಷ್ಟು ಸುಂದರವಾಗಿ ಚಿತ್ರಿಸಿದ್ದಾನೆ! ಕಣ್ವಾಶ್ರಮದಲ್ಲಿ ಶಕುಂತಲೆಯನ್ನು ಕಂಡ ದುಷ್ಯಂತನಲ್ಲಿ ಮಸಗಿದ ಒಳತೋಟೆಯನ್ನು ಕಾಲಿದಾಸನು ಎಷ್ಟು ಮಾರ್ಮಿಕವಾಗಿ ರೂಪಿಸಿದ್ದಾನೆ:

ಎಣಿಸಲ್ ಕ್ಷತ್ರಪರಿಗ್ರಹೋಚಿತೆ ನಿಜಂ ಸಂದೇಹಮಿನ್ನೇತಕೀ |
ಫಣಿರಾಡ್ವೇಣಿಯೊಳಾರ್ಯಮೆಂದೆನಿಸಿದೀ ಮನ್ಮಾನಸಂ ನಟ್ಟಿ ಕಾ- ||
ರಣದಿಂ ಸಂಶಯಪಾತ್ರವಸ್ತುಗಳೊಳಾದಂ ಸಂತರಾದರ್ಗೆ ಧಾ- |
ರಿಣಿಯೊಳ್ ತಮ್ಮ ಮನಃಪ್ರವರ್ತನಮೆ ತಾನಕ್ಕುಂ ಪ್ರಮಾಣಂ ವರಂ ||

—ಶಾಕುಂತಲ ಅಂಕ ೧, ೨೨

ದುಷ್ಯಂತನು ಶಕುಂತಲೆಯನ್ನು ಕಂಡ ಬಳಿಕ ಆತನ ಒಂದು ಮನೋವೃತ್ತಿ (ಅಭಿಲಾಷೆ) ಆಕೆಯ ಕಡೆಗೆ ಹರಿಯುತ್ತಿದೆ, ಇನ್ನೊಂದು ಮನೋವೃತ್ತಿ ಎಂದರೆ ಕ್ಷತ್ರಿಯನಾದ ತನಗೆ ಬ್ರಾಹ್ಮಣ ಕನ್ಯೆಯಾದ ಈಕೆ ಪರಿಗ್ರಹಿಸಲು ಅರ್ಹಳಲ್ಲ ಎಂಬ ಶಂಕೆ ಮೊದಲಿನ ಮನೋವೃತ್ತಿಯನ್ನು ಇದಿರಿಸುತ್ತಿದೆ. ಈ ಎರಡು ಮನೋವೃತ್ತಿಗಳ ಹೋರಾಟದಲ್ಲಿ ಕೊನೆಗೆ ಈಕೆ ಕ್ಷತ್ರಿಯನು ಪರಿಗ್ರಹಿಸಲು ತಕ್ಕವಳಿರಬೇಕು, ಎಂಬ ನಿರ್ಣಯವು ಅಭಿಲಾಷೆಗೆ ಗೆಲುವನ್ನು ತರುತ್ತದೆ. ಇಂತಹ ಮನೋವೃತ್ತಿಗಳ ಹೋರಾಟದ ಸಂದರ್ಭಗಳಿಂದ ಕಾವ್ಯಗಳು ಮನೋಹರವಾಗುವವು. ಶೆಕ್ಸಪಿಯರ್ ಕವಿಯ ಹೆಮ್ಲೆಟ್ ಮೊದಲಾದ ನಾಟಕಗಳಲ್ಲಿ ಇಂಥ ಮನೋವೃತ್ತಿಗಳ ಹೋರಾಟದ ಪ್ರಸಂಗಗಳು ಸೊಗಸಾಗಿರುವದರಿಂದಲೇ ಆ ನಾಟಕಗಳು ಲೋಕಪ್ರಿಯವಾಗಿರುವವು. ಈ ಸೌಂದರ್ಯವನ್ನು ತನ್ನ ಕಾವ್ಯದಲ್ಲಿ ತೋರಿಸಬಲ್ಲ ಕವಿಯ ಶಕ್ತಿ ಅದ್ಭುತವಾದದ್ದು.

—ಮ. ಪ್ರ. ಪೂಜಾರ.

---

೧. ಕಾವ್ಯ, ಕಾದಂಬರಿ, ನಾಟಕ ಇವುಗಳಲ್ಲಿ ಕವಿಯು ಸೌಂದರ್ಯವನ್ನು ಯಾವ ಯಾವ ಬಗೆಗಳಲ್ಲಿ ತೋರಿಸುವದುಂಟು ? ೨. ಪಾಶ್ಚಾತ್ಯ, ಪೌರ್ವಾತ್ಯ, ಹಸುಗೆ, ತವಕ, ಆಗರ, ಮಾಗಿರು, ಕೈಮಾಡು ಇವುಗಳ ಅರ್ಥ ಹೇಳಿ, ಅದು ಸ್ಪಷ್ಟವಾಗುವಂತೆ ಒಂದೊಂದು ವಾಕ್ಯವನ್ನು ರಚಿಸಿರಿ. ೩. ನೀವು ಓದಿದ ಕವಿತೆಗಳಲ್ಲಿ ನಿಮಗೆ ಚಿತ್ತಾಕರ್ಷಕವೆನಿಸುವ ಎರಡು ಕವಿತೆಗಳನ್ನು ಹೇಳಿ, ಅವುಗಳಲ್ಲಿರುವ ಕವಿಯ ಕುಶಲತೆಯನ್ನು ಬಣ್ಣಿಸಿರಿ. ೪. ಕವಿಯು ದೇವತೆಗಳ ಮೆಚ್ಚುಗೆ ಪಡೆದವನೆನ್ನಲು ಪಾಶ್ಚಾತ್ಯರಲ್ಲಿರುವ ಪ್ರವಾಹವನ್ನು ನಿಮ್ಮ ಮಾತಿನಲ್ಲಿ ಒಂದು ಕಥೆಯಾಗುವಂತೆ ಬರೆಯಿರಿ.

# ೩೬. ಸುಭದ್ರೆಯ ಶೋಕ

[ 'ಶ್ರೀನಿವಾಸ' ಎಂಬ ಕಾವ್ಯನಾಮವುಳ್ಳ ಮಾಸ್ತಿ ವೆಂಕಟೇಶ-ಯ್ಯಂಗಾರರ 'ಅರುಣ' ಎಂಬ ಕವನ ಸಂಗ್ರಹದಿಂದ ಇದನ್ನು ಆಯ್ದು-ಕೊಳ್ಳಲಾಗಿದೆ. ಕವಿಪರಿಚಯವನ್ನು ಸೊ. ೬. ೬ನೆಯ ಪುಸ್ತಕದ ೨ನೆಯ ಪಾಠದಲ್ಲಿ ನೋಡಿರಿ. ಚಕ್ರವ್ಯೂಹದಲ್ಲಿ ಅಭಿಮನ್ಯು ಮಡಿದ ಸುದ್ದಿಯನ್ನು ಕೇಳಿದಾಗ ಸುಭದ್ರೆಗೆ ಆದ ಶೋಕವನ್ನು ಇಲ್ಲಿ ಬಣ್ಣಿಸಲಾಗಿದೆ. ಸುಭದ್ರೆಯ ದುಃಖವು ಹೃದಯಸ್ಪರ್ಶಿಯಾಗಿದೆ. ಕೊನೆಗೆ ಕೃಷ್ಣನು ಹೇಳಿದ ಸಮಾಧಾನವಿದೆ. ]

ಕಾಳೆಗದೊಳಭಿಮನ್ಯು ಮಡಿದ ದುಃಖದ ವಾರ್ತೆ
ಪಾಳೆಯದೊಳೆಲ್ಲ ಕಿವಿಗಳನಿರಿದುದೆದೆಯೊಡೆದ
ಊಳಿಗದ ಜನ ವೇಗದಿಂ ಬಂದು ಪೇಳಲಾರದೆ ಪೇಳ್ದ-
ರಂತಪುರದೆ. ||

ಕೇಳಿ ದುಃಖದ ವಹ್ನಿಯಲಿ ಬೆಂದರೆಲ್ಲರುಂ.
ಪೇಳಲೇಂ ಶಶಿರೇಖೆಯುಬ್ಬೆಗವ ? ಪೆತ್ತವಳ್
ತಾಳಲಾರದ ಶೋಕಭರದಿಂದೆ ನೆಲದೊಳೂಳಿಡುತೆ ಬಿಳ್ದಳು
ಸುಭದ್ರೆ ! || ೧ ||

" ಹಾ ! ಕಂದ, ಪೋದೆಯಾ ! ಬಾಳ್ವೆನಿನ್ನೆಂತುಟೋ ?
ಏಕೆ ನೀ ರಣಕ್ಕೈದಿದ್ಯೆ ಬೇಡವೆಂದೊಡೆಯು-
ಮಾಕೆವಾಳ್ತನವ ಸಾಯದಿರೆ ಜನ ಪೊಗಳದೇ ? ಪೋಗದೇ
ಬೇರೆ ಸೇನೆ! ||

ಹಾ ! ಕುವರ, ಬಾಲ್ಯದೊಳೆ ಮಡಿಯಲೆನ್ನುದರದೊಳ-
ದೇಕೆ ಜನಿಸಿದೆ ? ಶೋಕಸಾಗರದೊಳಾಳೆಂದು
ನೂಕಿದೆಯ ತಾಯನೆನ್ನಯ್ಯ, ನೀ ಪೋದೆಯಾ ? ಬಾಳಲೇ
ನಾನೆ"ಂದಳು || ೨ ||

"ಮಾವನೇ ನಿನಗೆ ಕೃಷ್ಣಂ? ಫಲ್ಗುಣಂ ಪಿತನೆ?
ಭಾವ ಭೀಮಂ ನಿನಗೆ ಪಿರಿಯಯ್ಯನಹನೆ? ಸಹ-
ದೇವನಕುಲರ್ ನಿನ್ನನೆತ್ತಿ ನಲಿದಾಡಿಸಿದ
ಕಿರಿಯಯ್ಯಗಳೆ? ಎಲ್ಲರುಂ ||
ಹೇವರಿಸದೆಂತು ನಿನ್ನನು ಯುದ್ಧಭೂಮಿಯಲಿ
ಸಾವನೈದೆಂದು ಕಳುಹಿಸಿ ಸುಮ್ಮನಿರ್ದರೈ?
ಆವ ನಚ್ಚಿನ ನಂಟನಿನ್ನು ನೆನೆಯಲಿಬಹುದೊ? ಎನ್ನಯ್ಯ,
ಎನ್ನ ಕಂದಾ! || ೩ ||

"ಅಕ್ಷೌಹಿಣೀ ಸೇನೆಗಳನು ನಡೆಯಿಸಿದ ಬಹು
ದಕ್ಷ ಸೇನಾನಿಗಳೊಳಾವನೊರ್ವಂ ಶತ್ರು-
ಪಕ್ಷದಾವ್ಯೂಹಮಂ ಭೇದಿಸಲ್ ಬಾರನೇ? ನಿನ್ನ-
ನಟ್ಟಿದರೇತಕೋ? ||
ಲಕ್ಷ ದಿನ ಬಾಳಲಿಹ ಬಾಲನಂ ತವ್ಮುಯ ಸ-
ಮಕ್ಷದೊಳೆ ಕೊಲೆಯಾಗೆ ಬಿಟ್ಟು ಬಾಳುವ ಬಹು ವಿ-
ಲಕ್ಷಣದ ಶೌರ್ಯಮಂ ತೋರಿದರೆ? ಸಾಯಲಾರದೆ
ಪೋದರೇ ಪ್ರೌಢರು? || ೪ ||

ಅನ್ನೆಯವನೆಂದಿಗುಂ ತಾಳದಿಹ ಧರ್ಮಜಂ
ನಿನ್ನ ಸದೆವಡಿವ ಮಾತಿಗೆ ಸಮ್ಮತಿಸಿದನೇ
ಕುನ್ನಿಯೆನ್ನನೆ ಚಿನ್ನ ಕುವರನೆನ್ನನೆಯಿನ್ನುಮೆಳೆವರೆಯ-
ಮೆನನೆ ಕೃಷ್ಣಂ ||
ಎನ್ನ ನೆನೆದಾದೊಡಂ ಪಾಲಿಸನೆ? ಅರ್ಜುನಂ
ತನ್ನ ಕುವರಂ ತನಗೆ ಸರಿಯೆನ್ನಲೆಳಸಿದೊಂ-
ದುನ್ನತಿಯ ಪೇರಾಸೆ ಬಯಲಾದುದೇ? ಯಾವ ಪಾಪಕಿದು
ಫಲವೊ ಮೇಣು? || ೫ ||

ಅಳಲುತಿರಲಿಂತುಟು ಸುಭದ್ರೆ ಕಡುದುಃಖದಾ,
ನಳಿನನಾಭಂ ಬಂದನವನ ನೋಡುತ್ತೊಡನೆ-
ಯಳಲು ನಾಲ್ಮಡಿಯಾಗೆ, ಬಂದು ಕಾಲೊಳು ಬಿಳ್ದು,
" ತಾರೆನ್ನ ಮಗನನೀಗ, ||
ಎಳೆಹಸುಳೆಯಂ, ತಿಳಿಯದೆನ್ನಣುಗ ಕುವರನಂ
ಕೊಳುಗುಳದೊಳೇಕೆ ಕೊಲಿಸಿದೆ ? ಏನ ಮರೆತೊಡೆಯು-
ಮಳಿಯನೆನಬೇಡವೇ ? ಬೇರೆಯವರಂತೆ ಕೊಲಿಸುವುದೆ
ಬಾಲನನೆ "ಂದಳು || ೬ ||

ಬಳಸಿ ಪಿಡಿದೆತ್ತಿ ಮುರರಿಪು ತನ್ನ ತಂಗಿಯಂ,
ಕಳೆಯುಳಿದ ನೋಟದಿಂ ಕರುಣದಿಂ ನೆರೆನೋಡಿ,
" ಕೊಳುಗುಳದ ಕಾರ್ಯದೊಳ್ ನಂಟ ನೋಡುವರೆ? ಶೌರ್ಯವ
ನೋಡಿ ಕಳುಹಿಸುವರು ||
ತಿಳಿಯದವಳೇ ನೀನು.? ಕಾರ್ಯವನು ಸಾಧಿಸುವ-
ರಿಳೆಯೊಳಿಂತಪ್ಪ ಶೋಕವ ತಡೆಯವೇಳ್ಕುಮಲೆ ;
ಎಳೆತನದೊಳಳಿದೊಡಂ ಕೀರ್ತಿವಡೆದಂ ಕುವರನೆ"ಂದೆನುತೆ
ಸಂತಯಿಸಿದಂ || ೭ ||

" ಬರಿದಾಗಿ ಜೀವಿಸುವ ಬಹಳ ಸಂವತ್ಸರಗ-
ಳಿರವಿನಿಂ ಬಂದ ಫಲವೇನು ? ಹುಲ್ಲನು ತಂದು
ಪಿರಿಯ ಹೊರೆಯೊಳು ಹೊರೆಯನೊಟ್ಟೆ ತೋರದ ಬಣವೆ
ಮಾಡಿ ಕೊನೆಯಲಿ ಕಿಡಿಯನು ||
ಇರಿಸುವಂದದಿ, ಪೊಳ್ಳು ದಿನದ ಭಾರದಿ ಬೆಳೆದ
ಹಿರಿಯ ಬಾಳನು ಸಾವಿಗಿತ್ತಾದುದೇಂ ? ಕೊನೆಗೆ
ಗುರುತಿಲ್ಲದಂತಳಿವುದಲ್ತೆ ? ನಿಸ್ಸಾರವಮಾಬಾಳು
ಬಾಳಲ್ಲ ಭದ್ರೇ || ೮ ||

—ಶ್ರೀನಿವಾಸ.

೧. ಪ್ರೌಢರು ತೋರಿಸಿದ ಶೌರ್ಯವು ವಿಲಕ್ಷಣವೆಂದು ಸುಭದ್ರೆ ಏಕೆ ನುಡಿದಳು ? ೨. ಶ್ರೀಕೃಷ್ಣನು ಸುಭದ್ರೆಯನ್ನು ಸಂತಯಿಸಿದ್ದು ಹೇಗೆ ? ೩. ಸಾರವುಳ್ಳ ಬಾಳು ಹೇಗಿರಬೇಕು ?

## ೩೭. ಸಹ್ಯಾದ್ರಿಯೂ ವಿಂಧ್ಯಾದ್ರಿಯೂ

### ೧

[ ಮರಾಠಿಯಲ್ಲಿ ಸುಪ್ರಸಿದ್ಧ ವಿದ್ವಾಂಸರೆಂದು ಹೆಸರಾದ ಪ್ರೊ. ಶಿ. ಮ. ಪರಾಂಜಪೆ ಎಂ. ಏ. ಇವರ 'ಸಹ್ಯಾದ್ರಿ ಆಣಿ ವಿಂಧ್ಯಾದ್ರಿ' ಎಂಬ ಲೇಖನವನ್ನು ಪಂಡಿತ ಮು. ಪ್ರ. ಪೂಜಾರ ಇವರು ಕನ್ನಡದಲ್ಲಿ ಅನು- ವಾದಿಸಿರುವರು. ಈ ವರ್ಣನೆಯಲ್ಲಿ ಪ್ರೊ. ಪರಾಂಜಪೆಯವರು ತೋರಿಸಿದ ಕಲ್ಪನಾಚಾತುರ್ಯವನ್ನು ಕಂಡುಕೊಳ್ಳಬಹುದು.

ಕಥಾಸಂದರ್ಭ— ಅಣ್ಣಾಸಾಹೇಬರು ಝಾಂಸಿಯ ಜಹಗೀರದಾರರು. ದಕ್ಷಿಣದಲ್ಲಿ ಕೊಂಕಣದೊಳಗಿನ ರಾಜಾಪುರದಲ್ಲಿ ಅವರ ಮಾವನ ಮನೆ. ಒಮ್ಮೆ ತಮ್ಮ ಹೆಂಡತಿಯೊಡನೆ ಮಾವನ ಊರಿಗೆ ಹೊರಟಿದ್ದರು. ದಾರಿ- ಯಲ್ಲಿ ವಿಂಧ್ಯಾದ್ರಿಯ ಅಡವಿಯಲ್ಲಿ ಇವರು ಕರೀಮ್‌ಬಕ್ಷ, ಗಂಗಾಪ್ರಸಾದ ಈ ಠಕ್ಕರ ಕೈಯೊಳಗೆ ಸಿಕ್ಕುಬಿದ್ದರು. ಠಕ್ಕರು ಅಣ್ಣಾಸಾಹೇಬರ ಕಡೆಯ ಆಳುಗಳನ್ನೆಲ್ಲ ಕೊಂದುಹಾಕಿದರು. ಅಣ್ಣಾಸಾಹೇಬರು ಹೇಗೋ ಕಷ್ಟ- ದಿಂದ ಪಾರಾದರು. ಆದರೆ ಅಣ್ಣಾಸಾಹೇಬರ ಹೆಂಡತಿ ತಪ್ಪಿಸಿಕೊಂಡು- ಬಿಟ್ಟರು. ಇದರಿಂದ ಅಣ್ಣಾಸಾಹೇಬರು ಬಹಳ ನೊಂದುಕೊಂಡರು. ಮತ್ತು ಅದೇ ಅಡವಿಯಲ್ಲಿ ಮುನಿವೃತ್ತಿಯಿಂದ ಇರತೊಡಗಿದರು. ]

ವಿಂಧ್ಯಾದ್ರಿ ಎಲ್ಲಿ, ಸಹ್ಯಾದ್ರಿ ಎಲ್ಲಿ ? ಒಂದಕ್ಕೊಂದು ಎಷ್ಟೋ ದೂರದಲ್ಲಿವೆ. ಆದರೂ ಐತಿಹಾಸಿಕ ಸಮಾಧಿಯನ್ನೇರ ಬಲ್ಲ ನಮ್ಮ ಅಣ್ಣಾಸಾಹೇಬರು ಯೋಗಬಲದಿಂದ ತಮ್ಮ ಮನೋರಾಜ್ಯದಲ್ಲಿ ಅಷ್ಟೊಂದು ಘನತರ ಸಹ್ಯಾದ್ರಿಯನ್ನು ಕೂಡ ತ್ರೇತಾಯುಗದ ಹನು-

ಮಂತನು ದ್ರೋಣಗಿರಿಯನ್ನು ಎತ್ತಿ ತಂದಂತೆ ವಿಂಧ್ಯಾದ್ರಿಯ ಮೇಲೆ ಎತ್ತಿ ತಂದುಕೊಳ್ಳುವರು. ಹಾಗೆ ಮಾಡುವಾಗ ಸಹ್ಯಾದ್ರಿ ಹತ್ತಿರ ಬರುತ್ತಹೋದಂತೆ, ಆ ಸಹ್ಯಾದ್ರಿಯ ಉನ್ನತ ಶಿಖರಗಳು ಗೋಚರ-ವಾಗುತ್ತ ನಡೆದಂತೆ, ಕೆಳಗಿನ ಹಳ್ಳಕೊಳ್ಳಗಳಲ್ಲಿ ಜುಳು ಜುಳು ಹರಿ-ಯುತ್ತಿರುವ ಪಂಚಗಂಗೆ ಮುಂತಾದ ಸಾವಿರಾರು ಪುಣ್ಯನದಿಗಳ ಗುಳು-ಗುಳು ಗಳಗಳ ಎಂಬ ಇಂಪಾದ ಶಬ್ದವು ಕೇಳುತ್ತ ಬಂದಂತೆ ಅಣ್ಣಾ-ಸಾಹೇಬರಿಗೆ ಹಿಡಿಸಲಾರದಷ್ಟು ಹರುಷ. ಸಹ್ಯಾದ್ರಿಯ ಮೇಲಿನ ನಿಬಿಡವಾದ ಅಡವಿ ಕಾಣಿಸತೊಡಗಿದಾಗಂತೂ ಅವರ ಮೈಮೇಲೆ ರೋಮಾಂಚಗಳೇಳುತ್ತಿದ್ದವು ! ಆ ಸಹ್ಯಗಿರಿಯೊಳಗಿನ ಸಣ್ಣ ಸಣ್ಣ ತೊರೆಗಳೊಳಗಿನ ಕಾಗೆಯ ಕಣ್ಣಿನಂತೆ ತಿಳಿಯಾದ ನೀರನ್ನು ಕಂಡು ಅವರ ಕಣ್ಣುಗಳಿಂದ ಪ್ರೇಮಾಶ್ರುಗಳು ಉದಿರುವವು, ಮತ್ತು ನೀರಡಿಕೆ-ಯಿಲ್ಲದಿದ್ದರೂ ಆ ಪಾವನೋದಕವನ್ನು ಕುಡಿಯಬೇಕೆಂದು ಅವರ ತುಟಿಗಳು ಸ್ವಲ್ಪ ಮುಂದೆ ಚಲಿಸಿ ತವಕವನ್ನು ತೋರ್ಪಡಿಸುವವು. ಈ ಸಹ್ಯಾದ್ರಿ ತನ್ನ ಟೊಂಕದ ವರೆಗಿನ ಪ್ರದೇಶದಲ್ಲಿ ಪಸರಿಸಿದ ಮಂಜಿನ ಮುಸುಕಿನೊಳಗಿಂದ ಎದೆಯನ್ನು ಚಾಚಿದಂತೆಯೂ ಎತ್ತರಿಸಿ ಕಾಣಿ-ಸುವ ಶಿಖರಗಳಿಂದ ತಲೆಯೆತ್ತಿ ನಿಂತಂತೆಯೂ ತೋರಿದಾಗ ನಾವೂ ಎದೆಗುಂದದೆ ಎಡರುಗಳನ್ನು ಮೆಟ್ಟಿ ರಾಜಕೀಯ ಉನ್ನತಿಗಾಗಿ ತಲೆಯೆತ್ತಿ ನಿಲ್ಲಲಾಪೆವೆಂಬ ಆತ್ಮವಿಶ್ವಾಸವು ಅಣ್ಣಾಸಾಹೇಬರ ಆಶಾವಾದಿ ಮನದಲ್ಲಿ ಮೂಡುತ್ತಿತ್ತು. ಈ ಬಗೆಯಾಗಿ ಇದಿರಿಗೆ ಬರುತ್ತಿರುವ ಸಹ್ಯಾದ್ರಿಯನ್ನು ಅಣ್ಣಾಸಾಹೇಬರು ತಮ್ಮ ಹಿಂದಿನ ಜನ್ಮದ ಒಬ್ಬ ಸೋದರನೇ ಬರು-ತ್ತಿರುವನೋ ಎಂದು ಬಗೆಯುವರು. ಅವನನ್ನು ಕಾಣುವದಕ್ಕಾಗಿ ತಮ್ಮ ತೋಳುಗಳನ್ನು ಚಾಚಿ ಮನದೊಳಗೇ ಮುಂದೆ ಹೋಗುವರು; ಮತ್ತು ಅತ್ಯಾದರದಿಂದ ಆತನಿಗೆ ಸ್ವಾಗತವನ್ನು ಕೋರುವರು.

ಸಹ್ಯಾದ್ರಿ ಹೀಗೆ ವಿಂಧ್ಯಾದ್ರಿಯ ಮೇಲೆ ಅಣ್ಣಾಸಾಹೇಬರ ಬಳಿಗೆ ಬರುವಾಗ ತಾನು ಒಂದು ಕಲ್ಲುಮಣ್ಣುಗಳ ದೊಡ್ಡದಾದ ರಾಶಿಯೆಂದೆ-ನಿಸಿ ಬರುತ್ತಿರಲಿಲ್ಲ, ಇತಿಹಾಸದಲ್ಲಿ ಮುಳುಗಿಹೋದ ಅವರ ಮನಸ್ಸು ಸಹ್ಯಾದ್ರಿಯನ್ನು ಬರಮಾಡಿಕೊಂಡಾಗಲೆಲ್ಲ ಆ ಸಹ್ಯಾದ್ರಿ ತನ್ನ ಅರಸು-

ತನದ ಸಡಗರದೊಡನೆ ಅಣ್ಣಾಸಾಹೇಬರನ್ನು ಕಾಣುವದಕ್ಕೆ ಬಂದಂತೆ ಮನಸ್ಸಿಗೆ ಹೊಳೆಯುವದು. ಆತನ ಆಗಿನ ಐಸಿರಿಯನ್ನು ಬಣ್ಣಿಸು-ವದು ನೀಗದ ಕೆಲಸ. ಆ ಸಹ್ಯಾದ್ರಿರಾಜನು ಹತ್ತಿರ ಬಂದಂತೆ ನೋಡಿದತ್ತ ಸಾಲುಗೊಂಡ ಆನೆಗಳಂತೆ ಕೋಟೆಗಳ ಸಾಲಿಗೆ ಸಾಲೇ ಕಾಣಿಸತೊಡಗುತ್ತಿದೆ; ಆ ಕೋಟೆಗಳ ಮೇಲೆ ಕಾವಲಿನ ದಂಡಾಳುಗಳು ಲಗುಬಗೆಯಿಂದ ಅಡ್ಡಾಡುತ್ತಿದ್ದಾರೆ, ನಗಾರಿ ನೌಬತ್ತುಗಳು ಬಾರಿಸು-ತ್ತಿವೆ, ಸನಯಿಸಮ್ಮೇಳಗಳು ಕಿವಿಗಿಂಪಾಗಿ ಊದುತ್ತಿವೆ, ಜರದ ಪಟ್ಟೆಯ ಕಾವಿಬಣ್ಣದ ನಿಶಾನೆಗಳು ಅತ್ತಿತ್ತ ಹಾರಾಡುತ್ತಿವೆ, ಗುಡಿಗಳ ಹೊಂಗ-ಳಸಗಳು ಬಿಸಿಲಲ್ಲಿ ಥಳಥಳ ಹೊಳೆಯುತ್ತಿವೆ. ಎಡೆಬಿಡದ ತೋಫುಗಳ ಅಬ್ಬರವೊಂದು ಕಡೆ, ಎಡಬಲ ಪರಿಚಾರಕರ ಪರಾಕು ಇನ್ನೊಂದು ಕಡೆ ; ವೀರರ ವೀರಾಲಾಪಗಳಿಗೂ ಭಟ್ಟಂಗಿಗಳ ಸ್ತುತಿಪಾಠಗಳಿಗೂ ತೆರಪಿಲ್ಲ; ನೋಡಿದತ್ತ ಸಾಮಂತ ಮನ್ನೆಯರ ಸಮ್ಮರ್ದ, ಕುದುರೆಗಳ ಖುರಪುಟಗಳ ಧ್ವನಿ, ಸೈನ್ಯಗಳ ಸಂಘರ್ಷ, ಸೇನಾನಾಯಕರ ವಿಜಯೋಲ್ಲಾಸ ಇವೇ ಮೊದಲಾದ ಸನ್ನಿವೇಶಗಳು ಕಣ್ಣಿಗೆ ಕಟ್ಟುತ್ತಿವೆ. ಈ ರಾಜವೈಭವದ ಸಡಗರದಲ್ಲಿ ಹೊರಟಾಗಲೂ ಸಹ್ಯಾದ್ರಿ ತನಗೆ ಹತ್ತಿಹೊಂದಿದ ಬಡ-ಒಕ್ಕಲಿಗರಾದ ಮಾವಳರನ್ನು ಮಾತ್ರ ಎಂದೂ ಮರೆಯನು. ಮಳೆಗಾಲ-ದಲ್ಲಿ ಒಕ್ಕಲಿಗರೂ ಬೇಸಗೆಯಲ್ಲಿ ದಂಡಾಳುಗಳೂ ಆಗುವ ಆ ಮಾವ-ಳರೂ ಅಟ್ಟದ ಮೆಟ್ಟಲುಗಳಂತೆ ಒಂದರ ಕೆಳಗೊಂದು ಸಾಲುಗೊಂಡಿರುವ ಅವರ ಗದ್ದೆಗಳೂ ಅವುಗಳ ಅಕ್ಕಪಕ್ಕಗಳಲ್ಲಿದ್ದ ಹಸಿರುಮುರಿಯುವ ಹುಲ್ಲುಗಾವಲುಗಳೂ ಆ ಹುಲ್ಲುಗಾವಲುಗಳಲ್ಲಿ ಕರುಮರಿಗಳು ಬೆಂಬ-ಳಿಸಿದ ಅವರ ಆಕಳು ಮೊದಲಾದ ಪಶುಗಳೂ ಇವುಗಳನ್ನು ಸಂಗಡ ಕರೆದುಕೊಂಡೇ ಆ ಸಹ್ಯಾದ್ರಿ, ಅಣ್ಣಾಸಾಹೇಬರನ್ನು ಕಾಣಲು ಬರುವ ವಾಡಿಕೆ.

ಸಹ್ಯಾದ್ರಿ ಸನಿಯಕ್ಕೆ ಬಂದೊಡನೆ ಕಣ್ದಣಿಯೆ ನೋಡಿ ಮನ-ದಣಿಯೆ ಸತ್ಕರಿಸಿ ಅಣ್ಣಾಸಾಹೇಬರು ಸಂತಸಬಡುವರು. ಅವರು ತಮ್ಮ ಈ ಪ್ರಿಯಮಿತ್ರ ಸಹ್ಯಾದ್ರಿಯನ್ನು ನೋಡಬೇಕೆಂದು ಬಯಸಿ ಕಣ್ಣುಮುಚ್ಚಿದಾಗಳೆಲ್ಲ ಆತನು ತನ್ನ ಉಚ್ಚತೆ ವಿಶಾಲತೆಗಳಿಂದ ವಿರಾಜಿ-

ಸುತ್ತ ಅವರ ಇದಿರಿಗೆ ಬಂದು ನಿಲ್ಲುವದೂ ಕಣ್ಣು ತೆರೆದೊಡನೆ ಮಾಯ-ವಾಗುವದೂ ಈ ತರದ ಕಣ್ಣುಮುಚ್ಚಾಲೆಯಾಟವು ಅವರಿಬ್ಬರಲ್ಲಿ ಮೇಲೆ ಮೇಲೆ ನಡೆಯುವದು. ಆಗ ಅಣ್ಣಾಸಾಹೇಬರು ತಮ್ಮಿದಿರಿಗೆ ನಿಂತ ಸಹ್ಯಾದ್ರಿಯ ಆ ಅದ್ಭುತ ಮೂರ್ತಿಯನ್ನು ಅಣುಪರಿಮಾಣದ ಮನಸ್ಸಿನಲ್ಲಿ ತಂದುಕೊಳ್ಳಲು ಯತ್ನಿಸಿದಾಗ ಆ ಮನಸ್ಸು ಸಹಜವಾಗಿ ಬಳಿಯಲ್ಲಿರುವ ವಿಂಧ್ಯಾದ್ರಿಯ ಕಡೆಗೆ ಹೋಗುವದು ; ಮತ್ತು ಈ ಎರಡೂ ಪರ್ವತಗಳ ತುಲನೆ ಮಾಡಲು ಬಯಸುವದು. ಆಗ ತುಲನೆಗಾಗಿ ಅವರು ತಕ್ಕಡಿ-ಯನ್ನು ಹಿಡಿದು ಒಂದು ಪರಡಿಗೆಯಲ್ಲಿ ಸಹ್ಯಾದ್ರಿಯನ್ನೂ ಇನ್ನೊಂದು ಪರಡಿಗೆಯಲ್ಲಿ ವಿಧ್ಯಾಂದ್ರಿಯನ್ನೂ ಇಟ್ಟು ತಾವು ಅಂತರಿಕ್ಷದಲ್ಲಿ ಒಂದೆಡೆಗೆ ಹೇಗೋ ನಿಂತುಕೊಂಡು ಯಾವ ಪರಡಿಗೆ ಮೇಲೆ, ಯಾವದು ಕೆಳಗೆ ಎಂದು ನೋಡಿ ಹಗುರುತನವು ಕಾಣಬಂದ ವಿಂಧ್ಯಾದ್ರಿಯನ್ನನುಲಕ್ಷಿಸಿ ಅವರು ಇಂತು ನುಡಿಯುವರು :—

## ೩೮. ಸಹ್ಯಾದ್ರಿಯೂ ವಿಂಧ್ಯಾದ್ರಿಯೂ

### ೨

“ಅಯ್ಯಾ ವಿಂಧ್ಯಾದ್ರಿಯೇ, ನಿನ್ನ ಜನ್ಮವು ವ್ಯರ್ಥ. ನೀನು ಇಷ್ಟೊಂದು ಬೆಳೆದದ್ದರ ಪ್ರಯೋಜನವೇನು ? ನೀನು ಉದ್ದುದ್ದ ಕೈ-ಕಾಲುಗಳನ್ನು ಚಾಚಿ ನಿಶ್ಚಿಂತನಾಗಿ ಅಂಗೋತ್ತಾನ ಮಲಗಿಬಿಟ್ಟದ್ದೀಯೆ. ಈ ಆರ್ಯಾವರ್ತದ ಹಿತಕರವಾದ ಮೆತ್ತನೆಯ ಹಾಸಿಗೆ ದೊರೆತಿರುವಾಗ ನೀನು ದಾರಿಯೊಳಗೆ ಸುಮ್ಮನೆ ಅಡ್ಡಾಗಿರುವದು ಸೋಜಿಗವಲ್ಲ. ಪೂರ್ವ-ಕಾಲದಲ್ಲಿ ರಾಮಚಂದ್ರನು ಇಲ್ಲವೆ ಭೀಮಸೇನನು ಸಂಹರಿಸಿದ ರಾಕ್ಷಸರ ನೂರಾರು ಯೋಜನ ಉದ್ದವಾದ ದೇಹಗಳು ಭೂಮಿಯ ಮೇಲೆ ಬೀಳು-ತ್ತಿದ್ದವೆಂದು ಪುರಾಣಗಳಲ್ಲಿ ಕೇಳಿದ್ದೆವು. ನಿನ್ನನ್ನು ನೋಡಿದಾಗ ಅಂತಹ ಒಬ್ಬ ರಾಕ್ಷಸನ ದೇಹವೇ ಇಲ್ಲಿ ಮೂಡಲಿಂದ ಪಡುವಲ ಕಡಲ ವರೆಗೆ

ಕೈಕಾಲು ಚಾಚಿ ಬಿದ್ದಿರುವದೋ ಎಂದೆನಿಸುವದು. ಎಲೋ, ಈ ನನ್ನ ಗೆಳೆಯನಾದ ಸಹ್ಯಾದ್ರಿಯನ್ನು ನೋಡು ; ನೀನು ಅಡ್ಡ ಬಿದ್ದುಕೊಂಡಿ-ರುವೆ ; ಆತನು ಉದ್ದ ನಿಂತಿರುವನು. ನಮ್ಮ ಭರತಭೂಮಿಗೆ ಎರಡು ಮೂರು ಬದಿಗಳಲ್ಲಿರುವ ನಿಸರ್ಗದುರ್ಗವೆನಿಸಿದ ಅಗಾಧ ಸಮುದ್ರದುರ್ಗ-ವನ್ನು ದೇವದೇವನ ಕರ್ಮಕಾರರು ರಚಿಸಿರುವರಷ್ಟೇ ? ಅದರೊಳಗಿಂದ ಯಾವನೊಬ್ಬ ವೈರಿ ಕಣ್ಮರೆ ಮಾಡಿ ಒಳಸೇರಲು ಬಂದರೆ ನಮ್ಮ ತಾಯ್ನಾಡನ್ನು ಕಾಪಾಡಿಕೊಳ್ಳಲು ಕೋಟೆಯ ಗೋಡೆಯಂತೆ ಈ ಸಹ್ಯಾದ್ರಿ ಇಡಿ ಪಡುವಣ ಕಡಲ ದಂಡೆಯನ್ನು ಕಾಪಾಡುವ ಹೊಣೆ-ಹೊತ್ತುಕೊಂಡು ಕಾಯುತ್ತಿರುವಂತೆ ಉದ್ದಕ್ಕೆ ನಿಂತಿದ್ದಾನೆ. ಅದೇ ನಿನ್ನನ್ನು ನೋಡಿದರೆ ನೀನು ಸುಮ್ಮನೆ ಎಲ್ಲರ ದಾರಿಯನ್ನು ಕಟ್ಟಿಕೊಂಡು ನಡುವೆ ಅಡ್ಡ ಬಿದ್ದುಕೊಂಡುಬಿಟ್ಟಿರುವೆಯೆಂದು ತೋರುವದು. ಸಹ್ಯಾದ್ರಿ ಹಗೆಗಳ ದಾರಿಯನ್ನು ಕಟ್ಟಿ ನಿಂತಿರುವಾಗ ನೀನೋ? ತನ್ನವರ ತಿರು-ಗಾಟಕ್ಕೆ, ಹೋಗಬರುವದಕ್ಕೆ, ವ್ಯಾಪಾರಕ್ಕೆ ಅಡ್ಡಿಯಾಗಿ ದಾರಿಯನ್ನು ಕಟ್ಟಿ ನಿಂತಿರುವೆ! ಭೇದವನ್ನು ತನ್ನವರೊಳಗೆ ಉಂಟುಮಾಡದೆ ಹೆರವ-ರಲ್ಲಿ ಉಂಟುಮಾಡಬೇಕೆಂಬ ಸಾಮಾನ್ಯ ರಾಜನೀತಿಯನ್ನು ಕೂಡ ನೀನು ತಿಳಿದಿಲ್ಲವೆಂಬದಕ್ಕೆ ಮರುಗಬೇಕಾಗಿದೆ. ನಮ್ಮ ಹಿಂದುಸ್ತಾನವು ಒಂದೇ ಇದ್ದದ್ದನ್ನು ನೀನು ನಡುವೆ ಬಿದ್ದುಕೊಂಡು ಎರಡು ಹೋಳು ಮಾಡಿದೆಯಲ್ಲ ಇದಕ್ಕೇನೆನ್ನಬೇಕು? ಆತ್ಮಘಾತುಕರಾದ ಕೆಲಜನ ಮೂರ್ಖ ರಾಜತಂತ್ರಜ್ಞರು ತಮ್ಮವರಲ್ಲಿಯೇ ಒಡಕನ್ನು ಹುಟ್ಟಿಸಿ ಹೋರಾಟವನ್ನು ಹಬ್ಬಿಸಿ ಹರ್ಷಬಡುತ್ತಾರೆ. ಅಂಥವರಲ್ಲಿ ನೀನು ಶಿರೋಮಣಿ ಎಂಬದನ್ನು ಬೇರೆ ಹೇಳಬೇಕಾಗಿಲ್ಲ. ನಿನ್ನೀ ಕೃತಿಯನ್ನು ನೋಡಿದರೆ ನಿನ್ನಲ್ಲಿ ನಿಜವಾದ ಉಚ್ಚತನವೇ ಇಲ್ಲವೆಂಬದು ಸ್ಪಷ್ಟ-ವಾಗುವದು. ಅದೇ ನಿನ್ನ ಸೋದರನನ್ನು ನೋಡು, ಆತನು ಎಷ್ಟು ಮೇಲು ತರಗತಿಯವನು! ಆತನ ತಲೆಯೊಳಗೆ ಬಂದ ವಿಚಾರಗಳು ಯಾವಾಗಲೂ ಉಚ್ಚ ವಾತಾವರಣದೊಳಗಿನವು. ಮೇಲುನೆಲೆಯ ಆತನ ತಲೆ ಕೀಳು ನೆಲೆಯಲ್ಲಿ ಸುಳಿದಾಡುವದಕ್ಕೆ ಎಂದೂ ಕನಸಿನಲ್ಲಿ ಕೂಡ ಒಪ್ಪದು. ನಮ್ಮ ಭಾರತ ಭೂಮಾತೆಯ ಹೊಟ್ಟೆಯಲ್ಲಿ ನೀವು ಮೂವರು

ಮಕ್ಕಳು ಹುಟ್ಟಿ ಬಳೆದು ಬಂದಿರಿ ; ಒಬ್ಬನು ಹಿಮಾಲಯ, ಇನ್ನೊಬ್ಬನು ನೀನು, ಮೂರನೆಯವನು ಸಹ್ಯಾದ್ರಿ. ಒಬ್ಬ ಭಾರತಮಾತೆಯ ಹೊಟ್ಟೆಯಲ್ಲಿ ಹುಟ್ಟಿ ಬಂದ ಸೋದರರಲ್ಲಿ ಹಿರಿಯವನೂ ಕಿರಿಯವನೂ ಇಬ್ಬರು ಅತ್ಯುಚ್ಚ ಪದವಿಯನ್ನೇರಿದರು ; ಆದರೆ ನಡುವಿನವನಾದ ನೀನು ನಡುವೇ ಅವನತಿಗಿಳಿದು ಚಕ್ಕಂದದಿಂದ ಕೈಕಾಲು ಚಾಚಿಕೊಂಡು ಬಿದ್ದಿರುವೆ. ಪಶ್ಚಿಮ ಸಮುದ್ರದಲ್ಲಿ ಹುಟ್ಟಿ ಸಹ್ಯಾದ್ರಿಯಿಂದ ಹಿಮಾಲಯದ ಕಡೆಗೆ ಹೊರಟ ಮೋಡಗಳು ನಿನ್ನ ಮೇಲಿಂದಲೇ ನಿನ್ನನ್ನು ಲೆಕ್ಕಿಸದೆ ನಿನ್ನನ್ನು ಕಡೆಗಣಿಸುತ್ತ ಹೋಗುತ್ತವೆ ; ನೀರಿನ ಭಾರದಿಂದ ಅವು ಎಷ್ಟು ಕೆಳಗೆ ಇಳಿದು ಜೋಲುತ್ತಿದ್ದರೂ ನಿನ್ನೊಳಗಿನ ಎತ್ತರದ ಶಿಖರದ ತುದಿ ತಮ್ಮ ಬುದ್ದಲಿಕೆಯ ತೆಳ್ಳನೆಯ ಪರೆಗೆ ತಾಕಿ ಒಳಗಿನ ನೀರು ಚೆಲ್ಲೀತೆಂಬ ಅಂಜಿಕೆಯನ್ನು ಅವು ಎಳ್ಳಷ್ಟೂ ಹಿಡಿಯುವದಿಲ್ಲ. ಇಷ್ಟು ಮಟ್ಟಿಗೆ ಅವು ನಿನ್ನನ್ನು ಕೀಳನೂ ಅಲ್ಪನೂ ಎಂದು ಬಗೆಯುತ್ತವೆ ; ಗಿಡುಗಹಕ್ಕಿಯಂತೆ ಆಕಾಶದ ಬಹು ಮೇಲಿನ ಮಟ್ಟದಲ್ಲಿ ಎಂದರೆ ಸಹ್ಯಾದ್ರಿಯ ಇಲ್ಲವೆ ಹಿಮಾಲಯದ ಅತ್ಯುಚ್ಚ ಶಿಖರಗಳ ಕೆಳಗಡೆಯಲ್ಲಿ ಸುತ್ತುವರಿದು ನಲಿದಾಡುತ್ತಿರುವ ಗಾಳಿಗಳು ಬೇರೆ ಕಡೆಗಳಲ್ಲಿ ಕ್ಷೋಭೆಯನ್ನುಂಟುಮಾಡುವದಕ್ಕಾಗಿ ಬರುವದಾದರೆ ಎಷ್ಟೋ ಕಡೆಗೆ ‘ ಮಜಲು ’ ಮಾಡುತ್ತ ಇಳಿಯಬೇಕಾಗುವದು. ಮರಳಿ ಮೇಲೆ ಹೋಗುವಾಗ ಎಷ್ಟೊಂದು ಇಳುವು ಏರುಗಳನ್ನು ಕ್ರಮಿಸಬೇಕಾಗುವದು ; ಇದರಿಂದ ಅವಕ್ಕೆ ಉಬ್ಬಸ ಬಂದಿತೋ ಎಂಬಂತೆ ತೋರುವದು. ಮುಗಿಲಲ್ಲಿರುವ ಮಳೆ ನಿನ್ನ ಮೇಲಿನ ಬೇಸಗೆಯಿಂದ ಬಸವಳಿದ ಜನರ ಮೇಲೆ ಕೃಪಾದೃಷ್ಟಿಯನ್ನು ಹಾಕಬೇಕೆಂದರೆ ತಾನೆಂತಹ ಅಧಃಪತನವನ್ನು ಕೈಕೊಳ್ಳಬೇಕಾಯಿತು, ತಾನು ಕೆಳಕೆಳಗೆ ಎಷ್ಟು ದೂರ ಇಳಿಯಬೇಕಾಯಿತು ಎಂದು ಅದಕ್ಕೆ ಉಬ್ಬೆಗವಾಗುತ್ತಿರಬೇಕು ; ಅಂತೆಯೇ ಅದು ಬಲವಾಗಿ ಕಣ್ಣೀರುದಿರಿಸುವದೊ ಎಂಬಂತೆ ತೋರುವವು ಮಳೆಯ ಧಾರೆಗಳು. ಈ ಎಲ್ಲ ಮಾತುಗಳಲ್ಲಿ ಸಹ್ಯಾದ್ರಿಯೊಡನೆ ನಿನ್ನನ್ನು ಸರಿಹಿಡಿದು ನೋಡಿದಾಗ ಅಯ್ಯಾ ವಿಂಧ್ಯಾದ್ರಿಯೇ, ಉಚ್ಚತನದಲ್ಲಿ ನೀನು ಕಡಮೆ ಎಂದು ನಿರ್ಣಯವಾಗುವದು.

ಈ ಸಹ್ಯಾದ್ರಿಯ ಮನಸ್ಸನ್ನೂ ನೋಡು, ನಿನ್ನ ಮನಸ್ಸನ್ನೂ ನೋಡು. ಈತನು ಅರ್ವಾಚೀನಕಾಲದಲ್ಲಿ ಎಷ್ಟು ಜನ ದೊಡ್ಡ ಮನುಷ್ಯರಿಗೆ ಜನ್ಮವಿತ್ತಿರುವನೆಂಬದನ್ನು ನೀನು ಆಲೋಚಿಸಿರುವೆಯಾ ? ಈಚಿಯ ಕಾಲದ ಇತಿಹಾಸದಲ್ಲಿ ಗಣ್ಯರಾಗಿರುವ ಯೋಧರೂ ರಾಜತಂತ್ರ ವಿಶಾರದರೂ ಆದ ಬಹಳ ಜನರಿಗೆ ಆತನು ಜನ್ಮವಿತ್ತನು. ಯುದ್ಧಗಳಲ್ಲಿ ಹೊಗಳಿಸಿಕೊಂಡ ಹಲವು ಕೋಟೆಗಳು ಈತನ ಶಿರೋಭಾಗದಲ್ಲಿ ಮೈದೋರಿದವು. ದೊಡ್ಡ ದೊಡ್ಡ ಅರಸರ ಗದ್ದುಗೆಗಳು ಈತನ ಮೇಲೆ ಮೆರೆದವು. ಈ ಆತನ ಐತಿಹಾಸಿಕ ವೈಭವಗಳಲ್ಲಿ ನೀನು ಯಾವುದನ್ನೂ ತೋರಿಸಲಾರೆ. ತಾನಾಜಿ ಮಾಲಸುರೆ, ಯೇಸಾಜಿಕಂಕ, ಶಿವಾಜಿ ಭೋಸಲೆ, ಬಾಜಿ ಪ್ರಭು, ಧನಾಜಿ ಜಾಧವ, ಬಾಜೀರಾಯ, ಭಾವೂಸಾಹೇಬ, ತ್ರ್ಯಂಬಕರಾಯ, ಸಖಾರಾಮ ಬಾಪು, ನಾನಾ ಫಡಣವೀಸ ಇಂಥವರಲ್ಲಿ ಒಬ್ಬನಾದರೂ ನಿನ್ನ ಬಳಿಯಲ್ಲಿ ಇರುವನೇ ? ತೋರಣ, ಸಿಂಹಗಡ, ರಾಯಗಡ ಮುಂತಾದ ಕೋಟೆಗಳಿಗೆ ಸರಿದೊರೆಯಾದ ಒಂದು ಕೋಟೆಯಾದರೂ ನಿನ್ನಲ್ಲಿರುವದೇ ? ಜಗತ್ತಿಗೆ ಮರೆತುಹೋದ ಇತಿಹಾಸಪ್ರಾಕ್ತನಕಾಲದಲ್ಲಿ ನೀನೂ ಏನಾದರೂ ಕಾರ್ಯಭಾರವನ್ನು ಮಾಡಿದ್ದೆಯೋ ಏನೋ ಯಾರು ಬಲ್ಲರು ? ಆದರೆ ಈ ಕಾಲದಲ್ಲಿ ಮಾತ್ರ ನಿನ್ನ ತಲೆಯೊಳಗೆ ಮಣ್ಣುಕಲ್ಲುಗಳೇ ತುಂಬಿವೆಯೆಂದು ತೋರುವದು. ಸ್ವದೇಶ ಸ್ವರಾಜ್ಯಗಳಿಗಾಗಿ ತಮ್ಮ ದೇಹಗಳನ್ನು ಧಾರಾತೀರ್ಥದಲ್ಲಿ ಸಮರ್ಪಿಸಿದ ಅಸಂಖ್ಯ ವೀರಪುರುಷರ ಮೈಯಿಂದ ಬಿದ್ದ ರಕ್ತ, ಅವರ ಕಳಚಿದ ಕೈ, ಮುರಿದ ಕಾಲು, ಛಿನ್ನಭಿನ್ನವಾದ ರುಂಡ, ಒಣಗಿಹೋದ ಎಲುವು ಇವೆಲ್ಲವುಗಳಿಂದ ಸಹ್ಯಾದ್ರಿ ಉತ್ತರ ಕೊಂಕಣದ ಉತ್ತರದ ತುದಿಯಿಂದ ಮೈಸೂರಿನ ದಕ್ಷಿಣದ ತುದಿಯವರೆಗೆ ಶೋಭಾಯಮಾನವಾಗಿದೆ. ಆದರೆ ಅಯ್ಯಾ ವಿಂಧ್ಯಾದ್ರಿಯೇ, ನಿನ್ನ ಕಡೆಗೆ ನೋಡಿದರೆ ನಿನ್ನಲ್ಲಿ ಇಂತಹದು ಏನಿದೆ ? ಹಾ ! ಮರೆತೆ ; ನಾನೀ ಮಾತನ್ನು ಒಪ್ಪಬೇಕು : ನಿನ್ನ ಮೈಮೇಲೂ ರಕ್ತಪಾತವಾಗಿದೆ, ನಿನ್ನ ಮೇಲೂ ಅತ್ತಿತ್ತ ಕಳಚಿಬಿದ್ದ ಕೈ, ಮುರಿದ ಕಾಲು, ಕೊಯ್ದ ರುಂಡ ಇವುಗಳ ರಾಶಿಗಳು ಒಟ್ಟಿವೆ, ಇಲ್ಲವೆ ನೆಲದಲ್ಲಿ ಹೂತಿವೆ. ಆದರೆ ಅವು ಯಾರವು ? ಅನಾ-

ಥರೂ ದುರ್ಬಲರೂ ಆದ ಹಾದಿಕಾರರವು ! ಅಯ್ಯೋ ! ತೀರ ಅವನತಿಯ ರಸಾತಲಕ್ಕೆ ಹೋಗುತ್ತಿರುವ ವಿಂಧ್ಯಾದ್ರಿಯೇ, ಪರ್ವತಗಳ ಬಲೆ-ಯಲ್ಲಿಯೂ ಕಾಡುಗಳಲ್ಲಿಯೂ ತಮ್ಮ ಸ್ವರಾಜ್ಯದ ವೈರಿಗಳ ಮೇಲೆ ಒಮ್ಮೆಲೆ ಏರಿಹೋಗಿ ಅವರನ್ನು ನಾಶಗೊಳಿಸುವದು ನ್ಯಾಯವಾದ ಕರ್ತ್ತವ್ಯವೆಂದು ತಿಳಿದುಕೊಂಡ ಸಾವಿರಾರು ಜನ ಮಾವಳರು ಕಣ್ಮರೆ-ಯಲ್ಲಿ ಹೊಂಚುಹಾಕಿಕೊಂಡು ಸಹ್ಯಾದ್ರಿಯ ಮೇಲೆ ಕುಳಿತುಕೊಳ್ಳು-ತ್ತಿದ್ದರು. ಆದರೆ ವಿಂಧ್ಯಾ, ನಮ್ಮವರಾದ ದುರ್ಬಲ ಪ್ರವಾಸಿಕರ ತಲೆ-ಹೊಡೆಯಲು ಹೊಂಚುಹಾಕಿಕೊಂಡು ಕುಳಿತ ದರೋಡೆಗಾರರಿಗೂ ದಾರಿಹೊಯ್ಕರಿಗೂ ತಲೆಗಡಿಕರಿಗೂ ಠಕ್ಕರಿಗೂ ಬೇರೆ ಹಲವು ಜಾತಿ-ಗಳ ಕೊರಳುಗೊಯ್ಕರಿಗೂ ನೀನು ಆಶ್ರಯ ಕೊಟ್ಟೆಯಲ್ಲ? ಈ ನಿನ್ನಂತಹ ನೀಚನಿಗೆ ಶತಶಃ ಧಿಕ್ಕಾರವಿರಲಿ. ಕರೀಮ್‌ಬಕ್ಷನೇ ನಿನ್ನ ಶಿವಾಜಿ, ಗಂಗಾಪ್ರಸಾದನೇ ನಿನ್ನ ತಾನಾಜಿ. ಛೀ ನೀಚಾ, ನಿನಗೆ ಮತ್ತೆ ಮತ್ತೆ ಧಿಕ್ಕಾರವಿರಲಿ! ಎಲವೋ, ಸಹ್ಯಾದ್ರಿಯ ಮೇಲಿನ ಮಾವಳರು ಸ್ವರಾಜ್ಯಕ್ಕಾಗಿ ಪರಮಕಾಷ್ಠೆಯಾಗಿ ಹೆಣಗಿದಂತೆ ನಿನ್ನ ಹೊಟ್ಟೆಯಿಂದ ಉದಯಿಸಿದ ಆ ಕರೀಮ್‌ಬಕ್ಷನೂ ಆ ಗಂಗಾಪ್ರಸಾದನೂ ತಮ್ಮವರಾದ ದುರ್ಬಲ ಪ್ರವಾಸಿಗಳನ್ನು ಕನಿಕರವಿಲ್ಲದೆ ಕೊಂದು ಹಾಕುವದನ್ನು ಬಿಟ್ಟು ರಣಾಂಗಣದ ಮೇಲೆ ಪ್ರಾಮಾಣಿಕತೆಯಿಂದ ತಮ್ಮ ಕತ್ತಿಗಳನ್ನು ಹಿರಿದಿದ್ದರೆ ಒಂದೆಡೆಯಿಂದ ಮರಾಠರು ಇನ್ನೊಂ-ದೆಡೆಯಿಂದ ಪುರಭೈಯರು, ಒಂದೆಡೆಯಿಂದ ಸಹ್ಯಾದ್ರಿ ಇನ್ನೊಂದೆಡೆ-ಯಿಂದ ವಿಂಧ್ಯಾದ್ರಿ ಈ ಇರುಕಿನಲ್ಲಿ ಸಿಕ್ಕುಬಿದ್ದ ಯಾವ ವೈರಿ ನುಚ್ಚು-ನುರಿಯಾಗುತ್ತಿರಲಿಲ್ಲ? ಆದರೆ? ಆದರೇನು, ಯಾವದು ಆಗಬೇಕೆಂದು ಈಶ್ವರಸಂಕೇತವೋ ಅದೇ ಕೊನೆಗೆ ಆಗಿಹೋಯಿತು. ಶಿವಾಜಿ ಮಾಡಿದ ಸ್ವರಾಜ್ಯಸ್ಥಾಪನೆಯು ಕೆಲಸಕ್ಕೆ ಬಾರದೆ ಹೋಯಿತು, ಬಾಜಿರಾಯನ ಪರಾಕ್ರಮವು ವ್ಯರ್ಥವಾದಂತಾಯಿತು; ನಾನಾ ಫಡಣವೀಸನ ರಾಜತಂತ್ರ ವಿಶಾರದತೆ ಹೊರಹೊಮ್ಮಿದ್ದರೂ ಹೊರಹೊಮ್ಮದಂತೆಯೇ ಸರಿ. ಕೊನೆಗೆ ಇಮ್ಮಡಿ ಬಾಜಿರಾಯನ ಮೂರ್ಖತನಕ್ಕೇ ಜಯವು ದೊರೆಯಿತು; ಮತ್ತು ಕರೀಮ್‌ಬಕ್ಷ ಗಂಗಾಪ್ರಸಾದರ ಅನುಯಾಯಿಗಳಿಗೆ ಮಾತ್ರ ಎಲ್ಲೆಲ್ಲಿಯೂ ಗೆಲುವಾಗುತ್ತಿರುವದು!"

೧. ಸಹ್ಯಾದ್ರಿಗೆ ನೈಸರ್ಗಿಕ ಸೌಂದರ್ಯ ಹೇಗೆ ದೊರೆಯುತ್ತದೆ? ೨. ಸಹ್ಯಾದ್ರಿಯ ವೈಭವದ ಕುರುಹುಗಳಾವವು? ೩. ಸಹ್ಯಾದ್ರಿಗೂ ವಿಂಧ್ಯಾದ್ರಿಗೂ ಇರುವ ಭೇದಗಳಾವವು? ಯಾವದು ಶ್ರೇಷ್ಠ? ೪. ನಿಬಿಡ, ಎಡರು, ನೀಗು, ತೆರಪು, ಸರಿಹಿಡಿ ಈ ಶಬ್ದಗಳನ್ನುಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ. ೫. ನದಿಯ ದಂಡೆಯ ಮೇಲೆ, ಇಲ್ಲವೆ ಗುಡ್ಡದ ಮೇಲೆ ತಿರುಗಾಡಲು ಹೋದಾಗ ನೀವು ಕಂಡ ನೋಟವನ್ನು ಒಂದೆರಡು ವಾಕ್ಯವೃಂದಗಳಲ್ಲಿ ಬಣ್ಣಿಸಿರಿ. ಈ ಪಾಠದಲ್ಲಿ ಬಂದ ಶಬ್ದಗಳನ್ನು ಉಪಯೋಗಿಸಬಹುದು. ೬. ಈ ಪಾಠದಲ್ಲಿ ಯಾವ ಯಾವ ವಾಕ್ಯಗಳು ನಿಮ್ಮ ಮನಸ್ಸಿಗೆ ಬಂದಿವೆ? ಅವನ್ನು ಪಾಠ ಮಾಡಿರಿ.

## ೩೯. ಕಳಂಜಿಮಲೆ

[ ಮುಳಿಯ ತಿಮ್ಮಪ್ಪಯ್ಯನವರ 'ಪಶ್ಚಾತ್ತಾಪ' ಎಂಬ ಕಾದಂಬರಿಯಿಂದ ಈ ಭಾಗವನ್ನು ಆಯ್ದುಕೊಂಡಿದೆ. ಲೇಖಕರು ಮಂಗಳೂರಿನ ಒಂದು ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದಾರೆ. ಸನ್ ೧೯೪೧ ರ ಕರ್ನಾಟಕ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿದ್ದರು. ಇವರು ಅನೇಕ ಗದ್ಯಪದ್ಯಗಳನ್ನೂ ವಿಮರ್ಶಾತ್ಮಕ ಲೇಖನಗಳನ್ನೂ ಬರೆದಿರುವರು. ಆದಿ ಮಹಾಕವಿ ಪಂಪನ ವಿಷಯವಾಗಿ 'ನಾಡೋಜ ಪಂಪ' ಎಂಬ ದೊಡ್ಡ ವಿಮರ್ಶಾಗ್ರಂಥವನ್ನು ರಚಿಸಿದ್ದಾರೆ. ಮಂಗಳೂರ ಪ್ರಾಂತದಲ್ಲಿಯ 'ಕಳಂಜಿಮಲೆ' ಎಂಬ ಗುಡ್ಡದ ವರ್ಣನೆ ಇಲ್ಲಿದೆ. ಲೇಖಕರು ಕನ್ನಡ ಭಾಷೆಯಲ್ಲಿ ನುರಿತವರೂ ಅಹುದು, ಕವಿಗಳೂ ಅಹುದು ಎಂಬದಕ್ಕೆ ಈ ಲೇಖನವು ಉದಾಹರಣೆಯಾಗಬಲ್ಲದು. ಕಳಂಜಿಮಲೆಯ ಪ್ರಾಕೃತಿಕ ಸೌಂದರ್ಯಕ್ಕೆ ಕಲ್ಪನೆಯ ಸೊಗಸನ್ನು ಬೆರಸಿ ಪರಿಶುದ್ಧ ಭಾಷೆಯಲ್ಲಿ ಅದನ್ನು ಲೇಖಕರು ಇಲ್ಲಿ ಚಿತ್ರಿಸಿದ್ದಾರೆ. ]

ಮೇಲುನಾಡಿನ ಬಯಲಲ್ಲಿ ಪಳಗಿದ ಕಣ್ಣಿಗೆ ಈ ಕೆಳನಾಡಿನ ನೋಟವು, ಮೊದಮೊದಲು ಕುತೂಹಲದಾಯಕವಾಗಬಹುದು; ಕಡೆ

ಕಡೆಗೆ ಬೇಸರಿಕೆಯನ್ನೊದಗಿಸಬಹುದು. ನೋಟವು ಒಂದರಂತಲ್ಲ-ವಿನ್ನೊಂದು ; ಅದರಿಂದ ಕುತೂಹಲ. ಹತ್ತಬೇಕು, ಇಳಿಯಬೇಕು ; ನಿಲುಕಬೇಕು, ನುಸುಳಬೇಕು ; ಅದರಿಂದ ಬೇಸರ. ಮೊತ್ತ-ಮೊದಲೊಮ್ಮೆ ಕಡಲಿನ ಬಿಡಾರವಾಗಿತ್ತಂತೆ ಈ ನಾಡು. ವಜ್ರಾ-ಘಾತಕ್ಕೆ ಹೆದರಿ ಪರ್ವತಗಳ ಪಿಳ್ಳೆಮರಿಗಳೆಲ್ಲ ಈ ಕಡಲಿನಲ್ಲೆಡೆಗೊಂಡುವು; ಮಲಯಾಚಲದ ಸಾಲೊಂದು ಪೂರ್ವದಿಕ್ಕಿನಲ್ಲಿ ರಕ್ಷಣೆಯ ಆಳ್ವೇಲಿ-ಯಾಗಿ ನಿಂತು, ಇಂದ್ರಾಯುಧದಿಂದ ರೆಕ್ಕೆಯಳಿದು ಅಲ್ಲೆ ಸ್ತಬ್ಧ-ವಾಯಿತು. ಆಮೇಲೆ ಪರಶುರಾಮನಿಂದ ಕಡಲು ಹಿಂಜರಿದ ಈ ಕ್ಷೇತ್ರದಲ್ಲಿ ದಟ್ಟವಾಗಿ ನೆಲೆಗೊಂಡ ಗಟ್ಟಗುಡ್ಡಗಳು, ಕುದುರುದಿಣ್ಣೆ-ಗಳು ಎಂದರೆ ಅಂದು ಒಳಹೊಕ್ಕ ಮಲಯಾಚಲದ ಪಿಳ್ಳೆಗಳೇ. ಬಹು ಕಾಲದ ಜಲವಾಸದಿಂದ ಚಳಿಹಿಡಿದು, ರೆಕ್ಕೆಗಳಿದ್ದರೂ ಸ್ತಬ್ಧವಾಗಿವೆ ಎನ್ನಬಹುದು ಪೌರಾಣಿಕರು.

ಪರಶುರಾಮ ಕ್ಷೇತ್ರದೊಳಗೆ ಕಾರ್ವಾರದಿಂದ ಚಂದ್ರಗಿರಿಯ ವರೆಗೆ ಕನ್ನಡನಾಡು. ಇದರೊಳಗೆ ಕಲ್ಯಾಣಪುರದಿಂದ ತೆಂಕಣದು ತುಳು-ನಾಡಾದರೂ ಅದೂ ಕನ್ನಡದಲ್ಲೆ ಸಂಗಮವಾಗಿದೆ. ತುಳುವ ಸಂಸ್ಕೃತಿ ಇಲ್ಲಿಯ ಕನ್ನಡ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿದೆ. ಕನ್ನಡದ ಈ ತೆಂಕನಾಡಿನಲ್ಲಿ ಮಂಜೇಶ್ವರವೆಂಬುದೊಂದು ಕರಾವಳಿಯ ಊರು. ಅಲ್ಲಿಂದ ತೊರಾವಳಿಗೆ ಹರಿಯುತ್ತಿದೆ ಹೆದ್ದಾರಿ. ಒಂಬತ್ತು ಹತ್ತು ಮೈಲು ಮುಂಬರಿವಾಗ ಸಿಕ್ಕುತ್ತಿದೆ ಆನೆಕಲ್ಲೆಂಬ ಹಳ್ಳಿ. ಆನೆಕಲ್ಲಿನ ಹೊಳೆಯಿಂದಲೆ ಮೇಲೇರಿ ಹಬ್ಬಿದೆ "ಕಳಂಜಿಮಲೆ" ಎಂಬ ಗುಡ್ಡ. "ಆನೆಕಲ್ಲಿನಿಂದ ಏನೆಕಲ್ಲ ಮಲೆವರೆಗೆ" ಎಂಬ ಹಳ್ಳಿಗರ ಮಾತಿನಿಂದ ಈ ಕಳಂಜಿಮಲೆಯ ವ್ಯಾಪ್ತಿಯೆಷ್ಟೆಂಬುದನ್ನರಿತುಕೊಳ್ಳಬಹುದು. "ಏನೆಕಲ್ಲು" ಎಂದರೆ ಮಲಯಾದ್ರಿಯ ಒಂದು ಶಿಖರವೆಂಬುದನ್ನು ಮರೆಯಬಾರದು. ತಂತಮ್ಮ ನಾಡುಗಳೊಳಗೆ ಹಾದುಹೋಗುವ ಈ ಸಾಲ್ಮಲೆಯ ಪ್ರಾಂತಗಳನ್ನು ಆಯಾನಾಡವರು ಬೇರೆ ಬೇರೆ ಹೆಸರಿಟ್ಟು ಕರೆಯುತ್ತಾರೆ. ಇದರ ತೆಂಕಣ ತಪ್ಪಲಲ್ಲಿ ಆನೆಕಲ್ಲಿನಿಂದ ಹರಿಯುವ ಬೀದಿ, ಕಾಸರಗೋಡಿನಿಂದ ಬರುವ ಬೀದಿಯೊಡನೆ ಉಕ್ಕಡವೆಂಬಲ್ಲಿ

ಸಾಯುಜ್ಯವನ್ನೊಂದುತ್ತಿದೆ. ಒಂದಾದ ಹೆದ್ದಾರಿ ಕಳಂಜಿಮಲೆಯ ಕಣಿವೆಯ ಮೂಲಕವಾಗಿ ವಿಟ್ಟಲಕ್ಕಯ್ದುವುದು. ಆ ಎಡೆಯಲ್ಲಿ ಮೊದಲಿನ ವಿಟ್ಟಲದರಸರ ಪೌಜಿನ ಠಾಣಯವಿದ್ದುದರಿಂದಲೇ ಅದಕ್ಕೆ ಉಕ್ಕಡವೆಂಬ ಹೆಸರಾಗಿದೆ. ಈಗ ಅಲ್ಲೊಂದು ' ಗುತ್ತಿಗೆ ' ಮಾತ್ರವಿದೆ. ಸಂಧ್ಯಾಕಾಲದಲ್ಲಿ ಆ ಗುತ್ತಿಗೆಯಲ್ಲಿ ಕೂಡುವ ಅದೊಂದು ಪೌಜು ಮಾತ್ರವೆ ಹಳೆಗಾಲದ " ಉಕ್ಕಡ "ವೆಂಬ ಹೆಸರನ್ನು ಹೇಳಿಸುತ್ತಿದೆ. ಮುಂದಿನ ಅದೇ ಮಲೆಸಾಲನ್ನು " ಕೊಚ್ಚಿಗುಡ್ಡೆ " ಎನ್ನುತ್ತಾರೆ ಆ ನಾಡವರು. ವಿಟ್ಟಲಸೀಮೆಯೆಂಬ ಹಿಂದುಸ್ಥಾನಕ್ಕೆ ಕಳಂಜಿಮಲೆ ಎಂಬುದೊಂದು ವಿಂಧ್ಯಾಚಲವೆಂದರೂ ಸಲ್ಲುವುದು. ಇದು ಮಲೆ-ಮಾತ್ರವೆ ಅಲ್ಲ ; ತೆಂಕ ಬಡಗಣ ನಾಡುಗಳಿಗೆ " ತಾಯ್ಮಲೆ " ಎಂದರೂ ತಪ್ಪಾಗದು. ಇದರ ಅಲ್ಲಲ್ಲಿಯ ಶಿಖರಗಳಿಂದ ಇಕ್ಕಡೆಗೆ ಎಡೆಬಿಡದೆ ಹರಿದುಬರುವ ಆ ತಿಳಿನೀರಿಲ್ಲದಿರುತ್ತಿದ್ದರೆ ಆಯಾ ಪ್ರಾಂತ-ಗಳೆಂದರೆ, ತಾಯಿಲ್ಲದ ತಬ್ಬಲಿಗಳಾಗುತ್ತಿದ್ದುವು. ಹೀಗೆಂದರೆ, ಆಲಂಕಾರಿಕ ವಚನವಾಗುವುದಾದರೆ ಮರುಭೂಮಿಗಳಾಗುತ್ತಿದ್ದುವು ಎನ್ನುವ.

ಕಡಲಕರೆಯಿಂದ ನೋಡಿರಿ ಮೂಡಣ ದಿಕ್ಕನ್ನು. ಪ್ರಕೃತಿದೇವಿ ಒರಗುಮಣೆಯಲ್ಲಿ ಮಂಡಿಸಿದ್ದಾಳೆ. ಮಲಯಾಚಲವೆಂಬ ಮೋರೆ, ಅಪಾರಸಾಗರದ ನೆಡುನೋಟದಲ್ಲಿ ಮಗ್ನವಾಗಿದೆ. ಉಟ್ಟ ಹಸುರು ಹಚ್ಚೆಯ ಕಾಂಗಿನ ಸೆರಗು ತಂಗಾಳಿಯ ತೀಟದಿಂದ ಕುಣಿದಾಡುತ್ತಿದೆ. ಅವಳ ನಿಸರ್ಗವಾದ ಶರೀರಗಂಧದಿಂದಾಗಿಯೆ ಮಲಯಮಾರುತನು ಕವಿಗಳ ಮನ್ನಣೆಗೆಡೆಯಾದುದು. ಆಕೆಯ ಕಾಲ ನಿರ್ಮಲವಾದ ಅಡಿಯನ್ನು ಮಾತ್ರ ಕಾಣಬಹುದು ಸಮುದ್ರತೀರದ ಮರಳಿನಲ್ಲಿ. ನೆರೆನೊರೆಗಳಿಂದೊಡವೆರೆದ ತೆರೆ, ಆಕೆಯ ಕಾಲ ಮಣಿಗಂಟೆಗೆ ಕಡಗ-ವಾಗಬೇಕೆಂದು ಎಡೆಬಿಡದೆ ಹೆಣಗುತ್ತಿದೆ. ಆದರೇನು ? ಸ್ವಭಾವ-ಸುಂದರವಾದ ಆ ಪಾದಕ್ಕೆ ತೊಡಿಸಲರ್ಹವಾದ ತೊಡವಾವುದು ? ತೊಡಿಗೆಯಾಗುತ್ತೇನೆಂಬ ಆನಂದದಿಂದುಕ್ಕಿಬಂದರೂ ಆ ಕಾಲನ್ನು ಮುಟ್ಟಿದೊಡನೆ ತನ್ನ ಅನರ್ಹತೆಗೆ ತಾನೇ ನಾಚಿ ಹಿಂಜರಿಯುತ್ತಿದೆ

ಆ ತೆರೆ. " ಒಂದಲ್ಲವಾದರೆ ಮತ್ತೊಂದು ತೆರೆ ; ತೆರೆದು ನೋಡುವ " ಎಂದಾಗಿರಬಹುದು ಆ ಕಡಲೆಂಬ ಸೊನ್ನೆಗಾರನ ನೆಡುನಂಬುಗೆ. ಅಲ್ಲ ; ಕಾಲನ್ನಲಂಕರಿಸಲಿಕ್ಕಾಗಿ ಹೆಣಗುವುದಲ್ಲವದು. ಪ್ರಕೃತಿದೇವಿಯ ಕಾಲನ್ನು ತುತ್ತಿ ಮೈಯನ್ನೂ ಗಿಳಂಕರಿಸಲಿಕ್ಕೆಂದು ಬರುವ ನಾಗನ ಬಾಯ್ದೆರೆಯಾಗಿರಬೇಕು. ಅಂಥ ಮರೆಮೋಸಕ್ಕೆ ಪ್ರಕೃತಿದೇವಿ ಪಕ್ಕಾಗುವಳೆ ? ನೋಡಿರಿ, ಅವಳ ಪಾದಾಘಾತದಿಂದ ಛಿನ್ನವಿಚ್ಛಿನ್ನವಾಗುತ್ತಿದೆ ತೆರೆಯೆಲ್ಲ.

ಮೊದಲೆ ಚಳಿಗಾಲ ; ಚಳಿಗಾಲಕ್ಕೆ ಕೈಗೊಟ್ಟಿದೆ ರಾತ್ರಿ ; ರಾತ್ರಿಗೆ ಒಪ್ಪವಿಟ್ಟಿದೆ ಹುಣ್ಣಿಮೆ. ಹಾಗೆಂದ ಮೇಲೆ ಕೇಳುವುದೇನು ? ಸೂರ್ಯನು ಮುಳುಗಿದರೂ ಕತ್ತಲೆಗೆ ತನ್ನ ಕರಿದಲೆಯನ್ನೆತ್ತಲಿಕ್ಕೆ ಎಡೆಯೆ ಒದಗಲಿಲ್ಲ. ಚಪ್ಪರಕ್ಕೆ ಕಟ್ಟಿದ ಮಡಿಬಟ್ಟೆಯ ಮೇಲ್ಗಾಪಿನಂತೆ ಬಾನನ್ನು ಮುಸುಕಿದೆ ಬಿಳಿಮುಗಿಲು. ಎಡೆಎಡೆಯ ಬಿಡುಬಿಡುಗಳಲ್ಲಿ ಕತ್ತಿಸಿದ ವಿದ್ಯುದ್ದೀಪಗಳಂತಿರುವ ಚುಕ್ಕಿಗಳು. ತಂತಿಯಿಂದ ಸೆಳೆಯುತ್ತಿರುವ ಹೆಜ್ಜೊಡರೆಂಬಂತೆ ಚಂದ್ರಮಂಡಲವು ಪಡುಗಡೆಗೆ ಸರಿಯುತ್ತಾ ಕಡಲಿನಿಂದ ಒಂದೆರಡು ಮಾರು ಎತ್ತರದಲ್ಲಿ ನೇತಾಡುತ್ತಿದೆ. ಬೆಳ್ಮುಗಿಲು ಅತ್ತಿತ್ತ ಸರಿವಾಗ ಮರೆಗೊಳ್ಳುವ ನಕ್ಷತ್ರಗಳು, ಆರಿದ ವಿದ್ಯುದ್ದೀಪಿಕೆಗಳನ್ನು ಹುರುಪುಗೊಳಿಸಲಿಕ್ಕಾಗಿ ಒಳಗೊಯ್ಯುವಂತೆ ತೋರುತ್ತಿದ್ದುವು. ಆಕಾಶದಿಂದ ನೆಲಮುಟ್ಟದವರೆಗೆ ಎತ್ತೆತ್ತಲೂ ಹಾಲೆರೆದಂತೆ ಹರಿದು ಪಸರಿಸಿದ ತಿಂಗಳ ಬೆಳಕೇ ಬೆಳಕು. ಹೌದು, ಧೃತಿಗೆಡದೆ ತಿಂಗಳವರೆಗಾದರೂ ಹೆಣಗಿದ ಕೈಯುಲ್ಲವೇ ಅದರದು ? ಅದರಿಂದಲೇ ಎನ್ನಬಹುದು ; " ತಿಂಗಳು " ಎಂದೆನ್ನಿಸಿ ಸ್ವಾತಂತ್ರ್ಯವನ್ನನುಭವಿಸುವುದು. ಗಿಡ ಮರ ಬಳ್ಳಿಗಳೆಲ್ಲ ಮಂಜಿನ ಕಾರಂಜಿಯಲ್ಲಿ ಮಿಂದು ಪರಿಶುದ್ಧವಾಗಿವೆ. ಬೆಳ್ಳಿಯ ಅರಳೆಲೆ ಕಿಕ್ಕಿರಿದ ತೇರಿನಂತೆ ತಂಗಾಳಿಗೆ ಒಲೆದಾಡುವ ಎಲೆಗಳಿಂದ ಮಿರುಗುವ ಅರಳಿಯ ಮರವೊಂದು ಕಳಕಳಿಸುತ್ತಿದೆ. ಆದರೇನು ! ಈ ಪರಿಶುದ್ಧತೆಯ ಆಡಂಬರವೆಲ್ಲ ಮೇಲಿಂದ ಮೇಲೆ ಮಾತ್ರವೆ ; ಕಳಂಜಿಮಲೆಯ ಕಾಡಿನೊಳಗೆ ಮಾತ್ರ ಯಾವಾಗಲೂ ಕಣ್ಣುಗುತ್ತಿದ್ದರೂ

ಕಾಣದ ಕಗ್ಗತ್ತಲೆ, ರಾಜನ ಕಟ್ಟಾಣತಿಯಿಂದ ಊರು ಬಿಟ್ಟೋಡಿದ ದಂಗೆಗಾರರಂತೆ ನೆಲೆಯಾಗಿತ್ತು. "ನಗೆ ಮೋರೆಯಲ್ಲಿ, ದಗೆ ಮನಸ್ಸಿನಲ್ಲಿ" ಎಂಬ ದುಷ್ಟರಿಗೆ ಗುರುವಾಗಿತ್ತು ಈ ಮಲೆಯೆಂದರೆ ಹೆಚ್ಚಾಗದು.

—ಮುಳಿಯ ತಿಮ್ಮಪ್ಪಯ್ಯ.

೧. ಕಳಂಜಿಮಲೆ ಎಂತಹ ಸೀಮೆಯಲ್ಲಿ ನೆಲೆಸಿದೆ? ೨. ಕಡಲಕರೆಯಿಂದ ಮೂಡಣ ದಿಕ್ಕಿಗೆ ತಿರುಗಿದರೆ ಕಾಣುವ ನೋಟವನ್ನು ನಿಮ್ಮ ಮಾತಿನಲ್ಲಿ ಹೇಳಿರಿ. ೩. ಬೆಳುದಿಂಗಳಲ್ಲಿ ಯಾವ ಯಾವ ವಸ್ತುಗಳು ಹೇಗೆ ಹೇಗೆ ಶೋಭಿಸುತ್ತಿದ್ದವು? ೪. (ಅ) ಮಲಯಾಚಲದ ಪಿಳ್ಳೆಗಳು ಸ್ತಬ್ಧವೇಕಾಗಿವೆ? (ಆ) ಕಳಂಜಿಮಲೆಗೆ ತಾಯ್ಮೊಲೆ ಎಂದು ಇನ್ನೊಂದು ಹೆಸರನ್ನು ಸೂಚಿಸಲಾಗಿದೆ. ಅದು ಹೇಗೆ ಯೋಗ್ಯವಾಗಬಲ್ಲದು? (ಇ) ಪರ್ವತಗಳ ಅಡಿಯಲ್ಲಿ ಬಂದು ಅಪ್ಪಳಿಸುವ ತೆರೆಗಳ ಇಂಗಿತವೇನಿರಬಹುದೆಂದು ಲೇಖಕರು ಊಹಿಸಿದ್ದಾರೆ? ೫. ಬೆಳುದಿಂಗಳಲ್ಲಿ ಕಂಡ ಒಂದು ನೋಟವನ್ನು ವರ್ಣಿಸಿರಿ.

## ೪೦. ಪ್ರಹ್ಲಾದನಿಗೆ ಪೀಡೆ

[ಸುಮಾರು ೧೫೩೦ ರಲ್ಲಿ ಜೀವಿಸಿದ್ದ ಚಾಟು ವಿಠಲನಾಥ ಕವಿ ಕನ್ನಡದಲ್ಲಿ ಬರೆದ ಭಾಗವತದಿಂದ ಈ ಭಾಗವನ್ನು ತೆಗೆದುಕೊಂಡಿದೆ. ವಿಷ್ಣುವಿನ ಮಹಿಮೆಯನ್ನೂ ಆತನ ಲೀಲೆಗಳನ್ನೂ ಬಣ್ಣಿಸುವದೇ ಭಾಗವತದ ವಿಷಯವು. ಹಿರಣ್ಯಕಶಿಪುವಿನ ಮಗ ಪ್ರಹ್ಲಾದನು ತನ್ನ ತಂದೆಯ ಮಾತನ್ನು ಉಲ್ಲಂಘಿಸಿ ವಿಷ್ಣುವಿನ ಸ್ತುತಿಯನ್ನೇ ಮಾಡುವ ಹಟ ಹಿಡಿದಾಗ ತಂದೆ ಆತನನ್ನು ಪರಿಪರಿಯಾಗಿ ಪೀಡಿಸಿದ ಕಥಾಭಾಗ ಇಲ್ಲಿ ಬಂದಿದೆ.]

"ನೂಕಿವನನೂರಿಂದ ಹೊರಗವಿ-
ವೇಕಿಯನು, ಮಗನಲ್ಲ, ಹರಿ ಹಗೆ-
ಯೇಕೆ ತಾನೇಕಲ್ಲದಿದ್ದೊಡೆ ನೆನೆವನಿವನೇಕೆ? ॥

ಈ ಕುಠಾರನ ಕೊಲೆಗೆ ನೀವ್ನಿ-
ರ್ವ್ಯಾಕುಲರು ಮನವಳುಕದಿರಿ, ನೀ-
ವೀಕುಹಕನನು ಕೊಲುವುದೇ ಭಲ ನಿಮಗೆ ಕೇಳಿ"ಂದ. ‖ ೧ ‖

" ತಂದೆ ತಾಯೊಡಹುಟ್ಟಿದರನೀ-
ಮಂದಮತಿ ನೆರೆತೊರೆದು, ತಂದೆಯ
ಕೊಂದವಂಗಿಂತಿದೆಯ ಕೊಯ್ವನು ಲೆಂಕನೆಂದೆನಿಸಿ ; ‖
ಕೊಂದರಿವನನು ಕಾವರಾರಿದ-
ನಿಂದು ನೋಳ್ಪೆನೆ"ನುತ್ತ ಕೋಪದ-
ಲಂದು ಗರ್ಜಿಸಿ ಗಜರುತಿದ್ದನು ಗದ್ದುಗೆಯ ಹೊಡೆದು. ‖ ೨ ‖

ಎನಲು ಕವಿದರು ಕಾಳರಕ್ಕಸ-
ರನಲಗಣ್ಣಿನ ಬಿಗಿದ ಹುಬ್ಬಿನ
ಮೊನೆಮುಸುಡ ಸಿಗುರೆದ್ದ ದಾಡೆಯ ಕೊನೆಯ ಕೆಂಗಿಡಿಯ ‖
ಕೊನೆಮುರಿದ ಮೀಸೆಗಳ ಕೇಸರಿ-
ಯೆನಲು ಕೆದರಿದ ಕೇಶಬಂಧದ
ಘನಭಟರು ಮುಸುಕಿದರು ಶಿಶುವನು ಕೋಟಿ ಸಂಖ್ಯೆಯಲಿ.‖ ೩ ‖

ಕೊಲ್ಲು, ಕಡಿ, ತಿವಿ, ಸೀಳು, ಸಬಳದ-
ಲಳ್ಳೆಯನು ಹೊಯ್ದೆತ್ತು, ಕರುಳನು
ಮೆಲ್ಲೆನುತ ಶೂಲದಲಿಯಿರಿದರು ಹೊಯ್ದು ಸುರಗಿಯಲಿ ‖
ಬಲ್ಲ ಕೈದುಗಳಿಂದ ತಮತಮ-
ಗೆಲ್ಲರಾಯೆಂದಿರಿಯಲಪ್ರತಿ-
ಮಲ್ಲನಿದ್ದನು ವಿಶ್ವತೋಮುಖ ವಿಷ್ಣು ತಾನಾಗಿ. ‖ ೪ ‖

ನೆರೆ ಜಗನ್ಮಯನೆನಿಪ ವಿಷ್ಣುವ-
ನರಿವಿನಲಿ ಸೆರೆವಿಡಿದು ಬೇರೊಂ-
ದರಲಿ ಮನವನು ಮೇಳವಿಸದೇಕಾತ್ಮಭಾವದಲಿ. ‖

ಉರುವ ವೈಷ್ಣವನಿರಲು ರಕ್ಕಸ–
ರಿರಿದರೇನೋವೊಡಲ ರೋಮದ
ಸೆರಗು ಹರಿಯದು ಮುರಿದು ಬಿದ್ದವು ಕೈದುಗಳು ಧರೆಗೆ. ॥ ೫ ॥

ಏನಿದದ್ಭುತವೆನುತಲುರೆ ನಿಜ–
ಸೂನುವನು ನೋಡುತ್ತ ಕಡುದು–
ಮ್ಮಾನದಲಿ ಶಂಕಿಸುತ ತೂಗಿದನಡಿಗಡಿಗೆ ಸಿರವ ॥
ಹಾನಿಯೇ ಕೈದುಗಳಿಗಕಟಕ–
ಟೀನ ಮಾಡಿದಡೀಹಸುಳೆಯಲಿ
ಮಾನಭಂಗವಿದೇಕೆ ವೀರರಿಗೆ "ಂದನಸುರೇಂದ್ರ. ॥ ೬ ॥

" ಪುತ್ರನಲ್ಲಿವ, ತನಗೆ ಕಾರಣ–
ಮೃತ್ಯು, ಸಂಶಯವಿಲ್ಲ, ಬಾಲಕ–
ನೆತ್ತಲೀಶಸ್ತ್ರಾಸ್ತ್ರನಿಕರದ ಭಂಗ ತಾನೆತ್ತ ! ॥
ಮೃತ್ಯುವಿಗೆ ಕೊಲಲರಿದು ತನ್ನನು,
ಮತ್ತುಳಿದ ಭಯವೇಕೆ ಕಮಲಜ–
ನಿತ್ತವರವುಂಟೆಲವೊ, ದಿಕ್ಕರಿಗಳನು ಕವಿಸೆ"ಂದ. ॥ ೭ ॥

ಮತ್ತಗಜ ನೂಕಿದವು, ಧರಣಿಯ–
ನೆತ್ತಿ ಬಿಸುಡುವವೋಲು ಸುಂಡಿಲ
ಸುತ್ತಿ ಸೆಳೆದವು, ಸಕಲವೈಷ್ಣವಮೌಳಿಮಾಣಿಕವ. ॥
ಸತ್ಯನಿಧಿಯನು ತೆಗೆಯಲಾರದೆ
ನೆತ್ತರನು ಕಾರುತ್ತೆ ಗಜಘಟೆ
ಮುಕ್ತಿಮಾರ್ಗವ ಸೂರೆಗೊಂಡವು ಭೂಪಕೇಳೆಂದ. ॥ ೮ ॥

ಮತ್ತೆ ಕೈವೀಸಿದರೆ ಕವಿದವು
ಮೊತ್ತದುರಗೇಂದ್ರಂಗಳಘಕುಲ–
ಮೃತ್ಯುವನು; ಸುತ್ತಿದವು ದಾಡೆಯನೂರಿ ಮರ್ಮವನು. ॥

ಎತ್ತಲೇನೆಂದರಿಯನೀಪುರು-
ಷೋತ್ತಮಧ್ಯಾನಾವೃತದ ದೃಢ-
ಚಿತ್ತನಿದ್ದನು ಭೋಗಿಭೂಷಣನಂತೆ ಕೇಳೆಂದ. ॥ ೯ ॥

ತಿರುಗಿ ಗುರುವಿನ ಮೊಗವ ನೋಡಲು
ಕರಸಿದರು ಮಾಂತ್ರಿಕರನೆತ್ತಿದ
ಭರದಲಭಿಚಾರವನು ನಿರ್ಮಿಸಿ ಕೃತ್ಯೆಯನು ಕಳುಹಿ ॥
ಕರವ ಮುಗಿದೆರಗಿತ್ತು ವೈಷ್ಣವ-
ಚರಣದಲಿ ತಾನಂಜಿ ದೈತ್ಯರ-
ನುರುಹಿ ಸುಡುತಿರೆ ಕಾಯ್ದ ತಾ ಪ್ರಹ್ಲಾದನಾ ಜನವ. ॥ ೧೦ ॥

—ಚಾಟು ವಿಠಲನಾಥ.

೧. ಪ್ರಹ್ಲಾದನ ತಂದೆ ಪ್ರಹ್ಲಾದನನ್ನು ಕೊಲಿಸಲು ಮನಸ್ಸು ಮಾಡಿದನೇಕೆ? ೨. ಪ್ರಹ್ಲಾದನನ್ನು ಕೊಲಿಸಲು ಮಾಡಿದ ಪ್ರಯತ್ನಗಳಾವವು? ಅವು ಏಕೆ ನಿಷ್ಫಲವಾದವು? ೩. ಪ್ರಹ್ಲಾದನು ನಿಜವಾಗಿ ದೇವಭಕ್ತನೆಂದು ಯಾವ ಮಾತುಗಳಿಂದ ಸಿದ್ಧಮಾಡುವಿರಿ?

## ೪೧. ಶಾಂತಕವಿ

[ ಕನ್ನಡದ ಏಳಿಗೆಗಾಗಿ ತಮ್ಮ ತನುಮನೋಧನಗಳನ್ನು ಅರ್ಪಿಸಿದ, ಉತ್ತರ ಕರ್ನಾಟಕದಲ್ಲಿ ಅರ್ವಾಚೀನ ಕವಿಗಳಲ್ಲಿ ಮೊದಲಿಗರೆನಿಸಿದ ಶಾಂತಕವಿ ( ಬಾಳಾಚಾರ್ಯ ಸಕ್ಕರಿ ) ಗಳ ಪರಿಚಯು ಈ ಲೇಖನದಲ್ಲಿದೆ. ಇದನ್ನು ಮುದವೀಡು ಕೃಷ್ಣರಾಯರು ಬರೆದಿರುವರು. ಲೇಖಕರ ಪರಿಚಯವನ್ನು ೧೯ ನೆಯ ಪಾಠದಲ್ಲಿ ನೋಡಿರಿ. ]

ಶಾಂತಕವಿಗಳ ಪರಿಚಯ ಮೊದಲು ನನಗಾದದ್ದು ಅವರ ನಾಟಕಗಳ ಮುಖಾಂತರ. ಧಾರವಾಡದ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ,

ಅಂದರೆ ೧೮೬೭ ರಲ್ಲಿ. ಕಾಮನಹಬ್ಬದ ದಿವಸಗಳಲ್ಲಿ ನಾಟಕವಾಡು-
ತ್ತಿದ್ದೆವು. ನಾಲ್ಕಾರು ವರ್ಷ ಹೀಗೆ ನಾಟಕವಾಡುವಾಗ ನಮಗೆ ಶಾಂತ-
ಕವಿಗಳೇ ನಾಟಕಕರ್ತೃಗಳು. ಚಂದ್ರಾವಳೀ ಚರಿತ್ರೆ, ವಿರಾಟಪರ್ವ,
ಕನಕಾಂಗಿ ಕಲ್ಯಾಣ ಮೊದಲಾದ ಶಾಂತಕವಿಗಳ ಹತ್ತಿಪ್ಪತ್ತು ನಾಟಕ-



ಗಳು ಆಗಲೇ ಮುದ್ರಿತವಾಗಿ ಪ್ರಸಿದ್ಧವಾಗಿದ್ದವು. ಇವುಗಳೊಳಗಿನ
ಯಾವುದಾದರೂ ಒಂದನ್ನು ಆರಿಸಿಕೊಂಡು, ಹತ್ತೆಂಟು ದಿವಸ ಅಭ್ಯಾಸ
ಮಾಡಿ, ಕಾಮನ ಹಂದರದಲ್ಲಿ ಬೈಲಾಟಗಳಂತೆ ಆಡುತ್ತಿದ್ದೆವು. ಹಳ್ಳಿಯ
ಶಾಲೆಗಳಲ್ಲಿ ಉಪಾಧ್ಯಾಯರಾಗಿದ್ದ ಶಾಂತಕವಿಗಳು ವಿನೋದಕ್ಕಾಗಿ

ತಾವೇ ಬರೆದುಕೊಟ್ಟ ನಾಟಕಗಳನ್ನು ಅಲ್ಲಿಯ ಜನರಿಂದಲೂ ಹೀಗೆಯೇ ಆಡಿಸುತ್ತಿದ್ದರು. ಕಳೆದ ಶತಮಾನದ ಕೊನೆಯ ಎರಡು ಮೂರು ದಶಕಗಳಲ್ಲಿ ಈ ಭಾಗದಲ್ಲೆಲ್ಲ ಅತ್ಯಂತ ಪ್ರಸಿದ್ಧವಾಗಿದ್ದ ಹಲಸಿಗೆಯ ಮತ್ತು ಗದುಗಿನ ನಾಟಕಮಂಡಲಿಗಳು ಶಾಂತಕವಿಗಳು ಬರೆದ ನಾಟಕ-ಗಳನ್ನು ಒಳ್ಳೆಯ ಜನರ ಮನೋರಂಜನವಾಗುವಂತೆ ಪ್ರಯೋಗಿಸಿ, ವಿಪುಲವಾದ ಧನವನ್ನೂ ಶ್ರೇಯಸ್ಸನ್ನೂ ಸಂಪಾದಿಸಿದ್ದುಂಟು. ತಕ್ಕ-ಮಟ್ಟಿಗೆ ಸಂಸ್ಕಾರಹೊಂದಿದ ಬೈಲಾಟಗಳ ಮಾದರಿಯ ಆಗಿನ ಕಾಲದ ಈ ನಾಟಕಗಳ ಸದ್ದು ಈಗ ಅಡಗಿರುವುದಾದರೂ ಇತ್ತಕಡೆಗೆ ನಶಿಸುತ್ತ ನಡೆದಿದ್ದ ಕನ್ನಡ ಭಾಷೆಯ ವರ್ಚಸ್ವವನ್ನೂ ಕನ್ನಡ ಸಂಸ್ಕೃತಿಯ ಅವಶೇಷವನ್ನೂ ಕಾಯ್ದುಹಿಡಿದು ಬದುಕಿಸಲು ಶಾಂತಕವಿಗಳ ಈ ನಾಟಕಗಳು ಮಾಡಿದ ಮಹತ್ತಮವಾದ ಸೇವೆ ಚಿರಸ್ಮರಣೀಯವಾಗಿದೆ.

ಪಂಡಿತ ಪಾಮರರಿಗೆಲ್ಲ ಒಂದೇ ಬಗೆಯ ಸಮಾರಾಧನೆಯಾಗು-ವಂತೆ ಕನ್ನಡನಾಟಕಗಳ ರಚನೆಯನ್ನು ಕೈಕೊಂಡ ಶಾಂತಕವಿಗಳು ಸುಶಿಕ್ಷಿತರೂ ಪ್ರೌಢರೂ ಎಂದೆನಿಸುವ ರಸಿಕರು ಕೂಡ ತಲೆದೂಗು-ವಂತಹ ಮೇಲ್ತರಗತಿಯ ಕಾವ್ಯಗಳನ್ನೂ ನಿರ್ಮಾಣಮಾಡಿದ್ದಾರೆಂಬು-ದನ್ನೂ ನಾವು ಮರೆಯುವಂತಿಲ್ಲ. ಸಂಸ್ಕೃತ ಭಾಷೆಗೇ ಅಲಂಕಾರ-ಪ್ರಾಯವೆಂದು ಗಣಿಸಲ್ಪಟ್ಟಿರುವ ಜಯದೇವನ ಗೀತಗೋವಿಂದವನ್ನು 'ವಿರಹತರಂಗ' ಎಂಬ ಹೆಸರಿನಿಂದ ವಾರ್ಧಕ ಷಟ್ಪದಿಯಲ್ಲಿ ಇವರು ರಚಿಸಿರುವರು. ಇದು ೧೮೮೫ ರಲ್ಲಿಯೇ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿದೆ. ಶಾಂತಕವಿಗಳ ನಾಟಕಗಳನ್ನು ಆಟಕ್ಕೆಂದು ಓದಿದ ನನಗೆ ಕನ್ನಡ ಕಾವ್ಯಗಳನ್ನು ತಿಳಿದ ಮಟ್ಟಿಗೆ ಓದಿಯೇಬಿಡಬೇಕೆಂಬ ಹುಚ್ಚು ಹಿಡಿಸಿದ್ದು ಇದೇ 'ವಿರಹತರಂಗ.' ಕಾಲಿದಾಸನ 'ಮೇಘದೂತ'ವನ್ನು ಶಾಂತ-ಕವಿಗಳು ಕನ್ನಡಿಸಿದ್ದಾರೆ. ೧೮೯೫ರ ಸುಮಾರಿಗೆ ಇದು ಮುದ್ರಿತ-ವಾಗಿದೆ. 'ತನ್ನ ವಿರಾಮಕಾಲದಲ್ಲಿ ಇಂಥ ರಸವತ್ತಾದ ಉತ್ಕೃಷ್ಟ ಕಾವ್ಯವನ್ನು ಬರೆದು ಕವಿ ಶಬ್ದಕ್ಕೆ ಸಾರ್ಥಕ್ಯವನ್ನು ತರಲು ಸಮರ್ಥನಾದ ಒಬ್ಬನಾದರೂ ಕವಿ ಕನ್ನಡಿಗರಲ್ಲಿ ಇಂದು ಇರುವನೆಂಬುದು ಸಾನಂದ ಕೌತುಕದ ಮಾತಾಗಿದೆ,' ಎಂದು ಇತ್ತಕಡೆಯ ಸುಪ್ರಸಿದ್ಧ ದೊಡ್ಡ

ಮನುಷ್ಯರೊಬ್ಬರು ಈ ಮೇಘದೂತದ ವಿಷಯವಾಗಿ ಹೇಳಿದ್ದುಂಟು. 'ಶ್ರೀಕೃಷ್ಣ ತುಲಾಭಾರ'ವೆಂಬ ಕಾವ್ಯವೂ ವಿರಹತರಂಗ ಮೇಘ-ದೂತಗಳಂತೆಯೇ ವಾರ್ಧಕ ಷಟ್ಪದಿಯಲ್ಲಿ ಶಾಂತಕವಿಗಳಿಂದ ಅವರ ಪರಿಣತಾವಸ್ಥೆಯಲ್ಲಿ ಹುಟ್ಟಿದ್ದುಂಟು. ಗಜೇಂದ್ರಮೋಕ್ಷ, ಸ್ಯಮಂತ-ಕಾಖ್ಯಾನ, ರಾವಣವೇದವತಿ, ಶ್ರೀಮತೀ ಪರಿಣಯ, ಶ್ರೀವಿದ್ಯಾ-ರಣ್ಯರ ಚರಿತ್ರೆ ಮೊದಲಾದ ಹೊಸಗನ್ನಡ 'ಚಂಪೂ' ಕಾವ್ಯಗಳು ಕೀರ್ತನರೂಪವಾಗಿ ನಿರೂಪಿಸುವದಕ್ಕೆ ಅನುಕೂಲವಾಗುವಂತೆ ಇವರಿಂದ ರಚಿಸಲಾಗಿವೆ. ವಿನಾಯಕನ ಹಬ್ಬ, ನವರಾತ್ರಿಯ ಮಹೋತ್ಸವ, ದೀಪಾವಳಿಯ ಉಲ್ಲಾಸದ ದಿನಗಳು, ಮೊದಲಾದ ಪ್ರಸಂಗಗಳಲ್ಲಿ ಶಾಂತಕವಿಗಳೇ ಇವುಗಳೊಳಗಿನ ಯಾವುದಾದರೂ ಕೀರ್ತನವನ್ನು ಮಾಡುವ ರೂಢಿಯಿತ್ತು. ಆಗ ತಮ್ಮ ಪ್ರತಿಭೆಯಿಂದಲೂ ರಸಭರಿತ-ವಾಣಿಯಿಂದಲೂ ಭಕ್ತಿಯ ಉದ್ರೇಕದಿಂದಲೂ ಜನಸಂದಣಿಯನ್ನೆಲ್ಲ ತಲ್ಲೀನಗೊಳಿಸಿ ಮುಗ್ಧಮಾಡಿಬಿಡುತ್ತಿದ್ದುದನ್ನು ನಾನು ಕಣ್ಣಾರೆ ಕಂಡಿದ್ದೇನೆ; ಈ ಭಾವನೆಗಳನ್ನೆಲ್ಲ ಮನದಣಿಯೆ ಅನುಭೋಗಿಸಿಯೂ ಇದ್ದೇನೆ.

ನಾಟಕ ಕಾವ್ಯ ಕೀರ್ತನ ಕ್ಷೇತ್ರಗಳಲ್ಲಿ ಯದೃಚ್ಛೆಯಿಂದ ಪ್ರವಹಿ-ಸಿದ ಶಾಂತಕವಿಗಳ ಕಾವ್ಯಸ್ಫೂರ್ತಿ ಸುಭಾಷಿತಗಳೂ ಬಿಡಿಪ್ರಸಂಗಗಳೂ ಕಾವ್ಯಮಯವರ್ಣನೆಗಳೂ ನಾನಾಭಿನಯಕುಶಲ ನಟನರ್ತಕಿಯರು ತಮ್ಮ ವಿಶಿಷ್ಟಕಲೆಗಳನ್ನು ಲಗ್ನಮಂಟಪ ಕಾಮನಹಂದರಗಳಲ್ಲಿ ಅಭಿ-ವ್ಯಕ್ತಪಡಿಸುತ್ತಾ ಹಾಡುವ ಪದಪದ್ಯಾದಿಗಳೂ ಮೊದಲಾದ ವಿವಿಧ ಮಾರ್ಗಗಳಿಂದ ಹೊರಬಿದ್ದು ಹೆಸರುಪಡೆದದ್ದುಂಟು. ಟ್ರೇನಿಂಗ್ ಕಾಲೇಜಿನಲ್ಲಿ ಶಿಕ್ಷಣಹೊಂದುತ್ತಿದ್ದಾಗಿನಿಂದಲೂ ಹೊರಹೊಮ್ಮಿ ಹರಿ-ಬಿದ್ದ ಇವರ ಕಾವ್ಯಪ್ರವಾಹ ಬರುಬರುತ್ತ ದೊಡ್ಡ ನದಿಯಾಗಿ, ಎಡೆಸಿಕ್ಕ ಕಡೆಗೆಲ್ಲ ಸ್ವೇಚ್ಛೆಯಿಂದ ನಿರರ್ಗಲವಾಗಿ ಧುಮುಕುತ್ತ, ೫೦-೬೦ ವರ್ಷಗಳ ವರೆಗೆ ಇತ್ತಕಡೆಗೆಲ್ಲ ಅಖಂಡ ಪ್ರವಾಹವಾಗಿ ಹರಿದು, ಉತ್ತರ ಕರ್ನಾಟಕದ ಜನಜೀವನವನ್ನೇ ರಸಾರ್ದ್ರವನ್ನಾಗಿ ಮಾಡಿ ತಣಿಸಿತು; ಈಗಲೂ ನನ್ನಂಥ ಹಳಬರನ್ನು ತನ್ನ ಸಚೇತನತ್ವದಿಂದ ತಣಿಸುತ್ತಿದೆ.

ಹೀಗೆ ಹೊಸಗನ್ನಡನಾಡಿನ ಸಾಂಪ್ರದಾಯಿಕ ಕವಿಶ್ರೇಣಿಯಲ್ಲಿ ಶಾಂತಕವಿಗಳು ಬಹು ಉನ್ನತಸ್ಥಾನವನ್ನು ಆಕ್ರಮಿಸಿರುವದು ಮಾತ್ರ-ವಲ್ಲದೆ, ಇಂದು ಕನ್ನಡನಾಡಿಗೆಲ್ಲ ಸರ್ವಸ್ವವೇ ಆಗಿ ನಿಂತುಕೊಂಡಿರುವ 'ಕನ್ನಡತನ'ದ ಕೆಚ್ಚು ಹಾಗೂ ಅದರ ಪ್ರಭಾವದಿಂದ ಉಂಟಾಗುವ ಇಡಿ ಕನ್ನಡನಾಡಿನ ದಿವ್ಯದೃಷ್ಟಿ ಇವುಗಳು ಶಾಂತಕವಿಗಳ ಪ್ರತಿಯೊಂದು ಕೃತಿಯಲ್ಲಿಯೂ ಆವಿರ್ಭವಿಸಿರುವುದು ಇಂದಿನ ಕನ್ನಡ ಜನಾಂಗಕ್ಕೇ ಮಹತ್ವದ ಮಾತಾಗಿದೆ. ವಿರಹತರಂಗದಲ್ಲಿ 'ಗೀತಗೋವಿಂದ-ವೆಂಬುವ ಕೃತಿಯ ಸುರುಚಿಯಂ ಕನ್ನಡಿಗರೆಲ್ಲ ಸವಿಯಲ್ಕೆ ಕನ್ನಡಿ-ಸುನೆನು,' ಎಂದು ಮೊಳೆದೋರಿದ ಶಾಂತಕವಿಗಳ 'ಕನ್ನಡತನ'ವು ಅವರ ಕೊನೆಯ ಕೃತಿಯಾದ ಶ್ರೀಕೃಷ್ಣತುಲಾಭಾರದಲ್ಲಿ 'ಕನ್ನಡದ ಪೇಟಿ ನೃಪತುಂಗನಿದಕ್ಕೆ ಸೆಟ್ಟಿ' ಎಂಬುದಾಗಿ ಹಿಂದಿನ ಹಿರಿಯನಾಡಾದ ಇಡಿಯ ಕನ್ನಡದ ಅಂದವಾದ ಚಿತ್ರವನ್ನು ಇಂದಿನವರ ಕಣ್ಣಮುಂದೆ ತಂದುನಿಲ್ಲಿಸುವ ಮಟ್ಟಿಗೆ ಬೇರುಬಿಟ್ಟು ಬೆಳೆದು, ಹೆಮ್ಮರವಾಗಿ ನಿಂತಿರುವದು ಕಂಡುಬರುತ್ತದೆ. ವಿದ್ಯಾರಣ್ಯರ ಚರಿತ್ರಕೀರ್ತನೆಯಂತೂ ಈ ಮಹಾವೃಕ್ಷದ ದಿವ್ಯವಾದ, ಮನೋಹರವಾದ, ರಸಪರಿಪೂರ್ಣವಾದ, ರುಚಿಕರವಾದ, ಹಿತಕಾರಕವಾದ ಅಮೃತಫಲವೇ ಆಗಿದೆ. 'ನಿನ್ನ ವಸ್ತುವನು ಬಣ್ಣಿಸುವೆನು ನಾನಿನ್ನಾದರೂ ತಿಳಿ ಕನ್ನಡಿಗ' ಎಂಬ ಜೀವಾಳದ ಮಾತು— ಕರುಳು ಕರಗಿಸುವ ನುಡಿ, ಕನ್ನಡಿಗರ ಕರ್ಣ-ಕುಹರಗಳಲ್ಲಿ ಹೊಕ್ಕು ಅಂತರಂಗವನ್ನು ಕದಡಿ, ಅಲ್ಲಿಯ ಸುಷುಪ್ತ ಕನ್ನಡತನವನ್ನು ಎಚ್ಚರಿಸಿ, ಆ ಎಚ್ಚರದಿಂದುಂಟಾಗುವ ಜ್ಞಾನ-ದೃಷ್ಟಿಯ ಮುಂದೆ ಕನ್ನಡಮ್ಮನ ತೇಜೋಮಯವಾದ ವಿಶ್ವರೂಪವನ್ನು ತಂದು ನಿಲ್ಲಿಸಿ, ಆ ಕಕ್ಕುಲತೆಯ ತಾಯಿಯನ್ನು 'ರಕ್ಷಿಸು ಕರ್ನಾಟಕ ದೇವಿ' ಎಂಬುದಾಗಿ ಸ್ತವಿಸಿ, ಅವಳ ಕೃಪಾಪ್ರಸಾದವನ್ನು ಅನನ್ಯ ಭಕ್ತಿಯಿಂದ ಯಾಚಿಸುವ ತನ್ಮಯತೆಯನ್ನು ಶ್ರೋತೃಗಳಲ್ಲಿ ಹುಟ್ಟಿಸುವ ಅದ್ಭುತ ಸಾಮರ್ಥ್ಯ ಇದರಲ್ಲಿರುವದನ್ನು ಇತ್ತಕಡೆಯವರೆಲ್ಲರೂ ಎಷ್ಟೋ ಸಾರೆ ಮನಗಂಡಿದ್ದಾರೆ. ಕನ್ನಡನುಡಿ, ಕನ್ನಡನಾಡು ಇವುಗಳ ಹೆಸರನ್ನು ಎತ್ತುವದು ಕೂಡ ಮಹಾಪರಾಧ, ಮಹತ್ಪಾಪ ಎಂದು

ಪರಿಗಣಿಸುವ ಮಟ್ಟಿನ ದುರ್ದಶೆಗೆ ಈಡಾಗಿದ್ದ ಈ ಉತ್ತರ ಕರ್ನಾಟಕದಲ್ಲಿ ಇಂದು ಕಾಣುವ ಚೈತನ್ಯ, ಓಜಸ್ಸು, ಹುಮ್ಮಸ್ಸುಗಳಿಗೆಲ್ಲ ಶಾಂತಕವಿಗಳ ಶ್ರೀ ವಿದ್ಯಾರಣ್ಯರ ಕೀರ್ತನೆ, ಅವರೇ ಮಾಡಿದ ಅದರ ಪ್ರಚಾರ ಇವುಗಳೇ ಮೂಲಕಾರಣವೆಂದು ಕನ್ನಡ ಜನಾಂಗವೇ ಕೃತಜ್ಞತೆಯಿಂದ ಒಪ್ಪಿಕೊಳ್ಳಬೇಕು.

—ಮುದವೀಡು ಕೃಷ್ಣರಾಯ.

೧. ಶಾಂತ ಕವಿಗಳ ಕಾವ್ಯ ನಾಟಕಾದಿಗಳು ಜನರಲ್ಲಿ ಹೇಗೆ ಹರಡಿದವೆಂದು ಲೇಖಕರು ತೋರಿಸಿರುವರು ? ೨. ಶಾಂತ ಕವಿಗಳಿಗೆ ಹೊಸಗನ್ನಡದ ಕುಲಗುರು ಎಂಬ ಗೌರವವು ಸಲ್ಲುವದೆಂಬದನ್ನು ಹೇಗೆ ಸಿದ್ಧ ಮಾಡುವಿರಿ ? ೩. ಪರಿಚಯು, ಅವಶೇಷ, ದಶಕ, ತಲೆದೂಗು, ಹುಚ್ಚು ಹಿಡಿಸು, ಹೊರಹೊಮ್ಮು ಇವುಗಳ ಅರ್ಥ ಹೇಳಿ ಅದು ಸ್ಪಷ್ಟವಾಗುವಂಥ ಒಂದೊಂದು ವಾಕ್ಯವನ್ನು ರಚಿಸಿ ಬರೆಯಿರಿ. ೪. " ನಿನ್ನ ವಸ್ತುವನ್ನು.... ಮನಗಂಡಿದ್ದಾರೆ. " ( ಪು. ೧೮೭ ಸಾ. ೧೬ ) ಈ ವಾಕ್ಯದ ಅರ್ಥವು ಸ್ಪಷ್ಟವಾಗುವಂತೆ ಸಣ್ಣ ಸಣ್ಣ ವಾಕ್ಯಗಳಲ್ಲಿ ವಿಸ್ತರಿಸಿ ಬರೆಯಿರಿ.

## ೪೨. ದುರ್ಯೋಧನಾಭಿಮಾನ

[ ರನ್ನಕವಿಯ 'ಗದಾಯುದ್ಧ' ಎಂಬ ಚಂಪೂಕಾವ್ಯದಿಂದ ಈ ಭಾಗವನ್ನು ತೆಗೆದುಕೊಂಡಿದೆ. ರನ್ನಕವಿ ಮುಧೋಳದವನು; ಹತ್ತನೆಯ ಶತಮಾನದಲ್ಲಿ 'ಗದಾಯುದ್ಧ' ಕಾವ್ಯವನ್ನು ರಚಿಸಿದನು. ವೀರರಸಪ್ರಧಾನವಾದ 'ಗದಾಯುದ್ಧ' ಹಾಗೂ ಜೈನಧರ್ಮದ ಪುರಾಣವಾದ 'ಅಜಿತನಾಥಪುರಾಣ' ಎಂಬ ಗ್ರಂಥಗಳನ್ನು ಬರೆದ ಶ್ರೇಷ್ಠ ಕವಿಯಾಗಿದ್ದಾನೆ ಈತನು. ಈತನಿಗೆ ಕವಿಚಕ್ರವರ್ತಿ ಎಂಬ ಬಿರುದು ಇದೆ. ಕೌರವ ಪಾಂಡವರ ಯುದ್ಧದಲ್ಲಿ ದುರ್ಯೋಧನನು ತನ್ನ ಅಸಂಖ್ಯ ಸೇನೆಯನ್ನೂ ಸೇನಾನಾಯಕರನ್ನೂ ತಮ್ಮಂದಿರನ್ನೂ ಕಳೆದುಕೊಂಡಾಗ ಶರಶಯನದ ಮೇಲೆ ಇದ್ದ ಭೀಷ್ಮನ ಹತ್ತಿರ ಬಂದನು. ಆಗ ಭೀಷ್ಮನು ದುರ್ಯೋಧನನಿಗೆ

**ಪಾಂಡವರೊಡನೆ ಸಂಧಿ ಮಾಡಿಕೊಳ್ಳಲು ಉಪದೇಶಿಸಲು ಆತನು ತೋರಿದ ಅಭಿಮಾನವನ್ನು ಇಲ್ಲಿ ಕಾಣಬಹುದು. ಎಂತಹ ಕಷ್ಟದ ಸ್ಥಿತಿಯಲ್ಲಿಯೂ ಕೂಡ ದುರ್ಯೋಧನನು ತನ್ನ ಸ್ವಾಭಿಮಾನವನ್ನು, ಛಲವನ್ನು ಬಿಟ್ಟು- ಕೊಡದೆ ' ತೇಜೋಧನ ' ಎಂಬ ಕೀರ್ತಿಗೆ ಪಾತ್ರವಾಗಿದ್ದಾನೆ. ]**

ನಿಮಗೆ ಪೊಡೆಮಟ್ಟು ಪೋಪೀ- ।
ಸಮಕಟ್ಟಿಂ ಬಂದೆನಹಿತರೊಳ್ ಸಂಧಿಯನೇಂ ॥
ಸಮಕೊಳಿಸಲೆಂದು ಬಂದೆನೆ
ಸಮರದೊಳೆನಗಜ್ಜ ಪೇಳಿಮಾವುದು ಕಜ್ಜಂ ॥ ೧ ॥

ನೆಲಕಿರಿವೆನೆಂದು ಬಗೆದಿರೆ ?
ಚಲಕಿರಿವೆಂ ಪಾಂಡುಸುತರೊಳೀ ನೆಲನಿದು ಪಾ- ॥
ಳ್ನೆಲನೆನಗೆ ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ದಪೆನೇ ॥ ೨ ॥

ಕೂಡೆ ವಿರೋಧಿಯಂ ತರಿದು ತದ್ರಸಮಾಂಸದೆ ಭೂತಭೋಜನಂ ।
ಮಾಡದೆ ವೈರಿವಾರವನಿತಾವದನಾಂಬುರುಹಂಗಳಂ ಬೆಳ- ॥
ರ್ಮಾಡದೆ ಬಂಧುಶೋಕದೊಳೆ ಪೊರ್ದಿದ ಬಂಧುಜನಕ್ಕೆ ಸಂತಸಂ ।
ಮಾಡದೆ ಸಂಧಿಮಾಡುವನೆ ಪಾಂಡವರೊಳ್ ಫಣಿರಾಜಕೇತನಂ ॥ ೩ ॥

ಬಾಡಮನ್ನೈದನವರ್ಮ್ಮಂ
ಬೇಡಿದೊಡಾನಿತ್ತೆನಿಲ್ಲ ರಾಜ್ಯಾರ್ಧಮನಾಂ ॥
ಬೇಡಿಯುವರಲ್ಲಿಗಟ್ಟಿದೊ-
ಡೇಡಿಸಿ ರೋಡಿಸನೆ ಪವನನಂದನನೆನ್ನಂ ॥ ೪ ॥

ಎನ್ನಣುಗಾಳನೆನ್ನಣುಗದಮ್ಮನನಿಕ್ಕಿದ ಪಾರ್ಥಭೀಮರು- ।
ಳ್ಳನ್ನೆಗಮೊಲ್ಲೆನೆನ್ನೊಡಲೊಳೆನ್ನಸುವುಳ್ಳಿನಮಜ್ಜ ಸಂಧಿಯಂ ॥
ಮುನ್ನಮವಂದಿರಿರ್ಪ್ಪರುಮನಿಕ್ಕುವೆನಿಕ್ಕಿ ಬಳಿಕ್ಕ ಸಂಧಿಗೆ- ॥
ಯ್ವೆನ್ನೆಗಳ್ದಂತಕಾತ್ಮಜನೊಳೆನ್ನಳಲಾರಿದೊಡಾಗದೆಂಬೆನೇ ॥ ೫ ॥

ಎಂದು ಮತ್ತಮಿಂತೆಂದಂ–

ಪದುವಾಳಲ್ಕಣಮಾಗದೆಂತುಮವರೊಳ್ ಸಂಧಾನಮಂ ಮಾಡಲಾ– ।
ಗದು ನೀಮಿಲ್ಲದೆಯಜ್ಜ ಬಿಲ್ಲಗುರುಗಳ್ತಾಮಿಲ್ಲದಾಕರ್ಣನಿ– ॥
ಲ್ಲದೆ ದುಶ್ಶಾಸನನಿಲ್ಲದಾರೊಡನೆ ರಾಜ್ಯಂಗೆಯ್ವೆನಾರ್ಗೆನ್ನ ಸಂ– ।
ಪದಮಂ ತೋರುವೆನಾರ್ಗೆ ತೋರಿ ಮೆರೆವೆಂ ನಾನಾ
ವಿನೋದಂಗಳಂ ॥ ೬ ॥

ಪುಟ್ಟಿದ ನೂರ್ವರುಮೆನ್ನೊಡ–
ವುಟ್ಟಿದ ನೂರ್ವರುಮಿದಿರ್ಚಿ ಸತ್ತೊಡೆ ಕೋಪಂ ॥
ಪುಟ್ಟಿ ಪೊದಳ್ದುದು ಸತ್ತರ್
ಪುಟ್ಟರೆ ಪಾಂಡವರೊಳಿರಿದು ಛಲಮನೆ ಮೆರೆವೆಂ ॥ ೭ ॥

—ರನ್ನ.

೧. ಪಾಂಡವರೊಡನೆ ಸಂಧಿಯುನ್ನು ಒಲ್ಲೆನೆನ್ನಲು ಯಾವ ಕಾರಣ–ಗಳನ್ನು ದುರ್ಯೋಧನನು ಮುಂದೆ ಮಾಡುವನು ? ೨. ದುರ್ಯೋಧನನ ಸ್ವಾಭಿಮಾನವನ್ನು ವ್ಯಕ್ತಪಡಿಸುವ ಮಾತುಗಳು ಯಾವವು ?

## ೪೩. ದಾಸ ಸಾಹಿತ್ಯ

[ ಪ್ರಸ್ತುತ ಲೇಖನವು ದಿವಾಕರ ರಂಗರಾಯರ ‘ ಹರಿಭಕ್ತಿಸುಧೆ ’ ಎಂಬ ಗ್ರಂಥದಿಂದ ಆಯ್ದುಕೊಂಡದ್ದು. ರಂಗರಾಯರು ಉಪನಿಷತ್ತು, ವಚನಸಾಹಿತ್ಯ, ದಾಸಸಾಹಿತ್ಯ ಇವುಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ–ದವರಾದದರಿಂದ ಈ ಲೇಖದಲ್ಲಿ ಕರ್ನಾಟಕದಲ್ಲಿ ದಾಸಸಾಹಿತ್ಯದ ಹುಟ್ಟು, ಅದು ಬೆಳೆದ ಬಗೆ, ಅದರ ವೈಶಿಷ್ಟ್ಯ, ಜನತೆಯ ಮೇಲೆ ಅದರಿಂದಾದ ಪರಿಣಾಮ ಮುಂತಾದವು ಚೆನ್ನಾಗಿ ಚರ್ಚಿತವಾಗಿವೆ. ಲೇಖಕರು ಕನ್ನಡ ನಾಡಿನಲ್ಲೆಲ್ಲ ಪ್ರಚಾರದಲ್ಲಿರುವ ದಾಸರ ಹಾಡುಗಳನ್ನು ಹೇಗೆ ಅಭ್ಯಾಸ ಮಾಡಬೇಕೆಂಬುದನ್ನು ತಮ್ಮ ಗ್ರಂಥದಲ್ಲಿ ಸೂಚಿಸಿದ್ದಾರೆ. ಲೇಖಕರ ಪರಿಚಯವನ್ನು ಸೊ.ಓ. ೬ನೆಯ ಪುಸ್ತಕದ ೪೬ನೆಯ ಪಾಠದಲ್ಲಿ ನೋಡಿರಿ.]

## ೧

ಮೋಕ್ಷಸಾಮ್ರಾಜ್ಯದ ಸಿಂಹಾಸನದೆಡೆಗೆ ಸಾಗುವ ರಾಯಬೀದಿಯಾದ ಭಕ್ತಿಮಾರ್ಗವು ಕರ್ನಾಟಕದಲ್ಲಿ ಪೂರ್ವದಿಂದಲೂ ಪ್ರಚಲಿತವಿರುವದು. ನಡುನಡುವೆ, ಒಮ್ಮೊಮ್ಮೆ ಅದು ಹೆಚ್ಚು ಪ್ರಿಯವಾಗಿರುವದು. ಭಕ್ತಿಯು ದಕ್ಷಿಣದಲ್ಲಿ ಹುಟ್ಟಿದ್ದರೂ—ವೃದ್ಧಿಂ ಕರ್ನಾಟಕೇ ಗತಾ—ಕರ್ನಾಟಕದಲ್ಲಿ ಭಕ್ತಿದೇವಿಯು ಬೆಳೆದು ದೊಡ್ಡವಳಾದಳು ಎಂದು ಒಂದೆಡೆಗೆ ಉಲ್ಲೇಖವಿರುವದು. ಕರ್ನಾಟಕದಲ್ಲಿಯ ಮೊದಲನೆಯ ಶ್ರೇಷ್ಠ ಭಕ್ತನೆಂದರೆ ಪುರಾಣಕಾಲದಲ್ಲಿ ಆಗಿಹೋದ ಹನುಮಂತನು. ಅವನಲ್ಲಿ ದಾಸ್ಯಭಕ್ತಿಯು ಪರಮಾವಧಿಯು ಕಂಡುಬರುವದು. ಬಸವಾದಿ ಪ್ರಮಥರು ಸಹ ಭಕ್ತಿಗೆ ಮುಖ್ಯಸ್ಥಾನವನ್ನು ಕೊಟ್ಟಿರುವರು. ಇತಿಹಾಸ ಕಾಲದಲ್ಲಿ ವಾಯುದೇವರ ಮೂರನೆಯ ಅವತಾರವೆನಿಸಿಕೊಂಡ ಮಧ್ವಾಚಾರ್ಯರು ಪರಮಭಕ್ತರಾಗಿಹೋದರು. ಅವರ ದಿವ್ಯ ಸ್ಫೂರ್ತಿಯಿಂದಲೇ, ಅವರನ್ನೇ ಗುರುಗಳನ್ನಾಗಿಟ್ಟುಕೊಂಡು ವೈಷ್ಣವದಾಸಕೂಟವು ಕರ್ನಾಟಕದಲ್ಲೆಲ್ಲ ಭಕ್ತಿಪ್ರಚಾರವನ್ನು ಮಾಡಿತು. ಬಂಗಾಲ ಪ್ರಾಂತದಲ್ಲಿ ಅತಿಶಯ ಪ್ರಸಿದ್ಧಿವೆತ್ತ ಗೌರಾಂಗ ಚೈತನ್ಯ ಪಂಥದವರಾದರೂ ಮಧ್ವಾಚಾರ್ಯರಿಗೆ ಋಣಿಯಾಗಿರುವರೆಂದು ಇತಿಹಾಸಜ್ಞರು ಹೇಳುವರು. ದಾಸಶಿರೋಮಣಿಗಳಾದ ಪುರಂದರ ದಾಸರು ಕರ್ನಾಟಕದಲ್ಲಿ, ಕನ್ನಡದಲ್ಲಿ ಭಕ್ತಿವಾಙ್ಮಯಕ್ಕೆ ಅತ್ಯಂತ ಶ್ರೇಷ್ಠಸ್ಥಾನವನ್ನು ಕಲ್ಪಿಸಿಕೊಟ್ಟರು. ಇಷ್ಟೇ ಅಲ್ಲ, ಅವರ ಕೀರ್ತನೆಗಳಿಂದ ಸ್ಫೂರ್ತಿಗೊಂಡು ತೆಲಗು ಕೃತಿಲೇಖನದಲ್ಲಿ ಅಗ್ರಗಣ್ಯರಾದ ತ್ಯಾಗರಾಜರು ಅಸಂಖ್ಯ ಉತ್ತಮೋತ್ತಮ ಕೃತಿಗಳನ್ನು ರಚಿಸಿದರು. ವೈಷ್ಣವ ಭಕ್ತರಂತೆಯೇ ಶೈವ ಹಾಗು ವೀರಶೈವ ಭಕ್ತರೂ ಕನ್ನಡದಲ್ಲಿ ಅನೇಕಾನೇಕ ಕೀರ್ತನೆ, ಪದ್ಯ ಮುಂತಾದವುಗಳನ್ನು ರಚಿಸಿ ಕನ್ನಡ ವಾಙ್ಮಯಕ್ಕೆ ಶೋಭೆಯನ್ನುಂಟುಮಾಡಿದ್ದಾರೆ. ಹೀಗೆ ನೂರಾರು ಹರಿದಾಸರು, ನೂರಾರು ಶಿವಶರಣರು ಭಕ್ತಿಗೀತೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಎಷ್ಟೋ ಕಾಲವಶವಾಗಿವೆ, ಎಷ್ಟೋ ಅಪ್ರಸಿದ್ಧ ಸ್ಥಿತಿಯಲ್ಲಿವೆ. ಜನಮನದಲ್ಲಿ ಈಶ್ವರ ಪ್ರೇಮತರಂಗಗಳನ್ನೆಬ್ಬಿಸುವ ಸಾಮರ್ಥ್ಯವುಳ್ಳ ಈ ಭಕ್ತಿ-

ವಾಙ್ಮಯದ ಎಷ್ಟೋ ಭಾಗವು ಅಚ್ಚು ಕಾಣದೆ, ಹುಳುಹುಪ್ಪಡಿಗಳಿಗೆ ತುತ್ತಾಗುತ್ತಿದೆ. ಅದನ್ನು ಉದ್ಧರಿಸುವದು ಎಲ್ಲರ ಕರ್ತವ್ಯವಾಗಿದೆ.

ದಾಸಸಂಪ್ರದಾಯಕ್ಕೆ ಸೇರಿದ ಎಲ್ಲ ದಾಸರಲ್ಲಿ ಮತ್ತು ಅವರು ಬರೆದ ಎಲ್ಲ ಪದ್ಯಗಳಲ್ಲಿ ಕೆಲವು ಸಾಮಾನ್ಯ ಲಕ್ಷಣಗಳು ಕಂಡುಬರು-ವವು. ಪರಮಾತ್ಮನು ಕೇವಲ ಬುದ್ಧಿಗಮ್ಯ ವಿಷಯವೆಂದು ಅವರು ನಂಬಿರಲಿಲ್ಲ. ಆದ್ದರಿಂದ ಅವರು ಬರಿಯ ತತ್ವಜ್ಞಾನಕ್ಕೆ ಅಷ್ಟೊಂದು ಮಹತ್ವವನ್ನು ಕೊಟ್ಟಿಲ್ಲ. ತತ್ವಜ್ಞಾನದ ದೃಷ್ಟಿಯಿಂದ ಅವರಲ್ಲಿ ಬಹುಶಃ ಎಲ್ಲರೂ ಮಾಧ್ವಸಂಪ್ರದಾಯದ ದ್ವೈತರು. ಆದರೆ ಅವರು ರಚಿಸಿದ ಭಕ್ತಿಪದಗಳಲ್ಲಿ ಕೆಲವೊಂದು ಮಾತ್ರ ಸಾಂಪ್ರದಾಯಿಕವಿರುವವು. ಮಿಕ್ಕವೆಲ್ಲ ಸಂಪ್ರದಾಯಾತೀತವಿದ್ದು ಎಲ್ಲೆಲ್ಲಿ ಪರಮಾತ್ಮನ ಪ್ರೇಮ-ಲಹರಿಗಳು ಏಳುವವೋ ಅಲ್ಲಲ್ಲಿ ಈ ಪದ್ಯಗಳ ಗುಣಗ್ರಹಣವಾಗದೆ ಇರದು. ಅವರು ಬುದ್ಧಿವಾದದ ಮಾರ್ಗವನ್ನು ಬಿಟ್ಟು ಅನುಭವದ ಮಾರ್ಗವನ್ನು ಹಿಡಿದವರು; ಆತ್ಮಾನುಭವವೆಂಬುದು ಎಲ್ಲಿ ಹೋದರೂ ತತ್ವತಃ ಒಂದೇ ಇರುವದು. ಎಲ್ಲ ದಾಸರು ಒಂದೇ ಮುಖ್ಯ ಉದ್ದೇಶದಿಂದ ಹಾಡುಗಳನ್ನು ಕಟ್ಟಿರುವರು. ಪರಮಾತ್ಮನನ್ನು ಕುರಿತು ತಮ್ಮ ಹೃದಯದಲ್ಲಿ ಉಕ್ಕುವ ಭಾವಲಹರಿಗಳನ್ನೆಲ್ಲ ಮುಚ್ಚುಮರೆಯಿಲ್ಲದೆ ಹರಿಬಿಡುವದೇ ಅವರ ಉದ್ದೇಶವು. ಅವರಲ್ಲಿ ಯಾವದೇ ಕೃತಕತನ, ದಂಭ ಮುಂತಾದವುಗಳಿಗೆ ಆಸ್ಪದವಿರಲಿಲ್ಲ. ಬಹುಶಃ ಎಲ್ಲ ಕೀರ್ತನೆ, ಸುಳಾದಿ, ಉಗಾಭೋಗಾದಿಗಳು ರಾಗಪೂರ್ಣವಾಗಿ ಹಾಡಲು ಬರು-ವಂತಿವೆ. ಈಶಸಂಕಲ್ಪದಿಂದ ರಚಿತವಾದ ವಿಶ್ವವು ತಾಳಬದ್ಧವಾಗಿರು-ವಂತೆ ಆ ಈಶನ ಪ್ರೇಮದಿಂದ ಹೊರಸೂಸಿದ ಕವನಗಳಾದರೂ ತಾಳ-ಮೇಳಯುಕ್ತವಾಗಿ ಕಂಗೊಳಿಸುವದು ಆಶ್ಚರ್ಯವಲ್ಲ. ಈ ಪದ್ಯಗಳನ್ನೆಲ್ಲ ಅವರು ತಿಳಿಗನ್ನಡದಲ್ಲಿಯೇ ಬರೆದಿರುತ್ತಾರೆ. ಶತಕಾನುಶತಕಗಳ ವರೆಗೆ ಸಂಸ್ಕೃತದ ಬೀಗಮುದ್ರೆ ಹಾಕಿಟ್ಟ ಭಾವಭಾಂಡಾರವನ್ನು ಸೂರೆಗೊಂಡು ಅದನ್ನು ದಾಸರು ಸವಿಸೊಲ್ಲುಗಳ ಸಹಿತವಾಗಿ ಸರ್ವರಿಗೆ ಕೈಗೆ ಸಿಕ್ಕಂತೆ ಹಂಚಿದ್ದಾರೆ. ಸಂಸ್ಕೃತ ಭಕ್ತಿವಾಙ್ಮಯವೆಂಬ ಪಂಚಪಕ್ವಾನ್ನವನ್ನು ಉಣ್ಣುವ ಪಂಡಿತರನ್ನು ನೋಡಿ ಹಾಯೆಂದು ಬಾಯಿತೆರೆದು ಹಂಬಲಿ-

ಸುವ ಪಾಮರರನ್ನು ಕಂಡು ದಾಸರು ಆಬಾಲವೃದ್ಧರಿಗೆ ಆರೋಗ್ಯಕರ-ವಾದ ಕ್ಷೀರಾನ್ನವನ್ನು ಬಡಿಸಿರುವರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಆರಡಿಯು ಅತ್ತಿತ್ತ ಸುತ್ತಿ ಹಲವು ಪುಷ್ಪಗಳ ಪರಿಮಳವ ಸೆಳೆದು, ಮಧುವ ಮೆದ್ದು, ಹೆಚ್ಚಾದುದನ್ನು ಹೊತ್ತುತಂದು ಹಾಡುತ್ತ ಹುಟ್ಟಿಗೆ ಹಾಕುವಂತೆ, ಭಕ್ತಿಪರವಶರಾದ ದಾಸರು ಭಾವರಾಜ್ಯದಲ್ಲಿ ವಿಹರಿಸಿ ನಲಿದಾಡಿ ಮಧುರಪ್ರೇಮದ ತನಿರಸವನ್ನುಂಡು ಉಳಿದುದನ್ನು ನಮ-ಗಾಗಿ ಈ ಇಂಚರದ ನುಡಿಗಳಲ್ಲಿ ತುಂಬಿ ಇಟ್ಟಿದ್ದಾರೆ. ಅನಾಯಾಸವಾಗಿ ಕೈಸೇರಿದ, ಈ ಅಮೃತಕುಂಭವನ್ನು ಸೂರೆಗೊಂಡು ಸವಿಯದಿದ್ದವರೇ ದುರ್ಭಾಗಿಗಳು.

ಎಲ್ಲ ದಾಸರ ಪದ್ಯಗಳಲ್ಲಿಯೂ ಮೇಲೆ ಹೇಳಿದಂತೆ ಹಲವು ಸಾಮಾನ್ಯಗುಣಗಳಿದ್ದರೂ ಪ್ರತಿಯೊಬ್ಬ ದಾಸರಲ್ಲಿ ಕೆಲವೊಂದು ವಿಶಿಷ್ಟ ಗುಣಗಳಿರುವವು. ಎಲ್ಲರೂ ಈ ನಶ್ವರ ದೇಹ, ಈ ಮೋಹಕಸಂಸಾರ ಇವುಗಳ ಬಗ್ಗೆ ಪೂರ್ಣವಿರಾಗವನ್ನು, ಪರಮಾತ್ಮಭಕ್ತಿ ಮುಕ್ತಿಯ ಹಂಬಲ ಇವುಗಳ ಬಗ್ಗೆ ಅನುರಾಗವನ್ನು ತಮ್ಮ ವಿಷಯಗಳಾಗಿ ಇಟ್ಟು-ಕೊಂಡಿದ್ದರು. ಅವರು ಉಪಯೋಗಿಸಿದ ಭಾವ ಭಾಷೆಗಳಲ್ಲಿ ಅನೇಕ ಬಗೆಗಳೂ ಚಮತ್ಕಾರವೂ ಹೊಸರಸವೂ ಕಂಡುಬರುವದು. ಪುರಂದರ ದಾಸರ ಪದಗಳಲ್ಲಿಯ ತಿರುಳ್ಗನ್ನಡವೂ ಸುಲಭತೆಯೂ ಪ್ರಸಾದವೂ ಅನ್ಯರ ಪದಗಳಲ್ಲಿ ಕಾಣಲರಿಯವು. ಅವರು ಬಹಳೇ ವಿವಿಧ ಭಾವ-ಗಳನ್ನು ವ್ಯಕ್ತಪಡಿಸಿದ್ದಾರೆ. ಅವರು ಕೊಡುವ ಉಪಮೆಗಳು ಹೃದ-ಯಂಗಮವಾಗಿರುವವು. ಕನಕದಾಸನ ವಾಣಿಯು ಶುದ್ಧವೂ ವೀರ-ವತ್ತರವೂ ಇರುವದು. ಅವನು ತನ್ನ ವಿಚಾರಗಳನ್ನು ಒಳ್ಳೇ ಸ್ಪಷ್ಟ-ವಾಗಿಯೂ ಅಚ್ಚಾಗಿಯೂ ನಮ್ಮ ಮುಂದಿಡುವನು. ಅವನ ಸುಭಾ-ಷಿತಗಳು, ಅವನ ಅನುಭವದ ವೈವಿಧ್ಯವನ್ನು ನಮಗೆ ತೋರುವವು. ಅವನ ಮುಂಡಿಗೆಗಳೂ ಪ್ರಸಿದ್ಧವಿರುವವು. ವಿಜಯದಾಸರ ಕೃತಿಗಳು ಶೈಲಿಯಲ್ಲಿ ಬಹುಮಟ್ಟಿಗೆ ಪುರಂದರದಾಸರ ಕೃತಿಗಳನ್ನು ಹೋಲುವವು. ಸರಲತೆ, ಸುಲಭತೆ, ಪದಲಾಲಿತ್ಯ, ಪ್ರಸಾದಗುಣ ಇವು ವಿಜಯದಾಸ-ರಲ್ಲಿ ಚೆನ್ನಾಗಿ ಕಂಡುಬರುವವು. ಜಗನ್ನಾಥದಾಸರ ಪದ್ಧತಿಯು ಬೇರೆ

ತರದ್ದಿರುವದೆಂದು ಹೇಳಬಹುದು. ಅವರು ಪಂಡಿತರು ಹಾಗೂ ತಾರ್ಕಿಕರು. ಆದ್ದರಿಂದ ಅವರ ಪದ್ಯಗಳಲ್ಲಿ ಸಂಸ್ಕೃತವು ವಿಶೇಷ. ಅವರ ಪದ್ಯಗಳಲ್ಲಿ ತತ್ವವಿವೇಚನೆಗೆ ಹೆಚ್ಚು ಮಹತ್ವ ಕೊಡಲ್ಪಟ್ಟಿದೆ. ಹೀಗೆ ಬೇರೆ ಬೇರೆ ದಾಸರಲ್ಲಿ ಬೇರೆ ಬೇರೆ ಗುಣಗಳು ಕಂಡುಬರುವವು. ಇದೇ ರೀತಿಯಾಗಿ ಪ್ರತಿಯೊಬ್ಬ ದಾಸರ ಶೈಲಿಯನ್ನು ಪರಾಮರ್ಶಿಸಬಹುದು.

# ೪೪. ದಾಸ ಸಾಹಿತ್ಯ

## ೨

ದಾಸರು ಬರೆದ ಕೀರ್ತನಾದಿಗಳ ಕಡೆಗೆ ನಾವು ಅನೇಕ ದೃಷ್ಟಿಯಿಂದ ನೋಡಬಹುದು. ಕೇವಲ ಸಾಹಿತ್ಯ ದೃಷ್ಟಿಯಿಂದ ನೋಡಿದರೂ ಈ ದಾಸವಾಙ್ಮಯದಲ್ಲಿ ಕೆಲವು ಅತ್ಯುಚ್ಚ ಗುಣಗಳು ಕಂಡು ಬರುವವು. ಮನುಷ್ಯ ಸ್ವಭಾವದ ಉತ್ತಮ ವರ್ಣನೆ, ಅತ್ಯಂತ ಸುಲಭ ಮತ್ತು ಸರಳ ಭಾಷೆಯಲ್ಲಿ ಅಂತಃಕರಣದಲ್ಲಿಯ ಗೂಢವಾದ ಮತ್ತು ಸಹಜವಾದ ಭಾವಗಳನ್ನು ಸಹಜ ಮತ್ತು ಮನೋಹರ ರೀತಿಯಿಂದ ವ್ಯಕ್ತಮಾಡುವ ದಾಸರ ಸಾಮರ್ಥ್ಯ, ಪ್ರಸಾದಗುಣ, ದೇವರ ಅವತಾರಗಳನ್ನು ಬಣ್ಣಿಸುವದರಲ್ಲಿ ಕವಿಗಳು ತೋರಿದ ಚಮತ್ಕೃತಿ, ರೂಪಕ ಉತ್ಪ್ರೇಕ್ಷಾದಿ ಅಲಂಕಾರಗಳನ್ನುಪಯೋಗಿಸುವಾಗ ದಾಸರು ವ್ಯಕ್ತಪಡಿಸಿದ ಕಲ್ಪಕತೆ, ಕಿವಿಗಿಂಪಾಗುವಂತೆ ಅವರು ಮಾಡಿದ ಶಬ್ದರಚನೆ ಈ ಮುಂತಾದ ಉತ್ತಮ ಕಾವ್ಯಲಕ್ಷಣಗಳು, ಕವಿಪ್ರತಿಭೆಯ ಕುರುಹುಗಳು ದಾಸರ ಕೃತಿಗಳಲ್ಲಿ ಒಡೆದು ಕಾಣಿಸುತ್ತವೆ. ದಾಸರ ಕಾವ್ಯಸಾಹಿತ್ಯವು ಆಳವಾದುದಿದ್ದು ಸುಲಭವಿರುವದು, ಸುಲಭವಿದ್ದರೂ ಗಂಭೀರವಿರುವದು, ಗಂಭೀರವಿದ್ದರೂ ಆಕರ್ಷಕವಿರುವದು. ಇಲ್ಲಿ ಉಚ್ಚ ಆಧ್ಯಾತ್ಮಿಕ ಅನುಭವಗಳು ಬುದ್ಧಿಗೆ ಸಹಜವಾಗಿ ತಿಳಿಯುವಂತೆ ಬರೆಯಲ್ಪಟ್ಟಿರುವವು.

ಕರ್ನಾಟಕದಲ್ಲಿ ದಾಸರ ಕೀರ್ತನೆಗಳಿಂದ ಆದ ಲೋಕಶಿಕ್ಷಣದ ಕಾರ್ಯವೇನೂ ಅಷ್ಟಿಷ್ಟಲ್ಲ. ಭಕ್ತಿತತ್ವ, ಭಕ್ತಿಭಾವ, ಅದರ ವಿವರಣೆ, ಇವುಗಳನ್ನು ಇಲ್ಲಿ ನೋಡಬಹುದು. ದಾಸರು ಸ್ವತಃ ಶ್ರೇಷ್ಠ ಸಾಧಕ-ರಿದ್ದರು. ಅಹೇತುಕ ನಿರ್ಮಲ ಭಕ್ತಿಯಿಂದ ಪ್ರೇರಿತರಿದ್ದರು. ಉಚ್ಚ ಆಧ್ಯಾತ್ಮಿಕ ಅನುಭವಗಳನ್ನು ಪಡೆದವರಿದ್ದರು. ಆದುದರಿಂದ ತಾವು ಅನುಭವಿಸಿದ ಭಕ್ತಿಯ ವಿವಿಧ ಭಾವಗಳನ್ನು ಸುಂದರ, ಸೊಬಗಿನ, ಕನ್ನಡ ನುಡಿಯ ಎರಕದಲ್ಲಿ ಹೊಯ್ದು ಪಂಡಿತ ಪಾಮರರೆಮರಿಗೆ ಅವರು ಇಟ್ಟಿದ್ದಾರೆ. ವಿಷ್ಣುಪುರದಲ್ಲಿ ಹುಟ್ಟಿದ ದಿವ್ಯಗಂಗೆಯ ಜಲವನ್ನು ಸಣ್ಣ ಸಣ್ಣ ಚಿನ್ನದ ಗಿಂಡಿಗಳಲ್ಲಿ ತುಂಬಿ, ದಾಸರು ಅದನ್ನು ಬಾಲ-ಬಾಲಿಕೆಯರಿಗೆ ಕೂಡಾ ನೀಡಿ ಹೀನದೀನರಿಗೆ ಕೂಡಾ ಕೊಟ್ಟು ಅವರನ್ನು ಪಾವನಮಾಡಿದ್ದಾರೆ. ನಿಘಂಟು, ನಿರುಕ್ತ, ವ್ಯಾಕರಣ ಮುಂತಾದವುಗಳ ಸಹಾಯದಿಂದ ಸಹ ಚೆನ್ನಾಗಿ ತಿಳಿಯದ ಸಂಸ್ಕೃತ ಗ್ರಂಥಗಳಲ್ಲಿಯ ತತ್ವ ಹಾಗು ಭಕ್ತಿಭಾವಗಳನ್ನು ತಮ್ಮ ಅನುಭವ ಬಲದಿಂದಲೂ ಕನ್ನಡ ಭಾಷಾಪ್ರಭುತ್ವದಿಂದಲೂ ತಮ್ಮ ಗೀತೆಗಳಲ್ಲಿ ವ್ಯಕ್ತಪಡಿಸಿದ್ದಾರೆ, ಸಾಮಾನ್ಯರು ಹಾಡಿ ತಿಳಿದುಕೊಳ್ಳುವಂತೆ ಬರೆ-ದಿದ್ದಾರೆ. ಮಠ-ಮಂದಿರಗಳಲ್ಲಿ ಮಾತ್ರ ಹುದುಗಿದ್ದ ಧರ್ಮತತ್ವಗಳನ್ನು ಮನೆಮನೆಗೆ ಬೀರಿದ್ದಾರೆ. ಕೆಲವರಿಗೆ ಮಾತ್ರ ತೆರೆದಿಟ್ಟ ಮುಕ್ತಿ-ಮಂದಿರವನ್ನು ಸರ್ವರಿಗೂ ಮುಕ್ತದ್ವಾರ ಮಾಡಿದ್ದಾರೆ. ಒಟ್ಟಿಗೆ ನೋಡಲಾಗಿ ಅತಿಶಯ ಕಠಿಣ ತತ್ವಗಳನ್ನು ಕೂಡಾ ತಮ್ಮ ಪ್ರಾಸಾದಿಕ ವಾಣಿಯಿಂದ ಲೋಕಪ್ರಿಯ ಹಾಗು ಲೋಕಪ್ರಚಲಿತ ಮಾಡಿದ ಶ್ರೇಯಸ್ಸು ದಾಸರಿಗೆ ಇದೆಯೆನ್ನುವದರಲ್ಲಿ ಯಾವ ಸಂಶಯವೂ ಇಲ್ಲ.

ಈ ಕಾರ್ಯವನ್ನು ಅವರು ಸಂಗೀತ ಕೀರ್ತನೆಗಳ ಮುಖಾಂತರ ಮಾಡಿದ್ದರಿಂದ ಕರ್ನಾಟಕದಲ್ಲಿ ಸಂಗೀತ ಶಾಸ್ತ್ರಕ್ಕೆ ಕೂಡಾ ಒಂದು ಬಗೆಯ ಪಾವಿತ್ರ್ಯ ಮತ್ತು ಪ್ರೋತ್ಸಾಹ ದೊರೆಯಿತೆಂದು ಹೇಳಬಹುದು. ಭಾವವಿಲ್ಲದ ಸಂಗೀತವು ರಸವಿಲ್ಲದ ಹಣ್ಣಿನಂತೆ, ವಾಸನೆಯಿಲ್ಲದ ಹೂವಿನಂತೆ, ಭಾವವು ಎಷ್ಟು ಪವಿತ್ರವೋ ಉಚ್ಚವೋ ಅಷ್ಟು ಆ ಗೀತವು ಹೆಚ್ಚು ಸರಿ ಹಾಗು ಮಧುರವು. ಅಂತರ್ಬಾಹ್ಯ ಶುದ್ಧನಿದ್ದವನೇ

ಶುದ್ಧನು, ತ್ರಿಕಾಲವಲ್ಲಿ ಶುದ್ಧನಿದ್ದವನೇ ಶುದ್ಧನು ಎಂದು ನಾವು ಹೇಳುವೆವು. ಅದೇರೀತಿ ಭಾವ, ಶಬ್ದ, ಅರ್ಥ ಮತ್ತು ಸ್ವರ ಇವು ನಾಲ್ಕು ಶುದ್ಧ ಮತ್ತು ಶಾಸ್ತ್ರೀಯವಿದ್ದರೇ ಉತ್ತಮ ಸಂಗೀತವು. ಅಂಥ ಉತ್ತಮ ಸಂಗೀತವನ್ನು ದಾಸರು ನಮಗೆ ದಯಪಾಲಿಸಿದ್ದಾರೆ.

ಭಕ್ತಿಭಾವ ಮಂಡನದ ದೃಷ್ಟಿಯಿಂದಂತೂ ಈ ಕೀರ್ತನೆಗಳು ಅನುಪಮವಿರುವವು. ಪ್ರೇಮಾತುರರಾದ, ಪರಮಾತ್ಮಪ್ರೀತಿಯಿಂದ ಪ್ರೇರಿತರಾದ, ಉತ್ಕಟ ಈಶ್ವರಪ್ರೇಮದಿಂದ ವ್ಯಾಕುಲರಾದ ಈ ದಾಸರು ಪ್ರತಿಯೊಂದು ಭಾವ, ಉಪಭಾವ, ಭಾವಚ್ಛಾಯೆಗಳನ್ನು ಸ್ವತಃ ಅನು-ಭವಿಸಿ ಆ ಅನುಭವವನ್ನು ತಮ್ಮ ಕೀರ್ತನೆಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಈಶ್ವರನ ವಿರಹದಿಂದ ವಿಹ್ವಲರಾದ ಈ ಪ್ರೇಮಿಗಳ ಅಂತಃಕರಣ-ಸಾಗರವಲ್ಲಿದ್ದ ಪ್ರತಿಯೊಂದು ತರಂಗವು, ವಿವಿಧ ಆಲಾಪಗಳು ದಾಸರಿಂದ ಹೊರಹೊಮ್ಮಿ ಸುಲಲಿತ ಶಬ್ದಗಳಲ್ಲಿ ಹೆಪ್ಪುಗಟ್ಟಿನಿಂತಿವೆ. ಪರಮಾತ್ಮನನ್ನು ಮೆಚ್ಚಿ ಮೈಮರೆತು ಅತಿಹುಚ್ಚರಂತೆ ಇರುವ ಈ ಭಕ್ತರು ಒಮ್ಮೆ ದುಃಖಸಂತಪ್ತರಾಗಿ, ತ್ರಿವಿಧತಾಪಗಳಿಂದ ಪೀಡಿತರಾಗಿ ಆರ್ತಭಾವದಿಂದ ದೇವರನ್ನು ಮರೆಹೋಗುವರು. ಇನ್ನೊಮ್ಮೆ ತಮ್ಮ ತಾಪಗಳ ಭೀಷಣಚಿತ್ರವನ್ನು ರೇಖಿಸಿ ಗದ್ಗದಕಂಠದಿಂದ ಕ್ಷಮೆಯನ್ನು ಬೇಡುವರು. ಒಮ್ಮೆ ಶಾಂತಭಾವದಿಂದ ಈಶಮಹಿಮೆಯನ್ನು ಹಾಡಿದರೆ, ಇನ್ನೊಮ್ಮೆ ಸಖನಂತೆ ಅವನನ್ನು ಸಂಬೋಧಿಸುವರು. ತಮ್ಮಂಥ ಪತಿತರ ಕಡೆಗೆ ಪರಮಾತ್ಮನು ನೋಡನು ಎಂದು ಒಮ್ಮೆ ನಿರಾಶರಾದರೆ, ಇನ್ನೊಮ್ಮೆ ಅವರು ಭಕ್ತರನ್ನು ಕಾಯುವದೇ ನಿನ್ನ ಕರ್ತವ್ಯವೆಂದು ಅಧಿಕಾರದಿಂದ ದೇವರಿಗೆ ಉಪದೇಶಮಾಡುವರು. ಒಮ್ಮೆ ತಾಯಿತಂದೆ ಸೇವಕ ಮುಂತಾದ ಭಾವನೆಗಳಿಂದ ದೇವರೊಡನೆ ನಡೆಯುವರು. ಇನ್ನೊಮ್ಮೆ ಅವನು ಸರ್ವಾತೀತನೆಂದು ಭಾವಿಸಿ ಅಗೋಚರನೆಂದು ಹಾಡುವರು; ಬಿರುದುಗಳನ್ನು ಹೊತ್ತಮೇಲೆ ಭಕ್ತರನ್ನು ಕಾಯಲಿಕ್ಕೆಬೇಕೆಂದು ಅವನನ್ನು ರೇಗಿಸುವರು; ತಾನೇ ಹಾವಿನಮೇಲೆ ಮಲಗಿದವನು ನಮಗಿನ್ನೇನು ಕೊಟ್ಟಾನು ಎಂದು ಸರಸವಾಡುವರು; ವಿಯೋಗದಿಂದ ಸಾವಿರಚೇಳು ಕಡಿದಷ್ಟು ದುಃಖ-

ವಾದುದನ್ನು ಒಮ್ಮೆ ಬಣ್ಣಿಸಿದರೆ ಈಶಸಂಯೋಗದಿಂದ ಆದ ಸುಖವನ್ನು ಅತ್ಯಂತ ಧನ್ಯಭಾವದಿಂದ ಇನ್ನೊಮ್ಮೆ ಬಣ್ಣಿಸುವರು. ಪ್ರಕೃತಿಯು ಪುರುಷನನ್ನು ಪ್ರಿಯೆಯು ಪ್ರಿಯನನ್ನು ಆರಾಧಿಸುವಂತೆ ಈ ಭಕ್ತರು ಮಧುರಭಾವನೆಯಿಂದ ಆರಾಧಿಸಿ ಭಕ್ತಿಭಾವನೆಯ ಚರಮಸೀಮೆ-ಯನ್ನು ಮುಟ್ಟುವರು. ಏಕಾಂತಿಕ ಅನನ್ಯಭಕ್ತಿಯ ಮುಂದೆ ಮಿಕ್ಕ ಎಲ್ಲ ಸಾಧನಗಳು ತುಚ್ಛವೆಂದು ಸ್ವಾಭಿಮಾನದಿಂದಲೂ ಸ್ವಾನುಭವದಿಂದಲೂ ಈ ಸದ್ಭಕ್ತರು ಹೇಳುವರು. ವಿವಿಧ ಹಾಗು ಅತ್ಯಂತ ಸೂಕ್ಷ್ಮವಾದ ಭಾವಸ್ವರಗಳನ್ನು ತಮ್ಮ ಹೃದಯವೀಣೆಯಿಂದ ನುಡಿಸಿ ಆ ಇಂಚರವನ್ನು ಕೇಳುವವರ ಅಂತಃಕರಣದಲ್ಲಿ ಆಯಾ ಭಾವನೆಯ ತೆರೆಗಳನ್ನೆಬ್ಬಿಸುವ ಈ ಮೋಡಿಕಾರರ ಮೋಹಿನಿಯನ್ನು ಇನ್ನೇನು ವರ್ಣಿಸಲಿ?

—ದಿವಾಕರ ರಂಗರಾಯ.

೧. ಕರ್ನಾಟಕದಲ್ಲಿ ಭಕ್ತಿಮಾರ್ಗವನ್ನು ಅನುಸರಿಸಿದ ಜನರ ಹಾಗೂ ಪಂಗಡಗಳ ಹೆಸರನ್ನು ಹೇಳಿರಿ. ೨. ದಾಸರು ಭಕ್ತಶಿರೋಮಣಿಗಳಿದ್ದು ಪರಮಾತ್ಮನನ್ನು ಹೇಗೆ ಹೇಗೆ ಸಂಬೋಧಿಸಿ ತಮ್ಮ ಭಕ್ತಿಯ ತರಂಗಗಳನ್ನು ತೋರ್ಪಡಿಸಿಕೊಂಡಿರುವರು? ೩. ಎಲ್ಲ ದಾಸರ ಹಾಡುಗಳಲ್ಲಿರುವ ಸಾಮಾನ್ಯ ವಿಚಾರಗಳು ಯಾವವು? ೪. ವಾಙ್ಮಯ, ಅಲಂಕಾರ, ಸಾಧಕರು, ನಿಘಂಟು, ನಿರುಕ್ತ, ಅನುಪಮ, ಉಪಭಾವ, ಭಾವಚ್ಛಾಯೆ, ವಿಹ್ವಲರು, ಆರ್ತ ಇವುಗಳ ಅರ್ಥ ಹೇಳಿರಿ.

## ೪೫. ಖಾಂಡವ ವನದಹನ

[ ಹಳೆಯ ಕಾವ್ಯಗಳ ಅಭ್ಯಾಸವು ನಮ್ಮ ಭಾಷಾಶೈಲಿಯ ತಿದ್ದು-ಪಡಿಗೆ ಸಹಾಯಕವಾಗುವದು. ಈ ದೃಷ್ಟಿಯಿಂದ ಆರನೆಯ ಪುಸ್ತಕದಲ್ಲಿ ಕುಮಾರವ್ಯಾಸನ ಭಾರತದಿಂದ ಒಂದು ಭಾಗವನ್ನು ಅನುವಾದಿಸಲಾಗಿದೆ ( ಪಾಠ ೩೦ ). ಇಲ್ಲಿ ಆದಿಕವಿಯಾದ ಪಂಪನ ಭಾರತದಿಂದ ಇಂ ಒಂದು ಭಾಗದ ಅನುವಾದವನ್ನು ಕೊಡಲಾಗಿದೆ. ]

ಶ್ರೀಕೃಷ್ಣನೂ ಅರ್ಜುನನೂ ಅಲ್ಲಲ್ಲಿ ಸುತ್ತುತ್ತ ಖಾಂಡವವನಕ್ಕೆ ಬಂದರು ; ಕೃಷ್ಣನು ಅರ್ಜುನನಿಗೆ ಆ ವನದ ಸೊಬಗನ್ನು ತೋರಿಸುತ್ತ ಹೀಗೆಂದನು :

" ಈ ವನದಲ್ಲಿ ಅಳಿಗಳು ಅಲರುಗಳನ್ನು ನೋಯಿಸದೆ ಒಯ್ಯ-ನೊಯ್ಯನೆ ಬಂಡನುಂಬುವು ; ಗಾಳಿ ಇಲ್ಲಿ ಬಂದು ಅಲೆಯಲಾರದು ; ಸೂರ್ಯಕಿರಣಗಳಿಗೆ ಸೇರಲು ಇಂಬು ಇಲ್ಲ. ಬಲಿಷ್ಠರಾದ ಸಿದ್ಧಖೇಚ-ರರೇ ನಿತ್ಯವೂ ಕಾವಲಿದ್ದು ಇದನ್ನು ಕಾಯುವರು. ಒಮ್ಮೆ ಶಚೀದೇವಿ ಅಶೋಕವಲ್ಲರಿಯ ಒಂದು ಪಲ್ಲವವನ್ನು ಕೊಯ್ದು ಪ್ರೀತಿಯಿಂದ ತನ್ನ ಸೋರ್ಮುಡಿಯಲ್ಲಿ ಇಟ್ಟುಕೊಂಡಳು; ಅಷ್ಟರಿಂದ ಇಂದ್ರನು ಕೋಪ-ಗೊಂಡು ಆಕೆಯನ್ನು ಗದ್ದರಿಸಿದನು ; ಈ ಬಗೆಯ ಪ್ರೇಮವು ಇಂದ್ರನಿಗೆ ಈ ವನದಲ್ಲಿ. ಇಂತಿರುವ ಈ ವನವನ್ನು ಅನಲನಿಗೆ ಆಹುತಿಯಾಗಿ ಕೊಡಲು ನೀನು ಪ್ರತಿಜ್ಞೆಗೈದೆ. ಇನ್ನು ನಿನ್ನ ಬಿಲ್ಲಲ್ಲಿ ಶರಗಳನ್ನು ಹೂಡಿ ಸಿದ್ಧನಾಗಿರು. ಏಕೆ ತಡೆದಿರುವೆ ? "

ಕೃಷ್ಣನೆಂದ ಮಾತನ್ನು ಕೇಳಿ ಅರ್ಜುನನು, " ನೀನು ಹೇಳಿದಂತೆ ಮಾಡುವೆನು. ನನ್ನ ಸಾಹಸವನ್ನು ನೋಡು, " ಎಂದು ಅಕ್ಷಯದ ಬತ್ತಳಿಕೆಯನ್ನು ಬಿಗಿದು, ಗಾಂಡೀವವನ್ನೇರಿಸಿ, ನೀವಿ, ಜೇವಡೆದು, ದಿವ್ಯಾಸ್ತ್ರಗಳನ್ನು ಹಿಡಿದು ಸಿದ್ಧನಾದನು ; ಮತ್ತು ಅಗ್ನಿದೇವನನ್ನು ನೋಡಿ, " ಇನ್ನು ಉಣ್ಣಿರಿ, ನಿಮ್ಮ ಹಸಿವನ್ನು ನೀಗಿಸಿರಿ, ಯಾರಾದರೂ ವಿರೋಧಿಸಿದರೆ ಅವರನ್ನು ನಾಶಗೊಳಿಸುವೆನು, " ಎಂದನು. ಅದನ್ನು ಕೇಳಿ ಅನಲನು ಆತನನ್ನು ಹರಸಿ ಪ್ರಳಯಕಾಲದ ಕ್ರೀಡೆಯನ್ನು ಪ್ರಾರಂಭಿಸಲೋ ಎಂಬಂತೆ ಬಳೆದು ವನದಲ್ಲೆಲ್ಲ ಹಬ್ಬಿದನು. ಹೀಗೆ ಹಬ್ಬಿ ವಿವಿಧಲತಾವೃಕ್ಷಗಳ ರಸವನ್ನು ಹೀರಿ ಅವನ್ನು ಭಕ್ಷಿಸುತ್ತ ಸಾಗಿದನು.

ಆಗ ಇಂದ್ರನ ಆಜ್ಞೆಯಿಂದ ಆ ವನವನ್ನು ಕಾಯುತ್ತಿದ್ದ ಕಿನ್ನರ-ಕಿಂಪುರುಷ-ಗಂಧರ್ವ-ಸಿದ್ಧ-ವಿದ್ಯಾಧರರ ಬಲವೆಲ್ಲವು ಒಂದಾಗಿ, ಈ ಉರಿ ಬನವನ್ನು ಸುಡುತ್ತಿರುವುದು, ಅದನ್ನು ಕಂಡು ಸುಮ್ಮನಿರಲಾಗು-ವುದೇ, ಎಂದು ಅರ್ಜುನನ್ನು ತಾಗಿತು. ಅರ್ಜುನನು ಆಯಾಸವಿಲ್ಲದೆ ಆ ಬಲವನ್ನು ಜಯಿಸಿದನು.

ಹೀಗಿರುವಾಗ ಖಾಂಡವವನವೆಲ್ಲವನ್ನು ಅಗ್ನಿದೇವನು ಪ್ರಳಯ ಕಾಳಾನಳನಂತೆ ಭಕ್ಷಿಸುತ್ತಿರಲು, ಬಳಸಿ ಬಂದು ಕಾಯುತ್ತಿರುವ ನಾರಾಯಣನ ಸುದರ್ಶನ ಚಕ್ರದ ತಿವಿತವನ್ನು, ವಿಕ್ರಮಾರ್ಜುನನ ದಿವ್ಯಾಸ್ತ್ರಗಳ ಇರಿತವನ್ನು ಮತ್ತು ಅಗ್ನಿದೇವನ ಶಿಖಾಕಳಾಪದ ಹಿಂಸೆಯನ್ನು ಹೇಗೋ ತಪ್ಪಿಸಿ ಬಲೆ ಹರಿದ ತೋಳನಂತೆ ಒಬ್ಬ ವನಪಾಲಕನು ಹೋಗಿ ದೇವೇಂದ್ರನನ್ನು ಕಂಡು ಖಾಂಡವವನದ ದಹನದ ವೃತ್ತಾಂತವನ್ನು ಅರಿಕೆಮಾಡಿದನು. ಆಗ ಪೌಳೋಮೀಪತಿ ತನ್ನ ದಿವ್ಯಜ್ಞಾನದಿಂದ ಈಯೆಲ್ಲ ಅನಾಹೂತಕ್ಕೆ ಚಕ್ರಿಯೂ ವಿಕ್ರ-ಮಾರ್ಜುನನೂ ಕಾರಣವೆಂದು ಅರಿತು, ಕೋಪೋದ್ರಿಕ್ತನಾಗಿ ಗಜರಿ ಗರ್ಜಿಸಿ ಪ್ರಳಯಕಾಳಾಂಬುದದಂತೆ ಸಿಡಿಲ ಬಳಗವನ್ನೊಳಕೊಂಡ ದ್ರೋಣ, ಮಹಾದ್ರೋಣ, ಪುಷ್ಕಳಾವರ್ತ, ಸಂವರ್ತಕಗಳೆಂಬ ಮೋಡ-ಗಳಿಗೆ ಉರಿಯನ್ನು ಆರಿಸಲು ಬೆಸಸಿದನು. ಒಡನೆ ಅವು ವಿಂಧ್ಯಾ-ಚಳದ ಕೂಟ ಕೋಟಿಗಳೆ ಕಿತ್ತೆದ್ದು ಬರುವಂತೆ ಬಂದು ದೆಸೆಗಳೆಲ್ಲ-ವನ್ನೂ ಮುಸುಕಿ ಕತ್ತಲಿಸಿ ಕವಿದು, ಲೋಕವನ್ನು ಸಪ್ತಸಾಗರಗಳ ಜಲಗಳೆ ಕವಿದುವೊ ಎಂಬಂತೆ ಮಳೆಗರೆಯತೊಡಗಿದುವು. ಇದರಿಂದ ಪಾವಕನು ಉರ್ಕುಗೆಟ್ಟು, "ಅರ್ಜುನನು ಮಾಡಿದ ದಾನವು ತೊದ-ಳಾಯ್ತು ವ್ಯರ್ಥವಾಯ್ತು," ಎನಲು, ಗುಣಾರ್ಣವನು ಮಾರುತ ಬಾಣದಿಂದ ವನದ ಸುತ್ತಲು ಶರಪಂಜರವನ್ನು ನಿರ್ಮಿಸಿದನು. ಅದರಿಂದ ನೂರು ಯೋಜನದ ಅಳವಿಯ ಖಾಂಡವವನವೆಲ್ಲವು ಮಶಕವೂ ಮಿಸುಕಲು ಛಿದ್ರವಿಲ್ಲದಂತಾಯ್ತು. ಅರ್ಜುನನ ದಿವ್ಯಾಸ್ತ್ರದ ಬಾಧೆಗೆ ಇರಲಾರದೆ ಮೇಘಗಳೆಲ್ಲವು ತೆರಳ್ದೋಡಿದುವು. ಆಗ ಅಗ್ನಿದೇವನು ಪ್ರಖರನಾಗಿ ಹಬ್ಬಿ, ವನಖಗ-ವನಮೃಗ-ವನತರು-ವನಚರ-ವನವನಜ ಸಮುದಾಯವೆಲ್ಲವನ್ನೂ ಒಂದು ಸೀರು ಕೂಡ ಉಳಿಯದಂತೆ ಉಂಡನು.

ಇಂತು ವನಗಹನವೆಲ್ಲವು ದಹನಮಯವಾದ ಪ್ರಸ್ತಾವದಲ್ಲಿ ಮಯನೆಂಬ ದಾನವ ವಿಶ್ವಕರ್ಮನು ವಿಸ್ಮಿತನಾಗಿ ಮೇಲೆ ನೆಗೆದು ಉರಿ-ಯುತ್ತಿರುವ ಅಗ್ನಿಜ್ವಾಲೆಗಳನ್ನು ಗದೆಯಿಂದ ಬೀಸುತ್ತ ಹೊರಟನು.

ಆಗ ಹರಿಯ ಚಕ್ರವೂ ಅರ್ಜುನನ ಬಾಣಗಳೂ ಅವನನ್ನು ತಡೆದುವು. ಇದನ್ನು ಕಂಡು ಮಯನು ಅರ್ಜುನನಿಗೆ ಶರಣುಹೊಕ್ಕನು. ಆಗ ಹರಿಯ ಚಕ್ರವೂ ಅರ್ಜುನನ ಶರಗಳೂ ಅವನನ್ನು ಹೋಗಬಿಟ್ಟುವು. ಬಳಿಕ ವನಾಂತರದೊಳಿದ್ದ ತಕ್ಷಕನ ಮಗನಾದ ಅಶ್ವಸೇನನೆಂಬ ಪನ್ನಗನು ತನ್ನ ತಾಯನ್ನು ತನ್ನ ಬಾಲವನ್ನು ಕಚ್ಚಿಕೊಳ್ಳ ಹೇಳಿ ದಹನಾರ್ಚಿಗಳಿಂದ ಬದುಕಿ ಮೇಲೆ ನೆಗೆದು ಹಾರಿಹೋಗುವಾಗ ಅರ್ಜುನನು ಬಾಣದಿಂದ ಅದನ್ನು ಎರಡು ತುಂಡಾಗಿ ಕಡಿದನು. ಆಗ ಅದರ ಬಾಲದೊಡನೆ ಉರಿಯಲ್ಲಿ ಬಿದ್ದು ಮಿಡುಮಿಡು ಮಿಡುಕುತ್ತಿದ್ದ ಅದರ ತಾಯನ್ನು ಕಂಡು, ಹಾವುಗಳು ತಮ್ಮ ಹಗೆಯನ್ನು ಮರೆಯವೆಂಬುದನ್ನು ನನ್ನಿಮಾಡುವಂತೆ, ಅರ್ಜುನನು "ಹಗೆಯಿಂದ ಕೂಡಿದ ನಿನ್ನನ್ನು ನಾನು ಕೊಲ್ಲೆನು, ನೀನು ಯಾರ ಮರೆಯನ್ನಾದರೂ ಹೊಕ್ಕು ವೈರವನ್ನು ಸಾಧಿಸು," ಎಂದೆನಲು, ಪನ್ನಗನು ಹಗೆಯನ್ನು ಸಾಧಿಸುವ ಬುದ್ಧಿಯಿಂದ ಕರ್ಣನ ಬೊಣೆಯನ್ನು ಹೊಕ್ಕು ಅರ್ಧಾವಲಿಕವೆಂಬ ಅಮೋಘಾಸ್ತ್ರವಾಗಿದ್ದನು.

ಇತ್ತ ಖಾಂಡವವನದೊಳಗೆ ಮಂದಪಾಲನೆಂಬ ಮುನಿಗೂ ಒಂದು ಲಾವಗೆಗೂ ಹುಟ್ಟಿದ ನಾಲ್ಕು ಲಾವಗೆಗಳು ಅಗ್ನಿಸೂಕ್ತಗಳನ್ನು ಓದುತ್ತ ಅದಿರದೆ ಅಗ್ನಿಯ ಇದಿರಲ್ಲಿ ಬಂದುವು. ಅಗ್ನಿದೇವನು ಮೆಚ್ಚಿ ಅವಕ್ಕೆ ವರವನ್ನು ಬೇಡಿಕೊಳ್ಳಿ ಎನಲು, "ನಮ್ಮ ಅನ್ವಯಕ್ಕೆ ನೀನು ತಣ್ಣಗಾಗಿ ಇರು," ಎಂದು ಅವು ಬೇಡಿದುವು. ಅಗ್ನಿ, "ನೀವು ಬೇಡಿದುದು ಆಗಲಿ," ಎಂದು ವರವಿತ್ತನು.

ಅತ್ತ ಇಂದ್ರನು ತನ್ನ ಬಲವೆಲ್ಲವು ಅಳಿದುದೆಂಬುದನ್ನು ಕೇಳಿ, "ಪಾರ್ಥನು ನನ್ನ ಮಗನಾದರೇನು? ಆತನನ್ನು ಹಿಡಿದು ಕಟ್ಟದೆ ಬಿಡುವೆನೆ? ಚಕ್ರಿ ಧರಿತ್ರಿಗೆ ಗುರುವಾದರೇನು? ಅವನನ್ನು ಉರುಳಿಸದೆ ಬಿಡುವೆನೆ? ಸರಿಯಾಗಿ ಯೋಚಿಸದೆ ಈ ಕೆಡಕನ್ನು ಮಾಡಿದವರಿಗೆ ತಕ್ಕುದನ್ನು ಈಗಲೆ ಮಾಡುವೆನು," ಎನ್ನುತ್ತ ನಿಜವಾಹನವನ್ನೇರಿ ಸ್ವರ್ಗದಿಂದ ಹೊರಟನು.

ಅಂತು ಯುದ್ಧಸನ್ನದ್ಧ ದೇವನಿಕಾಯದೊಡನೆ ಹೊರಟು ಭೈರವನು ನುಗ್ಗುವಂತೆ ನುಗ್ಗಿಬಂದ ಪುರಂದರನೆಡೆಗೆ ಬ್ರಹ್ಮನು ಬಂದು, "ವನವನ್ನು ಕಾಯಲೆಂದು ಕಾದುವೆಯಾದರೆ ಈ ಮೊದಲೆ ಅದು ಹೋಗಿದೆ; ಪಾರ್ಥನಲ್ಲಿ ನಿನಗೆ ಮುನಿಸು ಇದ್ದರೆ ಆತನು ನಿನ್ನ ಪುತ್ರನು; ಅಚ್ಯುತನಿಗೆ ಸ್ವಲ್ಪ ಎದೆ ನೋವಾದರೂ ಅದು ಕೂಡದು, ಆತನು ನಮ್ಮ ಮೂವರಲ್ಲಿ ಒಬ್ಬನು; ನಮ್ಮ ಮಾತು ಇಷ್ಟೇ, ಗುಣಾರ್ಣವನಿಗೆ ಗೆಲು-ವನ್ನು ಕೊಡು; ಇದುವೆ ನಿನ್ನ ಕರ್ತವ್ಯವು," ಎಂದು ನ್ಯಾಯವಾದುದನ್ನು ಹೇಳಲು, ಸುರಾಧಿಪನು ಹಾಗೆಯೆ ಮಾಡುವೆನು ಎಂದು ಒಪ್ಪಿ ತನ್ನ ತನೂಭವನ ಉತ್ತಮಾಂಗದಲ್ಲಿ ಹೂಗಳ ಬೆಳ್ಸರಿಯನ್ನು ಸುರಿದನು. ಆದರೆ ಹೂಗಳು ಅಲ್ಲಿ ನಿಲ್ಲದೆ ಕೆಳಗೆ ಬಿದ್ದುವು. ಅದನ್ನು ಕಂಡು ಸುರಾಧಿಪನು ತನ್ನ ರತ್ನವಿಸ್ಫುರಿತ ಕಿರೀಟವನ್ನು ಅರ್ಜುನನ ತಲೆಗಿಟ್ಟು ಆತನಿಗೆ ಕಿರೀಟಿ ಎಂಬ ನಾಮವನ್ನು ಆನಂದದಿಂದ ಉಚ್ಚರಿಸಿ ಆತನ ಸಾಹಸವನ್ನು ಹೊಗಳಿದನು. ಬಳಿಕ ಖಾಂಡವವನದಹನದಲ್ಲಾದ ಹೊಗೆಯಿಂದಲೂ ಮಹಾನಾಗಗಳ ವಿಷದುಸಿರಿನ ಹೊಗೆಯಿಂದಲೂ ಕರಂಗಿ ಕಪ್ಪಾದ ಅರ್ಜುನನ ಮೆಯ್ಯನ್ನು ಮತ್ತು ಪ್ರಚಂಡ ಗಾಂಡೀವ-ವ್ಯಾಘಾತದಿಂದ ಇಂದ್ರನೀಲಗಳನ್ನು ಅಡಸಿದಂತಿರುವ ಮುಂಗೈಯನ್ನು ಕಂಡು ಅರ್ಜುನನಿಗೆ ಕೃಷ್ಣನೆಂದು ಹೆಸರಿಟ್ಟನು. ಆಗ ಬ್ರಹ್ಮನು ಧನಂ-ಜಯನನ್ನು ಬ್ರಹ್ಮಾಯುವಾಗೆಂದು ಹರಸಿದನು. ಈಶ್ವರನು ನಿನಗೂ ನನಗೂ ಏತರಲ್ಲಿಯೂ ವಿಕಲ್ಪವೂ ವಿಚ್ಛಿನ್ನವೂ ಇಲ್ಲೆಂದನು. ಮೂ-ವರೂ ಅರ್ಜುನನನ್ನು ಹರಸಿ ತಂತಮ್ಮ ವಾಸಗಳಿಗೆ ಹೋದರು.

ಅಮರೇಂದ್ರನಂದನನು ಇಂತು ತಾನು ನುಡಿದಂತೆ ಖಾಂಡವ-ವನವನ್ನು ಅಗ್ನಿದೇವನಿಗೆ ಉಣಿಸಿದನು. ಆಗ ಸ್ವಾಹಾಂಗನಾನಾಥನು ಸಂಪೂರ್ಣಮನೋರಥನಾಗಿ ಖಟ್ವಾಂಗನೆಂಬ ಅರಸನ ಯಜ್ಞದಲ್ಲಿ ಆತನು ತಂದ ಘೃತಸಮುದ್ರವನ್ನು ಕುಡಿದುದರಿಂದುಂಟಾದ ರೋಗವು ಇಂದು ಹೋದುದೆಂದು ನೀರೋಗನಾಗಿ ಮಹಾನುರಾಗದಿಂದ ಹರಸಿ ಹೋದನು. ಬಳಿಕ ಕೃಷ್ಣಾರ್ಜುನರಿಬ್ಬರೂ ಇಂದ್ರಪ್ರಸ್ಥಕ್ಕೆ ಹೊರಟು ಬಂದರು. ಆಗ ಧರ್ಮರಾಜನು ಮೊದಲಾಗಿ ಒಡಹುಟ್ಟಿದವರು ವೈಭವ-

ದಿಂದ ಎದುರುಗೊಳ್ಳಲು ಬಂದಿರಲು ಪರಸೈನ್ಯಭೈರವನು ಕೃಷ್ಣನೊಡನೆ ತನ್ನ ಮಂದಿರವನ್ನು ಪ್ರವೇಶಿಸಿದನು.

—ಸಾಲಿ ರಾಮಚಂದ್ರರಾಯ.

೧. ಖಾಂಡವವನ ದಹನದಿಂದ ಅರ್ಜುನನಿಗೆ ದೊರೆತ ಮರ್ಯಾದೆ ಶ್ರೇಯಸ್ಸುಗಳು ಯಾವವು? ೨. ಖಾಂಡವವನ ದಹನ ಕಾಲದಲ್ಲಿ ಅರ್ಜುನನು ಶರಪಂಜರವನ್ನು ಏಕೆ ನಿರ್ಮಿಸಬೇಕಾಯಿತು? ೩. ಅರ್ಧಾವಲಿಕ, ಮಯ, ಅಶ್ವಸೇನ ಇವರ ಪರಿಚಯವನ್ನು ಹೇಳಿರಿ. ೪. ಅರ್ಜುನನಿಗೆ ಕಿರೀಟಿ, ಕೃಷ್ಣ ಎಂಬ ಹೆಸರುಗಳು ಹೇಗೆ ಬಂದವು? ೫. ಖಾಂಡವವನದ ದಹನದಲ್ಲಿ ಕೃಷ್ಣನು ಯಾವ ಬಗೆಯ ಸಹಾಯವನ್ನು ಮಾಡಿದನು? ಕೊನೆಗೆ ಅರ್ಜುನನನ್ನು ಹೇಗೆ ಸಂಭಾವಿಸಿದನು?

## ೪೬. ಕೊಡಗು ಬೆಡಗಿನ ಬೀಡು

**[ ಕೊಡಗು ಸೃಷ್ಟಿಸೌಂದರ್ಯದ ನೆಲೆವೀಡು. ಕೊಡಗಿನ ರಾಜಧಾನಿಯಾದ ಮಡಿಕೇರಿಗೆ ಕವಿ ಹೋಗಿದ್ದಾಗ ಅಲ್ಲಿಯ ಅನುಪಮವೂ ದಿವ್ಯವೂ ಆದ ಸೊಬಗನ್ನು ಮನವಾರೆ ಸವಿದು ಸವಿದು ತನ್ನ ಹೃದಯದಲ್ಲಿ ಉಕ್ಕಿ ಬಂದ ಭಾವನೆಗಳನ್ನು ಇಲ್ಲಿ ಚಿತ್ರಿಸಿರುವನು. ]**

ಕೊಡಗು ಬೆಡಗಿನ ಬೀಡು ! ಸೌಂದರ್ಯದಮೃತಮಂ
ಕುಡಿಯಿಮೆಲೆ ಕಣ್ಗಳಿರ ! ಇದೊ ಮಂಜು ಬಿತ್ತರಿಸಿ
ಕಡಲವೊಲ್ ತೋರ್ದಪುದು ಮೇಲೆಳ್ದ ಗಿರಿಸಾನುಗಳ್
ದ್ವೀಪನಿವಹಮಾಗೆ ||
ಅಡಿಯಿಂದೆ ಮುಡಿವರಂ ಬೆಟ್ಟುಗಳ್ ನೀಳ್ದೆಸೆವ
ಗಿಡುಗಳಿಂ ಪಸಿರೇರಿ ಸೌಂದರ್ಯದಧಿದೇವಿ-
ಯೆಡೆಯಾಡುವೊಳ್ಪವೆತ್ತೆಡೆಗಳಾಗಿತ್ತಲಿದೊ ಸೊಗಯಿಪುವು
ಸೊಂಪುವೆತ್ತು ! || ೧ ||

ಬಿಸಿಲಲೆಗಳೊಳಗಿಂದೆ ಸೋಸಿ ಬರ್ಪುದು ಮತ್ತೆ
ಪಸಿರ ಮೇಲ್ ನೀರ ಮೇಲಲೆವೆಲರ್ ಸುಳಿದಪುದು ;
ಬಿಸುಪಳಿಯದಿರ್ದಪುದೆ ? ಕೊಡಗು ತಣ್ಣೆಳಲ
ತವರೂರಲೇ ತಣ್ಪಿನಿಂಬು !

ಪೊಸತೆರದ ಬಗೆವಗೆಯ ವಿಹಗಂಗಳೆತ್ತಲುಂ
ಮಿಸುಪ ಮೈವಣ್ಣದಿಂ ಮನವೊಲಿಪ ಮಾಟದಿಂ-
ದೆಸೆದು ನುಣ್ದನಿಗುಡುತೆ ನಲಿದಪುವು ; ಮನಮಿಲ್ಲಿ
ನಲ್ಪಗೆಗಳೆಡೆಯಾದುದು ! ॥ ೨



ಪರಿವ ಕಾಳ್ಪುರದ ಮೆಲ್ಲುಲಿಯಿಂದೆ ಬಗೆಗೊಳಿಪ
ದರಿಯಿತ್ತಲುತ್ತುಂಗಶಿಖರಂಗಳಿಂದೆಸೆವ
ಗಿರಿಯತ್ತಲೇಂ ಪೆಂಪೊ ! ತೆಂಬೆಲರ ಸೊಗಯಿಸುವ
ಸೋಂಕಿನಿಂ ಸೊಗಮಿದೆನಿತೊ

ಬಿರಿವೂಗಳನಿಗಂಪಿಗೆನಿತೊಂದು ತುಂಬಿಗಳೊ !
ಸುರಯುವತಿಯರ್ ನಲ್ಲರೊಡನಿಲ್ಲಿ ಸಾರ್ತ್ತಂದು
ಸರಸವಾಡಲ್ಕುಚಿತವಾದ ನೆಲವಿದು ! ಕೊಡಗು
ಕರುನಾಡ ಮುದ್ದುಗೂಸು ! || ೩ ||

ಚೆಲುವಿನೀ ಕಡಲೊಳಗೆ ಸಾಲ್ವಿಡಿದು ಸೊಂಪೆಸೆವ
ಮಲೆಗಳಿವು ಸವಿಗಂಪ ತರುರಾಜಿಗಳಿನದೇ-
ನಲೆವಲೆವ ತೆರೆಗಳಂತೆಸೆದಪುವೊ ! ನವವೃಷ್ಟಿಯಿಂ
ಸೃಷ್ಟಿಗೇಂ ಕಾಂತಿಯೊ ! ||

ನೆಲಮಾಗಸಂ ದಿಕ್ಕುಗಳ್ ರಾಮಣೀಯಕದ
ನಿಲಯಂಗಳಿವನೆನಿತು ನೋಡಿದೊಡಮಕ್ಷಿಗಳ್
ತೊಲಗಲೊಲ್ಲವು, ಮನಂ ತಣಿಯದೋಲಾಡಿ
ಸೌಂದರ್ಯದೀಜಳಧಿಯಲ್ಲಿ ! || ೪ ||

ಬಂದೆನಾನಿಲ್ಲಿಗೆನ್ನಳ್ಕರಿನ ತಾಯ್ನೆಲದ
ಚೆಂದಮಂ ನೋಡುತುಂ ಶ್ರೀನಿವಾಸನ ನಲ್ಮೆ-
ಯಿಂದೆ ಸುಖದಿಂದೆ ಸಂಚರಿಸುತುಂ ; ಬಹುಕಾಲದಿಚ್ಛೆ
ಕೈಗೂಡಿತಿಂದು ! ||

ಎಂದು ಕಣ್ತುಂಬೆ ಕರುನಾಡ ಚೆಲುವಂ ಕಾಣ್ಬೆ-
ನೆಂದು ಮನದೊಳಗನಿಶವಾಗೆ ಚಿಂತಿಸುತಿರ್ದೆ-
ನೆಂದು ತಿಳಿದಿರ್ದರಾರಿಂತು ಸೊಬಗಿನ ಸುಗ್ಗಿಯಿದಿರೊಳಾಂ
ನಿಲ್ವೆನೆಂದು ? || ೫ ||

ಎನ್ನ ನಾಡಂದಮಿಂತೆಂದು ಭಾವಿಸಿದೆನಿ-
ಲ್ಲಿನ್ನೆಗಂ ! ಭಾವನೆಗೆ ಚೆಂದಮಿದು ನಿಲುಕುವುದೆ ?
ನಿನ್ನ ಸೌಂದರ್ಯಮಿದು ನಿನ್ನ ಪೆರ್ಮೆಯ ಕುರುಪು !
ಕರುನಾಡೆ, ಪುಣ್ಯಭೂಮಿ ! ||

ಇನ್ನರಿವುದರಿದಲ್ತು ನಿರ್ಮಳಾಂತಃಕರಣ-
ರುನ್ನತಗುಣೋದಯರ್ ಮಂಗಳನಿಕೇತನರ್
ನಿನ್ನೊಡಲೊಳೆಂತುದಯಿಸಿದರೆಂದು ! ಕರುನಾಡು
ದೇವರಳ್ಕರಿನ ನಾಡು ! || ೬

ದರಿಗಳಿರ, ಗಿರಿಗಳಿರ, ಝರಿಗಳಿರ, ಮೃಗಪಕ್ಷಿ-
ತರುಗಳಿರ, ಪೂಗಳಿರ, ತೆಂಬೆಲರೆ, ಬೆಳ್ಮಂಜೆ,
ನರುಗಂಪೆ, ಇಂಚರವೆ, ಬೀಳ್ಕೊಳ್ವೆನ್ನೈ ! ನಮೋ !
ನಿಮ್ಮ ಸೌಹಾರ್ದಮೆನಿತೊ !

ಇರಿಸಿದಿರ್ ಸೌಂದರ್ಯಸಾರಸರ್ವಸ್ವಮಂ
ತೆರೆದೆನ್ನ ಮುಂದೆ ನೀಮ್ ! ಪೊರಗಣ್ಗೆ ನೀಮಿನ್ನು
ಮರೆಯಾದೊಡಂ ಹೃದಯಭಿತ್ತಿಯೊಳ್ ಚಿತ್ರಿತರ್ !
ನಿಮ್ಮನಾಂ ಮರೆವುದೆಂತು ! || ೭

—ಸಾಲಿ ರಾಮಚಂದ್ರರಾಯ.

೧. ' ಕೊಡಗು ಬೆಡಗಿನ ಬೀಡು ! ' ಅದು ಹೇಗೆ ? ೨. ಕೊಡಗಿನ ಯಾವ ಯಾವ ದೃಶ್ಯಗಳು ಕವಿಯ ಹೃದಯಭಿತ್ತಿಯಲ್ಲಿ ಅಳಿಸದಂತೆ ನಿಚ್ಚಳವಾಗಿ ಚಿತ್ರಿತವಾದವು ? ೩. ' ಕರುನಾಡೆ ಪುಣ್ಯಭೂಮಿ, ' ' ಕರು-ನಾಡು ದೇವರಳ್ಕರಿನ ನಾಡು ! ' ಎಂದು ಕವಿ ನುಡಿದದ್ದೇಕೆ ?

## ೪೭. ಉತ್ತರಕುಮಾರನ ಶೌರ್ಯ

[ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಸಂಸ್ಕೃತ ಮಹಾ-ಭಾರತವನ್ನವಲಂಬಿಸಿ ಗದ್ಯದಲ್ಲಿ ಬರೆದ ಕನ್ನಡ ಮಹಾಭಾರತದ ಒಂದು ಭಾಗವನ್ನು ಇಲ್ಲಿ ಆರಿಸಲಾಗಿದೆ. ಕೃಷ್ಣರಾಜ ಒಡೆಯರು ಕಾವ್ಯರಚನಾ-ಸಾಮರ್ಥ್ಯವುಳ್ಳವರೂ ಆಗಿದ್ದರು. ಹಳಗನ್ನಡದ ಶೈಲಿ ತಿಳಿಯಾಗುತ್ತ

ಹೊಸಗನ್ನಡವಾಗಿ ಮಾರ್ಪಡುವ ಸಂಧಿಕಾಲದಲ್ಲಿ ಕನ್ನಡ ಭಾಷೆಯ ಪರಿಸ್ಥಿತಿ ಹೇಗಿತ್ತೆಂಬದನ್ನು ತೋರಿಸುವದೇ ಈ ಆಯಿಕೆಯ ಉದ್ದೇಶ.

ಕಥಾಸಂದರ್ಭ— ಪಾಂಡವರು ಅಜ್ಞಾತವಾಸಕ್ಕಾಗಿ ವಿರಾಟರಾಜನ ನಗರಿಯನ್ನು ಸೇರಿದಾಗ ಕೌರವರು ಒಮ್ಮೆ ಅಲ್ಲಿಯ ಗೋವುಗಳನ್ನು ಅಪಹರಿಸಿಕೊಂಡು ಹೋದರು. ಆಗ ಯುದ್ಧ ಮಾಡುವದಕ್ಕಾಗಿ ವಿರಾಟಪುತ್ರ ಉತ್ತರಕುಮಾರನು ಅರ್ಜುನನೊಂದಿಗೆ ರಣಭೂಮಿಗೆ ಹೋದನು. ಮಾತಿನಲ್ಲಿ ಮಾತ್ರ ಶೂರನಾದ ಉತ್ತರಕುಮಾರನ ಪರಿಸ್ಥಿತಿ-ಯನ್ನು ಇಲ್ಲಿ ವರ್ಣಿಸಲಾಗಿದೆ ]

ಎಲೈ ಜನಮೇಜಯರಾಯನೇ, ಆ ಬಳಿಕ ಉತ್ತರನು ನಗರದಿಂದ ಹೊರಟು ಸಾರಥಿಯಂ ನೋಡಿ, "ವೈರಿಶ್ರೇಷ್ಠರಂ ಸಂಹರಿಸಿ ಗೋವುಗಳಂ ತಿರುಗಿಸುವದಕ್ಕೆ ಕೌರವರಿರುವ ತಾವಿಗೆ ಶೀಘ್ರವಾಗಿ ರಥವನ್ನು ನಡೆಸು," ಎಂದು ನುಡಿದು ಧನಂಜಯನು ಕುದುರೆಗಳಂ ಚುರುಕಾಗಿ ನಡೆಯಿಸಲು, ಕಾಂಚನದ ಮಾಲಿಕೆಗಳಿಂದ ಅಲಂಕೃತ-ಗಳಾದ ಆ ಕುದುರೆಗಳು ಆಕಾಶಕ್ಕೆ ಹಾರುತ್ತಿರಲು ಕೌರವ ಬಲವನ್ನು ನೋಡುತ್ತಾ, ಭಯಪಡದೆ ಕೆಲವು ದೂರ ನಡೆದು, ಪಿತೃವನ ಮಾರ್ಗ-ದಿಂದ ಹೋಗಿ, ಭೀಷ್ಮ ದ್ರೋಣ ಕೃಪ ಅಶ್ವತ್ಥಾಮ ಸುಯೋಧನಾದಿ ಯೋಧಶ್ರೇಷ್ಠರೊಡನೆ ಕೂಡಿ ರಥಗಜ ತುರಗ ಪದಾತಿ ಸಮೇತವಾಗಿ ಉಲ್ಲೋಲ ಕಲ್ಲೋಲವಾಗಿರುವ ಸಮುದ್ರದ ಹಾಗೆ ಧ್ವನಿಮಾಡುತ್ತಿರುವ ಆ ಸೈನ್ಯವು ಗೋಗಣವನ್ನು ಮುಂದಿಟ್ಟುಕೊಂಡು ನಡೆಯುತ್ತಲಿರುವಾಗ ನಾನಾ ವರ್ಣದ ಭೂಮಿಯ ಧೂಳಿಯು ಆಕಾಶದಲ್ಲಿ ಎಲೆಗಳಿಂದಲೂ ತಳಿರುಗಳಿಂದಲೂ ಪುಷ್ಪಗಳಿಂದಲೂ ಒಪ್ಪುತ್ತಲಿರುವ ವನಪ್ರದೇಶದ ಹಾಗೆ ಕಾಣಿಸಲು ಅದನ್ನು ನೋಡಿ ಭಯಪಟ್ಟು, ಶರೀರದಲ್ಲಿ ರೋಮಾಂಚವು ಹುಟ್ಟಲು ಅರ್ಜುನನಂ ನೋಡಿ, "ಮದ್ದಾನೆಗಳಿಂದಲೂ ಪದಾತಿಗಳಿಂದಲೂ ಕುದುರೆಗಳಿಂದಲೂ ಅತಿಭಯಂಕರವಾಗಿಯೂ ಮಹಾರಥಿಕ ಯುಕ್ತವಾಗಿಯೂ ಧ್ವಜ ಬಿರುದುಗಳಿಂದ ವಿರಾಜಿತ-ವಾಗಿಯೂ ಇರುವ ಕೌರವ ಸೈನ್ಯಮಂ ನೋಡಿದ ಮಾತ್ರದಿಂದಲೆ ನನ್ನ

ಮನಸ್ಸು ಚಲಿಸುತ್ತಲಿದೆ ; ದೇವಾಸುರ ಸಮೂಹಕ್ಕೂ ನೋಡುವದಕ್ಕೆ ಅಶಕ್ಯವಾಗಿರುವ ಆ ಸೈನ್ಯವನ್ನು ಹೊಗುವದಕ್ಕೆ ನಾನು ಎಷ್ಟು ಮಾತ್ರದವನು ! ಭೀಷ್ಮ ದ್ರೋಣ ಕೃಪ ಅಶ್ವತ್ಥಾಮ ಕರ್ಣ ವಿಕರ್ಣ ವಿವಿಂಶತಿ ಬಾಹ್ಲಿಕ ಸೋಮದತ್ತ ದುರ್ಯೋಧನ ದುಶ್ಯಾಸನರೂ ಇನ್ನೂ ಅನೇಕ ಮಹಾರಥಿಕರೂ ಪರಬಲಭಯಂಕರವಾದ ಧನಸ್ಸುಗಳನ್ನು ತೆಗೆದುಕೊಂಡು ತೋರಿಸುವ ಶಸ್ತ್ರಾಸ್ತ್ರ ಕೌಶಲವನ್ನೂ ಧ್ವಜ ವಿರಾಜಮಾನವಾದ ಆನೆಗಳನ್ನೂ ವಿಚಿತ್ರಪತಾಕಾಲಂಕೃತವಾದ ರಥಗಳನ್ನೂ ಕಾಂಚನ ಭೂಷಣಾಲಂಕೃತರಾದ ರಾವುತರನ್ನೂ ನೋಡಿ, ಭಯಾತಿಶಯದಿಂದ ನನ್ನ ಶರೀರದಲ್ಲಿ ಪುಳಕಾಂಕುರಗಳು ಹುಟ್ಟಿವೆ ; ಎಲೆ ಬೃಹನ್ನಳೆಯೆ, ನೋಡು, ಇವರನ್ನು ಜಯಿಸುವೆನೆಂದು ಅಜ್ಞಾನದಿಂದ ನುಡಿದು ಬಂದೆನು ; ವಿರಾಟರಾಯನು ಪಟ್ಟಣದ ಸಂರಕ್ಷಣೆಗೆ ನನ್ನ ಒಬ್ಬನನ್ನೇ ಇರಿಸಿ ಸಮಸ್ತ ಸೇನಾಪರಿವೃತನಾಗಿ ತ್ರಿಗರ್ತನ ಮೇಲೆ ಯುದ್ಧಕ್ಕೆ ಹೋದನು ; ಸಹಾಯಕ್ಕೆ ಸೈನ್ಯವಿಲ್ಲದಿರುವಾಗ ನಾನು ಯುದ್ಧವಿಶಾರದರಾಗಿಯೂ ಶಸ್ತ್ರಾಸ್ತ್ರ ಪಾಣಿಗಳಾಗಿಯೂ ಮಹೋತ್ಸಾಹದಿಂದ ಮದ್ದಾನೆಗಳಂತೆ ಬರುತ್ತಿರುವ ಕೌರವರ ಮೇಲೆ ಕಾಣಿಸಿಕೊಂಡು ಯುದ್ಧವನ್ನು ಮಾಡಲಾರೆನು ; ರಥವನ್ನು ಶೀಘ್ರವಾಗಿ ತಿರುಗಿಸು," ಎಂದು ಬಹುಪ್ರಕಾರವಾಗಿ ಪ್ರಲಾಪಿಸಿದನು.

ಅರ್ಜುನನು ಉತ್ತರನಂ ನೋಡಿ, ಎಲೈ, ಅರಸಿನ ಮಗನೇ, ಶತ್ರುಗಳು ಯುದ್ಧದಲ್ಲಿ ಕಾಣಿಸಿಕೊಂಬುವದಕ್ಕಿಂತಲೂ ಮೊದಲೆ ಅವರು ಹಾಸ್ಯಮಾಡುವ ಹಾಗೆ ಇಷ್ಟು ಭಯವನ್ನು ನೀನು ಪಡೆಯಬಹುದೇ ? ಕುರುಶ್ರೇಷ್ಠರನ್ನು ಜಯಿಸುವದಕ್ಕೆ ರಥವನ್ನು ನಡೆಸು, ಎಂದು ನನ್ನ ಕೂಡೆ ನುಡಿದೆಯಲ್ಲ; ವಿಚಿತ್ರ ವರ್ಣಗಳ ಧ್ವಜಗಳಿಂದ ವಿರಾಜಿತವಾಗಿಯೂ ನಿಶಿತಾಯುಧ ಸಂಪೂರ್ಣವಾಗಿಯೂ ಸಮುದ್ರದ ಹಾಗೆ ದುರವಗಾಹವಾಗಿಯೂ ಇರುವ ಸೈನ್ಯದೊಡನೆ ಯಾರು ಬಂದು ಎದುರಾದರೂ ತುಮುರು ತುಮುರಾಗಿ ಸಂಹರಿಸುವದಾಗಿ ಕುರುವೀರಶ್ರೇಷ್ಠರ ಹಿಂದುಗಡೆಯಲ್ಲಿ ನೀನು ಹೇಳಿದ ಪ್ರಕಾರವಾಗಿ ರಥವನ್ನು ಅವರ ಮುಂದೆ ನಿಲ್ಲಿಸುತ್ತೇನೆ ; ಭಯವನ್ನು ಬಿಟ್ಟು ಯುದ್ಧವನ್ನು ಮಾಡು ; ಅಂತಃ-

ಪುರದಲ್ಲಿ ಸ್ತ್ರೀಯರ ಮುಂದೆ ಸಕಲವಾದ ಜನರೂ ಕೇಳುತ್ತಿರಲು ವೈರಿ-ಗಳನ್ನು ಜಯಿಸುವ ವೀರಾಲಾಪಗಳನ್ನು ನುಡಿದು ರಥವನ್ನೇರಿ ಹೊರಟು ಬಂದೆಯಲ್ಲ ; ಇವೆಲ್ಲವನ್ನೂ ಎಣಿಸದೆ ಯುದ್ಧವನ್ನು ಮಾಡದೆ ಗೋವು-ಗಳನ್ನು ಶತ್ರುಗಳಿಗೆ ಒಪ್ಪಿಸಿ, ತಿರುಗಿ ಪಟ್ಟಣಕ್ಕೆ ಹೋದರೆ ಅಲ್ಲಿರುವ ಜನರು ಹಾಸ್ಯಮಾಡರೆ? ಸಾರಥ್ಯದಲ್ಲಿ ಇಂಥಾವನಿಲ್ಲವೆಂದು ಸೈರಂಧ್ರಿಯು ನಿನ್ನ ಕೂಡೆ ಹೇಳಿದ್ದರಿಂದ ನೀನು ನನ್ನನ್ನು ಈ ಕಾರ್ಯವನ್ನು ಅವಶ್ಯ-ವಾಗಿ ನಿರ್ವಹಿಸಬೇಕೆಂದು ಪ್ರಾರ್ಥಿಸಲು ನಾನು ಅಂಗೀಕರಿಸಿದೆನು ? ಇಂಥಾ ನಾನು ಕೌರವರನ್ನು ಜಯಿಸಿ ಹಸುಗಳನ್ನು ತಿರುಗಿಸದೆ ಪಟ್ಟಣಕ್ಕೆ ಬರಲಾರೆನು ; ನೀನು ಸ್ಥಿರಚಿತ್ತನಾಗಿರು," ಎಂದನು.

ಉತ್ತರನು ಅರ್ಜುನನನ್ನು ನೋಡಿ, "ಧೃತರಾಷ್ಟ್ರನ ಮಕ್ಕಳು ಹಸುಗಳನ್ನು ಹೊಡೆದುಕೊಂಡು ಹೋದರೂ ಹೋಗಲಿ, ನನ್ನನ್ನು ಹಾಸ್ಯವಂ ಮಾಡಿದರೂ ಮಾಡಲಿ, ನಾನು ಯುದ್ಧವನ್ನು ಮಾಡ-ಲಾರೆನು ; ಇಗೋ ಪಟ್ಟಣಕ್ಕೆ ಹೋಗುವೆನು ನೋಡು" ಎಂದು ನುಡಿ-ಯುತ್ತ ಭಯಭ್ರಾಂತ ಹೃದಯನಾಗಿ, ಧನುರ್ಬಾಣಗಳನ್ನು ಭೂಮಿಯಲ್ಲಿ ಬಿಸಾಟಿ, ನಾಚಿಕೆಯಿಲ್ಲದೆ ರಥದಿಂದ ಧುಮುಕಿ ಓಡುವದಕ್ಕೆ ಯತ್ನ-ಮಾಡಿದನು.

ಅರ್ಜುನನು, "ಎಲೈ ಉತ್ತರನೇ, ಕ್ಷತ್ರಿಯನಿಗೆ ಓಡುವದು ಧರ್ಮ-ವಲ್ಲ ; ಓಡಿಹೋಗುವದಕ್ಕಿಂತಲೂ ಯುದ್ಧದಲ್ಲಿ ಶರೀರವನ್ನು ಬಿಡುವದೆ ಲೇಸು," ಎಂದು ಆತನಂ ಕುರಿತು ನುಡಿಯುತ್ತ, ರಥಾಶ್ವಗಳ ಹಗ್ಗ-ಗಳನ್ನು ನೊಗದಲ್ಲಿ ಕಟ್ಟಿ, ರಥದಿಂದ ಭೂಮಿಯಲ್ಲಿ ಧುಮುಕಿ, ಜಡೆಯು ಅಲ್ಲಾಡುತ್ತಿರಲು ಚಂದ್ರಕಾವೀ ಸೀರೆಯ ನೆರಿಗೆಗಳು ಜೋಲಾಡುತ್ತಿ-ರಲು ಪಾದಘಟ್ಟನದಿಂದ ಭೂಮಿಯು ನಡುಗುತ್ತಿರಲು ಉತ್ತರ ಕುಮಾರನಂ ಬೆನ್ನಟ್ಟಿ ಸಂಗಡಲೇ ಓಡಿದನು.

ಇತ್ತಲು ಉತ್ತರನು ನಿಲ್ಲದೆ ಓಡುತ್ತಿರುವಾಗ ಅರ್ಜುನನು ನೂರು ಹೆಜ್ಜೆ ಓಡಿ ಆತನ ಜುಟ್ಟನ್ನು ಹಿಡಿದು ನಿಲ್ಲಿಸಲು ಉತ್ತರನು ಅರ್ಜುನ-ನನ್ನು ಕುರಿತು, "ಎಲೆ ಬೃಹನ್ನಳೆಯೆ, ನಿನಗೆ ಭೃತ್ಯನಾಗಿರುವೆನು,

ನನ್ನನ್ನು ಕೊಲ್ಲಿಸಬೇಡ, ಮನೆಗೆ ಹೋಗುವೆನು ಬಿಡು," ಎಂದು ಪ್ರಾರ್ಥಿಸುತ್ತ ಆತನ ಪಾದಗಳಲ್ಲಿ ಬಿದ್ದು, ಹೆಬ್ಬೆಟ್ಟನ್ನು ಕಚ್ಚಿಕೊಂಡು ಬೇಡಿಕೊಳ್ಳುತ್ತ, ಅರ್ಜುನನು ಭಯಪಡಬೇಡವೆಂದು ಅಧಿಕವಾಗಿ ಹೇಳಿ-ದರೂ ನಂಬದೆ, ಅರ್ಜುನನಂ ಕುರಿತು, "ತಾಯಿಯ ಮರೆಯಲ್ಲಿ ಬಾಲ-ನಾಗಿ ಚಳಿಗಾಳಿಗಳನ್ನರಿಯದೆ ಸುಖವಾಗಿದ್ದ ನಾನು ಯುಗಾಂತ ಕಾಲ-ದಲ್ಲಿ ದಡವನ್ನು ಮೀರಿ ಬಂದ ಸಮುದ್ರದ ಹಾಗೆ ಬಂದಿರುವ ಕೌರವ ಸೈನ್ಯವನ್ನು ಜಯಿಸುವದಕ್ಕೆ ಸಮರ್ಥನೆ? ಮೊದಲು ಸ್ತ್ರೀಸಮೂಹ-ಮಧ್ಯದಲ್ಲಿ ಆಡಿದ ಮಾತುಗಳೆಲ್ಲವೂ ಯೌವನಗರ್ವದಿಂದ ನುಡಿದ-ವಾಕ್ಯಗಳೆಂದು ಎಣಿಸಬೇಡ; ನಾನು ಕೌರವ ಬಲವಂ ನೋಡಲಾರೆನು; ಚಿನ್ನದ ಆಭರಣಗಳಿಂದ ಅಲಂಕೃತವಾದ ರಥವನ್ನೂ ಹತ್ತು ಮದ್ದಾನೆ-ಗಳನ್ನೂ ಅಪರಿಮಿತವಾದ ಅಶ್ವಗಳನ್ನೂ ಅಸಂಖ್ಯಾತವಾದ ಹಸುಗಳನ್ನೂ ಸರ್ವಾಭರಣ ಭೂಷಿತರಾದ ಅರವತ್ತು ಮಂದಿ ಕನ್ಯೆಯರನ್ನೂ ವೈಡೂರ್ಯ-ವಿಚಿತ್ರವಾದ ಎಂಟು ಮಣಿಮುಕ್ತಾಹಾರಗಳನ್ನೂ ಗ್ರಾಮಗಳನ್ನೂ ಒಮ್ಮಡಿಯಾಗಿ ಕೊಟ್ಟು ಪ್ರತಿದಿವಸದಲ್ಲಿಯೂ ನೂರು ಮೊಹರುಗಳನ್ನೂ ನೂರು ರೂಪಾಯಿಗಳನ್ನೂ ನಿನಗೆ ಕೊಡುವೆನು; ಶೋಕಾಕ್ರಾಂತಳಾದ ಸುದೇಷ್ಣೆಯ ಸಮೀಪಕ್ಕೆ ನನ್ನಂ ಕಳುಹಿಸು; ಅಲ್ಲದಿದ್ದರೆ ನಿನ್ನ ಮುಂದು-ಗಡೆಯಲ್ಲಿ ಪ್ರಾಣಗಳಂ ಬಿಡುತ್ತೇನೆ," ಎಂದು ನುಡಿಯುತ್ತ ದೈನ್ಯ-ವನ್ನೈದಿ ಹಂಬಲಿಸಿದನು.

ಅರ್ಜುನನು ನಸುನಗುತ್ತ ಭಯಭ್ರಾಂತನಾದ ಉತ್ತರನನ್ನು ರಥದ ಸಮೀಪಕ್ಕೆ ಕರತಂದು ಆತನನ್ನು ಕುರಿತು, "ನಾನು ಅರಸಿಗಾದರೂ ಅರಸಿನ ಮಗನಿಗಾದರೂ ಸಾರಥ್ಯವಂ ಮಾಡಿದರೆ ಜಯವು ಸಿದ್ಧವು; ಈಗ ಪಲಾಯನವನ್ನೈದದೆ ಸಂಗಡಲೆ ಕುರುಬಲದ ಮೇಲೆ ಕಾಣಿಸಿ-ಕೊಂಡು ಜಯವನ್ನು ಪಡೆದು, ಈ ಭೂಮಂಡಲವನ್ನಾಳುತ್ತ ದಿಗಂತ ವಿಶ್ರಾಂತ ಕೀರ್ತಿಯಿಂದ ನೀನು ಪ್ರಕಾಶಿಸು; ಹಾಗಲ್ಲದಿದ್ದರೆ ಯುದ್ಧ-ದಲ್ಲಿ ಹತನಾದರೆ ಸ್ವರ್ಗ ಭೋಗವುಂಟು; ಶೌರ್ಯವನ್ನು ಬಿಡುವದು ಯಾರಿಗೂ ಉಚಿತವಲ್ಲ; ಈ ಕೌರವ ಸೈನ್ಯವನ್ನು ಗೆಲ್ಲುವದಕ್ಕೆ ಒಂದು ಪ್ರಯತ್ನಮಂ ಮಾಡುತ್ತೇನೆ; ಯುದ್ಧವನ್ನು ಮಾಡದಿದ್ದರೆ ನೀನು ನನ್ನ

ಬಾಹುಬಲದಿಂದ ರಕ್ಷಿತನಾಗಿ ಸಾರಥ್ಯಮಂ ಮಾಡಿದರೆ ನಾನು ಶತ್ರು-ಭಯಂಕರವಾದ ಪರಾಕ್ರಮವುಳ್ಳ ಮಹಾರಥಿಕರಿಂದ ರಕ್ಷಿಸಲ್ಪಟ್ಟ ಸೈನ್ಯಮಂ ಪೊಕ್ಕು, ಯುದ್ಧವಿಶಾರದರಾದ ಮಹಾವೀರಾಗ್ರೇಸರರಾದ ರಥಿಕರನ್ನು ಯಮಪಟ್ಟಣಕ್ಕೆ ಕಳುಹಿಸಿ ಗೋವುಗಳನ್ನು ತಿರುಗಿಸುವೆನು ; ಭಯಪಡಬೇಡ," ಎಂದು ಎಷ್ಟು ಹೇಳಿದರೂ ಆತನು ಮನಸ್ಸಿನಲ್ಲಿ ಭಯಪಟ್ಟು ರಥವನ್ನೇರುವಕ್ಕೆ ಯೋಚಿಸುತ್ತಿರಲು ಉಪಾಯದಿಂದ ಆತನಿಗೆ ಭಯವನ್ನು ಪರಿಹರಿಸಿ ಸಂತವಿಟ್ಟು ರಥದ ಮೇಲೆ ಎತ್ತಿ ಕುಳ್ಳಿ-ರಿಸಿ, ಸಾರಥ್ಯವನ್ನು ಮಾಡುವದಕ್ಕೆ ಒಡಂಬಡಿಸಿ, ತಾನೂ ರಥವನ್ನೇರಿ, ಗಾಂಡೀವವನ್ನು ತೆಗೆದುಕೊಳ್ಳುವದಕ್ಕೆ ಬನ್ನೀಮರದ ಸಮೀಪಕ್ಕೆ ರಥ-ವನ್ನು ನಡೆಸಲು ಉತ್ತರನಿಗೆ ನೇಮಿಸಿದನು.

—ಕೃಷ್ಣರಾಜ ಒಡೆಯರು.

**೧. ಉತ್ತರಕುಮಾರನಿಗೆ ಕೌರವ ಸೇನೆ ಹೇಗೆ ಕಂಡಿತು ? ಅದರ ಪರಿಣಾಮವಾಗಿ ಅವನ ನಿರ್ಧಾರದ ಗತಿ ಏನಾಯಿತು ? ೨. (ಅ) ಅರ್ಜುನನು ಉತ್ತರಕುಮಾರನ ಮನಸ್ಸನ್ನು ಯಾವ ಯಾವ ಕಾರಣಗಳನ್ನು ಹೇಳಿ ತಿರುಗಿಸಲು ಯತ್ನಿಸುತ್ತಾನೆ ? ೩. ಉತ್ತರಕುಮಾರನ ಸ್ವಭಾವದ ಬಗ್ಗೆ ಒಂದು ವಾಕ್ಯವೃಂದವನ್ನು ಬರೆಯಿರಿ. (ಆ) ಉತ್ತರನು ಪ್ರತಿಯಾಗಿ ಅರ್ಜುನನಿಗೆ ಯಾವ ಯಾವ ಮಾತುಗಳನ್ನು ಹೇಳುತ್ತಾನೆ ?**

# ಕಠಿನ ಶಬ್ದಗಳ ಅರ್ಥ

**ಸಂಕೇತ.** ಮಂ. ಮಂಗಳೂರು ಕಡೆಯ ಶಬ್ದ, ಮೈ. ಮೈಸೂರು ಕಡೆಯ ಶಬ್ದ, ಉ. ಕ. ಉತ್ತರ ಕರ್ನಾಟಕದ ಶಬ್ದ, ಇಂ. ಇಂಗ್ಲಿಷ್ ಶಬ್ದ, ಹಿಂ. ಹಿಂದುಸ್ತಾನೀ ಶಬ್ದ, ದ್ಭ. ತದ್ಭವ ಶಬ್ದ, ತ್ಸ. ತತ್ಸಮ ಶಬ್ದ.

**ಅ**ಕ್ಕರು : ಪ್ರೀತಿ.
ಅಖಂಡದೀಪ (ಮೈ.) : ನಂದಾದೀಪ
ಅಗ್ಗವಣಿ (ಯ) : (ತ್ಸ. ಅರ್ಘ್ಯ-ಪಾನೀಯ) ಅರ್ಘ್ಯಜಲ.
ಅಗ್ಗಳಿಕೆ : ಹೆಚ್ಚಳ.
ಅಡಗು : ಮಾಂಸ. ೨. ಅದೃಶ್ಯವಾಗು.
ಅಡಸು : ಆಕ್ರಮಿಸು. ೨. ಒತ್ತಾಗಿ ಹೊಂದಿಸು
ಅಣಂ : ಸ್ವಲ್ಪವೂ. ೨. ಹೆಚ್ಚಾಗಿ.
ಅಣುಗ : ಹುಡುಗ, ಪ್ರೀತಿಯುವ.
ಅನರ್ಘ್ಯ (ನ+ಅರ್ಘ್ಯ) : ಅಮೌಲ್ಯ.
ಅನಲ : ಅಗ್ನಿ.
ಅನಿಲ : ಗಾಳಿ.
ಅನುಜ್ಞೆ ಒಪ್ಪಿಗೆ.
ಅನ್ನೆಗಂ ಅಷ್ಟರಲ್ಲಿ.
ಅನ್ನೆಯ : (ತ್ಸ.) ಅನ್ಯಾಯ.
ಅಪ+ದೆಸೆ : ದುರವಸ್ಥೆ, ಕೇಡು.
ಅಪರಂಜಿ : ಚೊಕ್ಕ ಬಂಗಾರ.
ಅಪೆಂಡಿಸಾಯ್ಟಿಸ್ (ಇಂ) : ಒಂದು ಕರುಳು ಬೇನೆ.
ಅಪ್ರತಿರಥ : ಇದಿರು ರಥ ಇಲ್ಲದವ, ಪ್ರತಿಭಟಿಸುವವರಿಲ್ಲದವ.
ಅ+ಭವ : ಹುಟ್ಟು ಇಲ್ಲದವ, ಶಿವ.
ಅಭಿಚಾರ : ಮಾಟಮಾಡುವದು.
ಅಭಿಹತ : ಹೊಡೆಯಲ್ಪಟ್ಟ.
ಅಮರ್ತ್ಯನಾಥ ದಿಶೆ : [ಅ+ಮರ್ತ್ಯ (ಮರಣವಿಲ್ಲದವ, ಸುರ)+ನಾಥ (ಒಡೆಯ, ಇಂದ್ರ) + ದಿಶೆ] ಪೂರ್ವದಿಕ್ಕು.
ಅರಳು : ಹೂ. ೨. ಹೂವಾಗು.
ಅರುಣ : ಕೆಂಪಾದ. ೨. ಸೂರ್ಯನ ಸಾರಥಿ.
ಅರ್ಚಿ : ಕಿರಣ ; ಜ್ವಾಲೆ.
ಅಲುಗು : ಅಲ್ಲಾಡು ; ಅಲ್ಲಾಡಿಸು.
ಅವಗಡಿಸು : ತೊಂದರೆಪಡಿಸು.
ಅವುಕು : ಹಿಚುಕು.
ಅವ್ಯಯಿತ್ವ : ನಷ್ಟವಾಗದಿರುವಿಕೆ.
ಅವ್ಯಾಹತ (ಅ+ವಿ+ಆ+ಹತ) : ಕುಗ್ಗಿಲ್ಲದ, ತಡೆಯಿಲ್ಲದ.
ಅಸದಳ : ಅಸಾಧ್ಯ.
ಅಂತವುರ : (ತ್ಸ. ಅಂತಃಪುರ) [ರಾಣಿ-ವಾಸ.
ಅಂಬು : ಬಾಣ. ೨. ನೀರು.
ಅಂಬು+ದ : ನೀರುಕೊಡುವದು, ಮೋಡ.
**ಆ**ಕುಲೆ : ವ್ಯಗ್ರಳು, ತೊಡಗಿದವಳು.
ಆಕೆವಾಳ್ತನ : ಶೂರತನ.
ಆಗಸ : (ತ್ಸ.) ಆಕಾಶ.
ಆಟೋಪ : ಅರ್ಭಟ.
ಆದೇಶ : ಅಪ್ಪಣೆ, ಸೂಚನೆ.
ಆಧಿ : ಮನೋವ್ಯಥೆ.

ಆಯತಾಂಬಕಿ : ಅಗಲವಾದ ಅಂಬಕ ( ಕಣ್ಣು ) ಉಳ್ಳವಳು ( ಸೀತೆ ).
ಆರಂಬಗಾರ ( ವ್ಯ. ) : ಒಕ್ಕಲಿಗ ( ಆರಂಬ : ಒಕ್ಕಲುತನ ).
ಆರಯ್ : ವಿಚಾರಿಸು, ಪರಾಮರಿಕೆ-ಮಾಡು. [ ನೊಗ ಮುಂ.
ಆರು : ( ವ್ಯ.) ಗಳಿಯ ಸಾಮಾನು.
ಆರೋಗಿಸು : ಉಣ್ಣು.
ಆವಗಂ : ಯಾವಾಗಲೂ.
ಆಳ್ವೇಲಿ ( ಆಳ್ + ಬೇಲಿ ) : ಕಾಪಾ-ಡುವ ಬೇಲಿ

ಇನ : ಸೂರ್ಯ. [ ದಪ್ಪ ಕನ್ನಡಿ.
ಇರ್ಮ್ಮೈಗನ್ನಡಿ(ಇರ್ + ಮೈ + ಕನ್ನಡಿ):

ಉಕ್ಷದ : ಅಗಸೆ ; ಪಾಳ್ಯದ ಅಗಸೆ.
ಉಗು : ಸ್ರವಿಸು, ಕಳಚು, ಚೆಲ್ಲು.
ಉತ್ತಮಾಂಗ ( ಉತ್ತಮ + ಅಂಗ ) : ತಲೆ.
ಉಬ್ಬೆಗ : ( ತ್ಸ. ಉದ್ವೇಗ ) ಕಳವಳ.
ಉಮ್ಮಳಿಸು : ಕಳವಳಬಡು, ದುಃಖ ಬಡು.
ಉಯ್ : ಒಯ್ಯು.
ಉರಗೇಂದ್ರ (ಉರಸ್ + ಗ + ಇಂದ್ರ): ಹಾವುಗಳ ಒಡೆಯ ; ಆದಿಶೇಷ.
ಉರವಣಿಸು : ಸಂತಾಪಗೊಳ್ಳು.
ಉರುವ : ಶ್ರೇಷ್ಠ, ಹೆಚ್ಚಿನ. [ಬ್ಬೆರಳು.
ಉಂಗುಟ : ( ತ್ಸ. ಅಂಗುಷ್ಠ ) ಹೆ-

ಊಳಿಡು : ಒದರು, ಕೂಗು, ನರಿ ಕೂಗುವಿಕೆ. ೨ ಗೋಳಾಡು.

ಎಗರು : ನಿಗುರು, ಮೇಲೆ ಹಾರು.
ಎಡೆಗೊಳ್ : ಆಶ್ರಯ ಹೊಂದು.
ಎಳ್ತರ ( ಎತ್ತರ ) : ಏಳಿಗೆ.

ಏಡಿಸು : ಅಣಕಿಸು.

ಒಗ್ಗು ( ಒಳ್ಗು ) : ಗುಂಪು.
ಒಬ್ಬುಳಿಗೂಡಿ : ರಾಶಿಯಾಗಿ.
ಒಯ್ಯನೆ : ಮೆಲ್ಲಗೆ.
ಒಸಗೆ : ಶುಭಕಾರ್ಯ, ಮಂಗಲ, ಕ್ಷೇಮ.
ಒಸೆದು : ಪ್ರಸನ್ನವಾಗಿ, ಸಮಾಧಾನ-ತಾಳಿ.
ಒಳ್ಪು : ಉತ್ತಮತೆ. [ ೨. ಏಕ.
ಒಂದು : ಹೊಂದು, ಒಂದಾಗು.

ಕೆಗ್ಗ ( ವ್ಯ. ) : ಹಳೆಯ ಸುದ್ದಿ ; ಉದ್ದವಾದ ಹರಟೆ.
ಕಡಿ : ( ಚಳಿ ) ಬಾಧೆಗೊಳಿಸು, ಕೊರೆ.
ಕಬಳ : ತುತ್ತು.
ಕಬ್ಬ : ( ತ್ಸ. ) ಕಾವ್ಯ
ಕಬ್ಬಿಗ ( ಕಬ್ಬ + ಇಗ ) : ಕವಿ.
ಕಮನೀಯ : ಮನೋಹರ.
ಕರ + ಪಲ್ಲವ : ಚಿಗುರಿನಂಥ ಅಂಗೈ.
ಕರೆ : ದಂಡೆ. ೨. ಅಂಚು. ೩. ಆಹ್ವಾನಿಸು.
ಕರ್ಮಕಾರ : ಕೆಲಸಗಾರ. ೨. ಕಮ್ಮಾರ.
ಕಳ್ಕನೆ : ಅಕಸ್ಮಾತ್, ಒಮ್ಮೆಲೆ. [ಶಿವ.
ಕಂತು + ಹರ : ಕಾಮನನ್ನು ಕೊಂದವ,
ಕಾನ್ಫರೆನ್ಸ್ : ಪರಿಷತ್ತು.
ಕಾವ್ಯಾಂಬರ ( ಕಾವ್ಯ + ಅಂಬರ ) : ಕಾವ್ಯವೆಂಬ ಆಕಾಶ. [ ಪ್ರವಾಹ.
ಕಾಳ್ಪುರ : ಮಹಾಪೂರ, ದೊಡ್ಡ
ಕಾಂಗು : ದಟ್ಟ ಕಪ್ಪು. ದಟ್ಟ ನೀಲ.
ಕಾಂತಾರ : ಅಡವಿ.
ಕಿಂ + ಕರ್ತವ್ಯ + ಮೂಢ : ಏನು ಮಾಡತಕ್ಕದ್ದೆಂಬುದು ತಿಳಿಯದವ.
ಕುಕ್ಕೆ : ಬುಟ್ಟಿ.
ಕುಟಿಲ : ಕೊಂಕಾದ.
ಕುಹರ : ರಂಧ್ರ, ತೂತು.

ಕುಳಿರ್ : ಚಳಿ, ಹಿಮ
ಕುಂದ : ಮಲ್ಲಿಗೆ, ಸಣ್ಣಮಲ್ಲಿಗೆ.
ಕೂಜಿಸು : (ಹಕ್ಕಿ) ಉಲಿ.
ಕೂರ್ಪು : ಪ್ರೀತಿ.
ಕೃತ್ಯೆ : ಸಂಹಾರದೇವತೆ.
ಕೆರ್ಪು : ಕೆರವು.
ಕೆಳೆ : ಗೆಳೆತನ.
ಕೇತನ : ಪತಾಕೆ.
ಕೈವಾರ : ಸಹಾಯ, ಸಹಾಯಕ.
ಕೊನರು : ಚಿಗುರು, ಹುರುಪುಗೊಳ್ಳು
ಕೋಳುವಿಡಿ : ಸೆರೆಹಿಡಿ.
ಕೌಂಗು : (ತ್ಸ. ಕ್ರಮುಕ) ಅಡಕೆ.

ಖಾತಿ : ಸಿಟ್ಟು, ಅಸಮಾಧಾನ.
ಖೇಚರ : ಆಕಾಶದಲ್ಲಿ ಚರಿಸುವವ, ದೇವತೆ. ೨. ಖಚರ ಎಂಬ ವಿಮಾನಚಾರಿ ಪಂಗಡ. (ಜೈ.)

ಗೆಜರು : ಗರ್ಜಿಸು, ಜಬರುಮಾಡು.
ಗಿರೀಶ (ಗಿರಿ+ಈಶ) : ಪರ್ವತದ ಒಡೆಯ, ಶಿವ. [ಪಾತ್ರೆ.
ಗುಡಾಣ : ಹರವಿ, ಮಣ್ಣಿನ ದೊಡ್ಡ-
ಗುತ್ತಿಗೆ (ಮಂ.) : ಸಿಂದಿ ಅಂಗಡಿ.
ಗುಬ್ಬಳಿಸು : ಧ್ವನಿಮಾಡು, ಕೂಗು.
ಗೋವಳ : (ತ್ಸ.) ಗೋಪಾಲ.

ಘಟೆ : (ಆನೆಗಳ) ಹಿಂಡು.
ಘೀಳಿಡು : (ಆನೆ) ಕೂಗು.
ಘೂರ್ಮಿಸು : ಶಬ್ದಮಾಡು, ಗರ್ಜಿಸು.

ಚಿಂತೋದಧಿ : (ಚಿಂತಾ+ಉದಕ+ಧಿ) : ಚಿಂತೆಯ ಸಮುದ್ರ.
ಚೂತ+ವನ : ಮಾವಿನ ತೋಪು.

ಜಕ್ಕಣಿ : (ತ್ಸ.) ಯಕ್ಷಿಣಿ.
ಜಗುಳು : ಜಾರು.
ಜವ : ಶೀಘ್ರ. ೨. (ತ್ಸ.) ಯಮ.
ಜವನಿಕೆ : ತೆರೆ, ಪರದೆ.
ಜಿತ : ಗೆಲ್ಲಲ್ಪಟ್ಟ.
ಜೀತಾರ : ಗೆದ್ದವ.
ಜೀವಡೆ : ಹೆದೆಯೇರಿಸು,
ಜೊಂಪ : ದಟ್ಟಣೆ, ಗುಂಪು.

ಠೌಳಿಗ : ಮೋಸಗಾರ.

ತಡಿ : (ತ್ಸ. ತಟೀ) ದಂಡೆ.
ತಮಸ್ತಾಪ : ಕತ್ತಲೆಗೆ ತೊಂದರೆ [ನುರ.
ತಮಾಲ : ಹೊಂಗೆಮರ, ಹುಲಗಲ
ತರಿಸಂದು : ನಿರ್ಣಯಿಸಿ.
ತಲ್ಲಣ : ಅಸಮಾಧಾನ, ಕಳವಳ.
ತವಕ : ಸಂಭ್ರಮ, ಆತುರ.
ತವಿಸು : ನಾಶಗೊಳಿಸು.
ತಿರಿ+ತರು : ಅಡ್ಡಾಡಿ ತರು.
ತುಡುಕು : ತೀವ್ರಹಿಡಿ, ಬೆನ್ನುಹತ್ತು.
ತೋರ : (ತ್ಸ. ಸ್ಥೂಲ) ದೊಡ್ಡ, ದಪ್ಪ.

ದಗೆ : ಉರಿ, ದಾಹ.
ದಲ್ : ನಿಶ್ಚಯ.
ದಹನ : ಉರಿ. ೨. ಸುಡುವಿಕೆ.
ದಿನಪ+ಸುತ : ಹಗಲಿನ ಒಡೆಯ (ಸೂರ್ಯ)ನ ಮಗ, ಕರ್ಣ.
ದೂರಗನ್ನಡಿ : ದೂರದ್ದನ್ನು ನೋಡುವ ಕಾಜು, ದುರ್ಬೀನು.
ದೃಗುಜಲ (ದೃಕ್+ಜಲ) : ಕಣ್ಣೀರು.

ದೇವನಿಮ್ನಗೆ : ( ನಿಮ್ನ+ಗ : ಕೆಳಗೆ ಹೋಗುವದು, ನದಿ ) ದೇವನದಿ, ಗಂಗಾನದಿ.

ದೊಣೆ : ಬತ್ತಳಿಕೆ.

ದ್ವಿಪೌಘ [ ದ್ವಿ+ಪ ( ಎರಡರಿಂದ ಕುಡಿಯುವದು )+ಓಘ ] : ಆನೆಗಳ ಗುಂಪು.

ಧಾವಳ್ಯ : ಬೆಳುಪು.

ಧೀಂಕಿಡು : ಹಾರು.

ಧುರಂ+ಧರ : ನೊಗವನ್ನು ಧರಿಸಿದವ, ಮುಂದಾಳು.

ನಕ್ಷೆ : ನಕಾಶ.

ನಗ+ನಿಕಾಯ : ( ನ+ಗ : ನಡೆ ಇಲ್ಲದ್ದು ) ಪರ್ವತಸಮೂಹ

ನಲ್ನುಡಿ : ಪ್ರೀತಿಯ ಮಾತು, ಒಳ್ಳೆಯ ಮಾತು.

ನಲ್ವಗೆ ( ನಲ್+ಬಗೆ ) : ಒಳ್ಳೆಯ ಮನಸ್ಸು, ಒಳ್ಳೆಯ ಭಾವನೆ.

ನಂಟು : ಆಪ್ತತ್ವ.

ನಿಕ್ಷೇಪ : ಹೂತಿಟ್ಟ ಹಣ.

ನಿಚ್ಚ : ( ತ್ಸ. ನಿತ್ಯ ) ದಿನಾಲು.

ನಿಟ್ಟೆಲುವು : ಉದ್ದ ಎಲುವು.

ನಿರುಕ್ತ : ವೇದ ಶಬ್ದಗಳ ನಿರ್ವಚನ ( ಉತ್ಪತ್ತಿ ) ತೋರಿಸಿದ ಗ್ರಂಥ.

ನಿರ್ಘೃಣ ನಿರ್ದಯ.

ನಿರ್ವಾಣ : ಮೋಕ್ಷ, ಚಿರಶಾಂತಿ.

ನಿವಹ : ಸಮೂಹ

ನೀವು : ಶೀಡು, ತಿಕ್ಕು.

ನೆಲವೆಣ್ಣ ಮಗಳು : ನೆಲವೆಂಬ ಸ್ತ್ರೀಯ ಮಗಳು ಎಂದರೆ ಭೂಮಿಯಿಂದ ಹುಟ್ಟಿದಾಕೆ, ಸೀತೆ.

ನೇಪಥ್ಯ : ತೆರೆ, ಪರದೆ. ೨. ವೇಷ-ಧರಿಸುವಿಕೆ.

ಪಟುಭಟ : ಸಮರ್ಥ ಯೋಧ.

ಪಣ್ಣು : ಸಜ್ಜಾಗು. ೨. ಹಣ್ಣಾಗು. ೩. ಹಣ್ಣು.

ಪದಾತಿ : ಕಾಲಾಳು.

ಪನ್ನಗ ( ಪದ್+ನ+ಗ ) : ಹಾವು.

ಪರಿಕಿಸು : ಪರೀಕ್ಷಿಸು.

ಪಲ್ಲಟ : ವ್ಯತ್ಯಾಸ, ಬದಲು.

ಪವಡಿಸು : ಮಲಗು.

ಪಳಗು : ಈಲಾಗು.

ಪಾಂಗು : ರೀತಿ.

ಪಿಡಿಯಾಳ್ : ಸೆರೆಸಿಕ್ಕವ.

ಪಿತೃವನ : ಸ್ಮಶಾನ.

ಪಿನಲ್‌ಕೋಡ್ : ಅಪರಾಧಕ್ಕೆ ಶಿಕ್ಷೆ ಹೇಳುವ ಕಾಯದೆ.

ಪಿರಿಕಿತನ ( ಮ್ಯ. ) : ಪುಕ್ಕತನ.

ಪಿಶಂಗ : ನಸುಗೆಂಪು, ಹೊಂಬಣ್ಣ.

ಪುದುವಾಳ್ : ( ಪುದು+ಬಾಳ್ ) : ಕೂಡಿ ಜೀವಿಸು.

ಪುರಂದರ : ಇಂದ್ರ.

ಪೆರೆ : ಚಂದ್ರ.

ಪೆರೆ+ನೊಸಲ : ಹಣೆಯಲ್ಲಿ ಚಂದ್ರ-ನುಳ್ಳವ, ಶಿವ. [ ಮಹಿಮೆ.

ಪೆಂಪು ( ಪಿರಿದು+ಉ ) : ದೊಡ್ಡತನ,

ಪೊಡೆಮಡು : ನಮಸ್ಕಾರಮಾಡು.

ಪೊರ್ದು : ಹೊಂದು.

ಪ್ರದೋಷಕಾಲ : ಮುಚ್ಚಂಜೆ.

ಪ್ರವಾದ ರೂಢಿಯಮಾತು, ನಡೆದು ಬಂದ ಮಾತು.

ಪ್ರಸೂನ : ಹೂ.

ಪ್ರಾಚೀ+ಕೋಕಿಲ : ಪೂರ್ವದ (ಪೂರ್ವ ಭೂಖಂಡದ ) ಕೋಕಿಲೆ.

ಪ್ರಾಸಾದಿಕ : ಅನುಗ್ರಹದಿಂದ ದೊರೆತ

ಬರಿದೆ : ವ್ಯರ್ಥವಾಗಿ.
ಬರ್ದಿಲ : ಸ್ವರ್ಗ.
ಬಳಸು : ಸುತ್ತುವರಿ, ಸುತ್ತುಗಟ್ಟು.
ಬಂಡು : ಮಕರಂದ.
ಬಾಡ : (ತ್ಸ. ವಾಟ) ಹಳ್ಳಿ.
ಬಾಯ್ದೆರೆ : ತುಟಿ.
ಬಾಸ : ವಾಸನೆ.
ಬಾಳು : ಕತ್ತಿ.
ಬಿತ್ತರಿಸು : [ಬಿತ್ತರ (ತ್ಸ. ವಿಸ್ತಾರ)+ ಇಸು.] ವಿಸ್ತಾರವಾಗು.
ಬಿಸು + ಸುಯ್ : ಬಿಸಿ ಉಸಿರುಬಿಡು.
ಬೆಸಗೆಯ್ಸಿಕೊಳ್ಳು ಅಪ್ಪಣೆಯಂತೆ ನಡೆಸಿಕೊಳ್ಳು, ಕೆಲಸಮಾಡಿಸಿಕೊಳ್ಳು.
ಬೆಳರ್ಮಾಡು : ಬೆಳ್ಳಗೆ ಮಾಡು.
ಬೇಗುದಿಗೊಳ್ : ಬಹಳ ಕಳವಳಬಡು.
ಬೈರಿಗೆ : ತೂತುಕೊರೆಯುವ (ಬಡಗಿಯ) ಆಯುಧ,
ಭವ : ಸಂಸಾರ.
ಭೋಗಿ : ಹಾವು. ೨. ಸುಖಿ.
ಭೌತಶಾಸ್ತ್ರ : ವಿಜ್ಞಾನ (ಸಾಯನ್ಸ್.)
ಮಣಿಗಂಟು : ಮುಂಗೈ.
ಮರಾಳ : ಹಂಸ.
ಮಲೆ : ಗುಡ್ಡ.
ಮಲ್ಲಿನಾಥಿ : ಟೀಕೆ (ಮಲ್ಲಿನಾಥ : ಒಬ್ಬ ಪ್ರಸಿದ್ಧ ಟೀಕಾಕಾರ).
ಮಲ್ಲು : ನಯಬಟ್ಟೆ (ಮಲಮಲು).
ಮಶಕ : ನೊಣ.
ಮಸಣ : (ತ್ಸ.) ಸ್ಮಶಾನ.
ಮಂಡನಾರ್ಹ : ಅಲಂಕಾರಕ್ಕೆ ತಕ್ಕ.
ಮಿಷ : ನಿಮಿತ್ತ.
ಮುಗುಳು : ಮೊಗ್ಗೆ.
ಮುನ್ನೀರ್ : ಸಮುದ್ರ.
ಮುಳಿಸು : ಸಿಟ್ಟು.
ಮೂಟಿ (ವ್ಯ.) : ಮೊಟ್ಟೆ, ಗಂಟು.
ಮೂರ್ಧಾಭಿಷಿಕ್ತ (ಮೂರ್ಧನ್+ಅಭಿ-ಷಿಕ್ತ) : ತಲೆಯ ಮೇಲೆ ಪಟ್ಟಾ-ಭಿಷೇಕ ಹೊಂದಿದವ.
ಮೈಗರೆ : ಮೈಮರೆಯಿಸು, ಅಡಗು.

ರಕ್ಷಾ : ಭಸ್ಮ. ೨. ರಕ್ಷಣೆ.
ರಘು+ಕುಲ+ಉದ್ವಹ : ರಘು-ಕುಲಕ್ಕೆ ಮೇಲ್ಮೆ ತಂದವ.
ರಜ : ಹುಡಿ, ಕಣ.
ರದ, ರದನ : ಹಲ್ಲು.
ರಾಜೀವ ಸಖ : ಕಮಲಮಿತ್ರ, ಸೂರ್ಯ.
ರೋಡಿಸು : ಅಣಕಿಸು, ಅಪಹಾಸ-ಮಾಡು.

ಲಹರಿ : ತೆರೆ, ಅಲೆ.
ಲಂಚ್ (ಇಂ.) : ಉಪಾಹಾರ [ಹಕ್ಕಿ.
ಲಾವಗೆ : (ತ್ಸ. ಲಾವಕ) ಒಂದು
ಲೆಕ್ಕಿಗ (ಲೆಕ್ಕ+ಇಗ) : ಗಣಿತಜ್ಞ.
ಲೆಂಕ : ಮಗ, ಸೇವಕ.

ವರೂಥ : ರಥ.
ವಲ್ಲರಿ : ಬಳ್ಳಿ.
ವಾರುಣಿ : ವರುಣನದಿಕ್ಕು, ಪಶ್ಚಿಮ.
ವಿಚಕಿಲ : ಮಲ್ಲಿಗೆ.
ವಿದಾರಿಸು : ಹರಿ, ಸೀಳು.
ವಿಪಿನ : ಅಡವಿ.
ವಿಹಾರ : ಬೌದ್ಧ ಮಠ. ೨. ಆಟ.
ವಿಷ+ಉಚ್ಛ+ದಂಶನ : (ವಿಷದ-ಬಾಲವುಳ್ಳ) ಚೇಳಿನ ಕಡಿತ.

ಶಿಖಿ : ಶಿಖೆ ( ಜುಟ್ಟು ) ಉಳ್ಳದ್ದು, ನವಿಲು. ೨. ಬ್ರಾಹ್ಮಣ. ೩. ಅಗ್ನಿ.
ಶಿರೋರುಹ ( ಶಿರಸ್+ರುಹ ) : ತಲೆಯಲ್ಲಿ ಹುಟ್ಟಿದ್ದು, ಕೂದಲು.
ಶ್ರೇಣಿ : ಸಾಲು.

ಷಟ್ಕರ್ಣಿ : ಆರು ಕಿವಿಗೆ ಬಿದ್ದದ್ದು, (ಮೂರನೆಯವನು ಕೇಳಿದ್ದು).

ಸಬಳ : ಒಂದು ತರದ ಆಯುಧ.
ಸಮಕಟ್ಟು : ಸಿದ್ಧಪಡಿಸು, ರಚಿಸು.
ಸಮಕೊಳಿಸು : ಸರಿಪಡಿಸು, ಅನುಕೂಲಮಾಡು.
ಸಮನಿಸು : ಉಂಟಾಗು.
ಸರಸಿಜಭವ : ಕಮಲ ( ಸರಸಿ+ಜ : ಸರೋವರದಲ್ಲಿ ಹುಟ್ಟಿದ್ದು )ದಲ್ಲಿ ಹುಟ್ಟಿದವ, ಬ್ರಹ್ಮ. [ ಸೂರ್ಯ.
ಸಹಸ್ರ+ರಶ್ಮಿ : ಸಾವಿರ ಕಿರಣವುಳ್ಳವ,
ಸಂಶ್ರಯ ಆಶ್ರಯ.
ಸಂಹೃತ : ಕೊಲ್ಲಲ್ಪಟ್ಟ.
ಸಿಗುರು : ಸಿಬುರು.
ಸಿವಿಲ್‌ಕೋಡ್ ( ಇಂ.) : ಸಾಮಾನ್ಯತರದ ಅಪರಾಧಗಳಿಗೆ ಶಿಕ್ಷೆಹೇಳುವ ಕಾಯಿದೆ. [ ಅತ್ಯಂತವಾಗಿ.
ಸುತರಾಂ (ಸಂಸ್ಕೃತ) : ಖಂಡಿತವಾಗಿ,
ಸುರುಳಿಸು : ಸುರುಳಿಮಾಡು, ಮುದುಡಿಸು.
ಸೂಚ್ಯಾಕಾರ ( ಸೂಚಿ+ಆಕಾರ ) : ಸೂಜಿಯ ಆಕಾರ, ಸೀಳ.
ಸೂನು : ಮಗ.
ಸೈಪು : ಪುಣ್ಯ.
ಸೈವಡು : ಅನುಮೋದಿಸು, ಸೈ ಅನ್ನು.
ಸೊನ್ನೆಗಾರ ( ದ್ಭ.) : ಸ್ವರ್ಣ (ಸೊನ್ನೆ) +ಕಾರ, ಅಕ್ಕಸಾಲೆ.
ಸೋರ್ಮುಡಿ : ಜೋಲುಮುಡಿ,-ಹೆಳಲು.
ಸ್ಥಾನಪತಿ ವಿಶ್ವವಿದ್ಯಾಲಯದ ಚಾನ್ಸಲರ್.

ಹಯ : ಕುದುರೆ. [ ಹರಿಸುವಿಕೆ
ಹರಣ : ( ತ್ಸ. ) ಪ್ರಾಣ. ೨. ಅಪ-
ಹರವರಿಸು : ಇಂಬುಗೊಳ್ಳು.
ಹರಹಿಕೊಳು : ಹರಡಿಕೊಳ್ಳು (ಜಾಹೀರುಮಾಡು). [ ಕಾರ್ಯ.
ಹರಿಬ : ನಿರ್ವಾಹ, ತೀರಿಸಬೇಕಾದ
ಹರ್ಮ್ಯ ಉಪ್ಪರಿಗೆ.
ಹಸು ( ವಿಕೃತ ) : ಹಸಿವು.
ಹಸುಗೆ : ಹಂಚುವಿಕೆ.
ಹೆಜ್ಜೊಡರ್ ( ಪಿರಿದು+ಸೊಡರ್ ) : ದೊಡ್ಡ ದೀಪ. [ ವೆಂದು ತಿಳಿ.
ಹೇವರಿಸು : ನಿಷೇಧಿಸು, ಸರಿಯಲ್ಲ-
ಹೊಗಲು : ಪ್ರವೇಶ, ಸೇರುವಿಕೆ.
ಹೊಡೆಗಿಚ್ಚು ಉಗ್ರವಾದ ಕಿಚ್ಚು.
ಹೊರೆ : ರಕ್ಷಿಸು. ೨. ಸಮೀಪ. ೩. ಭಾರ.
ಹೊಸಕು ತಿಕ್ಕು.
ಹೋಂ ರೂಲ್ ಲೀಗ್ ( ಇಂ. ) : ಸ್ವರಾಜ್ಯ ಸಂಘ.

೨

ಈ "ಸೊಗಸಿನ ಓದಿ" ನ ಮಾಲೆಯ ಪುಸ್ತಕಗಳನ್ನು ಸಿದ್ಧಪಡಿಸಿ ಕೊಟ್ಟ ಸಂಪಾದಕ ಮಂಡಲಕ್ಕೆ ನಾವು ಋಣಿಯಾಗಿದ್ದೇವೆ. ಚಿತ್ರಕಾರರು ಸುಂದರವಾದ ಚಿತ್ರಗಳನ್ನೂ, ಪಡಿಯಚ್ಚುಗಾರರು ಅವುಗಳ ಪಡಿಯಚ್ಚು-ಗಳನ್ನೂ ಸಕಾಲಕ್ಕೆ ಒದಗಿಸಿದರು; ಮುದ್ರಣಾಲಯದ ಒಡೆಯರು ಕಾಲಕ್ಕೆ ಮುದ್ರಿಸಿ ಕೊಟ್ಟರು. ಇವರಿಗೆಲ್ಲ ನಾವು ಅತ್ಯಂತ ಕೃತಜ್ಞ-ರಾಗಿದ್ದೇವೆ.

ನಮ್ಮ ನಾಡಿನ ಬಾಲಕರು ಈ ಪುಸ್ತಕಗಳನ್ನು ಓದತೊಡಗಿದಾಗ ನಮ್ಮ ಶ್ರಮ, ವ್ಯಯ ಇವುಗಳನ್ನು ನಾವು ಮರೆತುಬಿಡುತ್ತೇವೆ.

ಧಾರವಾಡ,
೧-೯-೧೯೪೨.

ಪ್ರಕಾಶಕರು.

